

ಕರ್ನಾಟಕ ಸರ್ಕಾರ

# ಸಿರಿ ಕನ್ನಡ

## ಪ್ರಥಮ ಭಾಷಾ ಕನ್ನಡ ಪಠ್ಯಪುಸ್ತಕ






## ಏಳನೆಯ ತರಗತಿ

### ಮೊದಲನೆಯ ಮತ್ತು ಎರಡನೆಯ ಸೆಮಿಸ್ಟರ್

೨೦೧೫

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)
೧೦೦ ಅಡಿ ವರ್ತುಲ ರಸ್ತೆ, ಬನಶಂಕರಿ ೩ನೆಯ ಹಂತ
ಬೆಂಗಳೂರು-೫೬೦೦೮೫

# ಪಠ್ಯಪುಸ್ತಕ ರಚನಾ ಸಮಿತಿ

**ಅಧ್ಯಕ್ಷರು :**

**ಡಾ. ಸತ್ಯನಾರಾಯಣ ಮಲ್ಲಿಪಟ್ಟಣ,** ಪ್ರಾಂಶುಪಾಲರು, ವಿಶ್ವವಿದ್ಯಾನಿಲಯಕಾಲೇಜು, ಮಂಗಳೂರು ೫೭೫ ೦೦೧

**ಸದಸ್ಯರು :**

**ಶ್ರೀ ರಾಮಚಂದ್ರ ಸಿದ್ರಾಮಪ್ಪ ವಾಡೇದ,** ಉಪನ್ಯಾಸಕರು, ಅಂಜುಮಾನ್ ಪ.ಪೂ. ಕಾಲೇಜು, ಸಿಂಧಗಿ, ವಿಜಯಾಪುರ ಜಿಲ್ಲೆ.

**ಶ್ರೀ ಆರ್.ಡಿ.ರವೀಂದ್ರ,** ಸಮನ್ವಯಾಧಿಕಾರಿ (ಪ್ರಭಾರಿ), ಕ್ಷೇತ್ರ ಸಂಪನ್ಮೂಲ ಕೇಂದ್ರ, ಕೊಪ್ಪ ತಾ., ಚಿಕ್ಕಮಗಳೂರು ಜಿಲ್ಲೆ.

**ಶ್ರೀ ಸೋಮಶೇಖರ ಬಾಬು ಹಲಸಗಿ,** ಕ್ಷೇತ್ರ ಸಂಪನ್ಮೂಲ ವ್ಯಕ್ತಿ, ಬಿ.ಇ.ಓ.ಕಛೇರಿ,ಬೈಲಹೊಂಗಲ, ಬೆಳಗಾವಿ ಜಿಲ್ಲೆ.

**ಶ್ರೀಮತಿ ಕೆ. ವಿಜಯಲಕ್ಷ್ಮೀದೇವಿ,** ನಿವೃತ್ತ ಶಿಕ್ಷಕರು, ನಾಗದೇವನಹಳ್ಳಿ, ಕೆಂಗೇರಿ ಹೋಬಳಿ, ಬೆಂಗಳೂರು ೫೬.

**ಶ್ರೀ ನೀಲಾವರ ಸುರೇಂದ್ರ ಅಡಿಗ,** ಕುವೆಂಪು ಶತಮಾನೋತ್ಸವ ಶಾಲೆ, ತೆಕ್ಕಟ್ಟೆ, ಕುಂದಾಪುರ ತಾ., ಉಡುಪಿ ಜಿಲ್ಲೆ.

**ಪರಿಶೀಲಕರು :**

**ಡಾ ಪದ್ಮಿನಿ ನಾಗರಾಜ್ ಎಸ್ ಪಿ,** ಉಪಪ್ರಾಂಶುಪಾಲರು, ಗುಪ್ತಕಾಲೇಜು, ಹೊಸಕೆರೆಹಳ್ಳಿ, ಬೆಂಗಳೂರು ೮೫.

**ಕಲಾವಿದರು :**

**ಶ್ರೀ ಜಾನ್ ಚಂದ್ರನ್,** ಚಿತ್ರಕಲಾಶಿಕ್ಷಕರು, ಸಂತ ಅಲೋಶಿಯಸ್ ಪ್ರೌಢಶಾಲೆ, ಕೊಡಿಯಾಲ ಬೈಲ್, ಮಂಗಳೂರು

**ಸಂಪಾದಕ ಮಂಡಳಿ ಸದಸ್ಯರು:**

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ , ಬೆಂಗಳೂರು–೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೩೭, ೧೭ನೇ ಕ್ರಾಸ್, ಜೆ.ಪಿ. ನಗರ, ಬೆಂಗಳೂರು–೭೮

**ಪ್ರೊ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ಜ್ಞಾನಶಕ್ತಿ ಆವರಣ, ತೊರವಿ, ವಿಜಯಾಪುರ – ೫೮೬೧೦೮.

**ಮುಖ್ಯ ಸಂಯೋಜಕರು:**

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯಕ್ರಮ ಪರಿಷ್ಕರಣೆ ಮತ್ತು ಪಠ್ಯ ಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

**ಸಲಹೆ ಮತ್ತು ಮಾರ್ಗದರ್ಶನ:**

**ಶ್ರೀ ನಾಗೇಂದ್ರಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫.

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೫೬೦ ೦೮೫

**ಕಾರ್ಯಕ್ರಮ ಸಂಯೋಜಕರು:**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು – ೮೫.

# ಮುನ್ನುಡಿ

೨೦೦೫ನೆಯ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೆಯ ಸಾಲಿನಿಂದ ಒಂದನೆಯ ತರಗತಿಯಿಂದ ಹತ್ತನೆಯ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೆಯ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೫ ರಿಂದ ೧೦ ನೆಯ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಆವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಆವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನ ಸಂಯೋಜನೆ
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಆವಶ್ಯಕ ಜೀವನಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು, ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗೂ ಸಂವಹನ ಕೌಶಲಗಳ ಸಂವರ್ಧನೆಯೇ ಕಲಿಕೆಯ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ವೃದ್ಧಿಮಾಡುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಾಗಿದೆ.



**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯಪುಸ್ತಕ ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

## ಓದಿಗೆ ಮುನ್ನ...

ಏಳನೆಯ ತರಗತಿ ಕನ್ನಡ ಪ್ರಥಮ ಭಾಷಾ ಪಠ್ಯಪುಸ್ತಕ ನಿಮ್ಮ ಮುಂದಿದೆ. ಪಠ್ಯಪುಸ್ತಕದ ಸ್ವರೂಪ ಮತ್ತು ಉದ್ದೇಶವನ್ನು ಕುರಿತ ಕರ್ನಾಟಕ ಪಠ್ಯಪುಸ್ತಕ ಸಂಘ(ರಿ) ನೀಡಿರುವ ಮಾರ್ಗದರ್ಶಿ ಸೂತ್ರಗಳು ಹಾಗೂ ರಾಷ್ಟ್ರೀಯ ಶಿಕ್ಷಣ ನೀತಿ ೨೦೦೫ರ ಆಶೋತ್ತರಗಳನ್ನು ಗಮನದಲ್ಲಿಟ್ಟು ಈ ಪಠ್ಯಪುಸ್ತಕವನ್ನು ರೂಪಿಸಲಾಗಿದೆ. ಏಳನೆಯ ತರಗತಿಯಲ್ಲಿ ಕನ್ನಡವನ್ನು ಪ್ರಥಮಭಾಷೆಯಾಗಿ ಕಲಿಯುವ ವಿದ್ಯಾರ್ಥಿಗಳ ಕಲಿಕಾಸಾಮರ್ಥ್ಯವನ್ನು ಗಮನದಲ್ಲಿಟ್ಟು ಪಾಠಗಳನ್ನು ರೂಪಿಸಲಾಗಿದೆ. ಹೀಗೆ ರೂಪಿಸುವಾಗ ಪ್ರತಿ ಪಾಠವನ್ನು ಸಾಮರ್ಥ್ಯ ಮತ್ತು ಕ್ಷೇತ್ರವನ್ನು ಗುರುತಿಸಿಕೊಂಡು ಅದಕ್ಕೆ ಹೊಂದುವಂಥ ಪಠ್ಯಗಳನ್ನು ಆರಿಸಲಾಗಿದೆ.. ಭಾಷಾ ಕೌಶಲಗಳು ಮತ್ತು ಅವುಗಳಿಗೆ ಪೂರಕವಾಗುವ ಅಭ್ಯಾಸಗಳನ್ನು ನೀಡಲಾಗಿದೆ. ಕ್ರಿಯಾತ್ಮಕ ವ್ಯಾಕರಣಕ್ಕೆ ಹೆಚ್ಚಿನ ಒತ್ತು ನೀಡಲಾಗಿದೆ.

ಇಲ್ಲಿಯ ಪಾಠಗಳನ್ನು ಗಮನಿಸಿದಲ್ಲಿ ಕನ್ನಡದ ಮನಸ್ಸುಗಳು ವ್ಯವಹರಿಸುವ ರೀತಿಯನ್ನು ಕಾಣಬಹುದು. ಕನ್ನಡ ಸಂಸ್ಕೃತಿಯ, ವಿಶೇಷವಾಗಿ ಗ್ರಾಮೀಣ ಸಂಸ್ಕೃತಿಯ ಪರಿಚಯ ಮತ್ತು ಚಿಂತನೆ, ಪರಿಸರದ ಬಗೆಗೆ ಕಾಳಜಿ ವಿದ್ಯಾರ್ಥಿಗಳಲ್ಲಿ ಮೂಡಬೇಕು, ಇದರೊಂದಿಗೆ ದೇಶ ಮತ್ತು ಭಾಷೆಗಳನ್ನು ಕುರಿತ ಕಾಳಜಿಯೂ ಅವರಲ್ಲಿ ಮೂಡಬೇಕೆಂಬ ಆಶಯವೂ ಇದೆ. ರಾಮಾಯಣ ಮಹಾಭಾರತಗಳಂತ ಕಾವ್ಯಗಳ ಆಧುನಿಕ ಓದು, ಕಲೆ, ಸಂಸ್ಕೃತಿ, ಸ್ವಸ್ಥ ಸಮಾಜ ನಿರ್ಮಾಣಕ್ಕಾಗಿ ದುಡಿದ ಮಹನೀಯರ ಜೀವನ ಗಾಥೆಗಳನ್ನು ಅಳವಡಿಸಲಾಗಿದೆ. ವಿದ್ಯಾರ್ಥಿಗಳ ಕಲಿಕೆಗೆ ಪೂರಕವಾಗುವಂತೆ ಸೇತುಪಾಠ, ಪ್ರೇರಣಾಪಾಠ ಮತ್ತು ಪೂರಕ ಪಾಠಗಳನ್ನು ನೀಡಲಾಗಿದೆ. ಇವುಗಳನ್ನು ಪಠ್ಯದಿಂದ ಹೊರಗಿಡದೆ ಅದರ ಭಾಗವಾಗಿಯೇ ಇದನ್ನು ಪರಿಗಣಿಸಬೇಕೆಂಬ ಉದ್ದೇಶವಿದೆ.



ಈ ಪಠ್ಯಪುಸ್ತಕ ಕೇವಲ ಪಠ್ಯಪುಸ್ತಕ ರಚನಾ ಸಮಿತಿಯ ಪುಸ್ತಕವಲ್ಲ. ಇದು ಬಹು ಜನ ಚಿಂತನೆಯ ಸಂಘಟಿತ ರೂಪ. ಸಮಿತಿ ಸಿದ್ಧಪಡಿಸಿದ ಪುಸ್ತಕವನ್ನು ರಾಜ್ಯದ ವಿವಿಧ ಡಯಟ್‌ಗಳ ಮೂಲಕ ಆ ಕ್ಷೇತ್ರದಲ್ಲಿರುವ ಅಧ್ಯಾಪಕರು ಸೂಕ್ಷ್ಮವಾಗಿ ಪರಿಶೀಲಿಸಿ ತಮ್ಮ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಅವರ ಸೂಚನೆಗಳನ್ನು ಅಳವಡಿಸಲು ಪ್ರಯತ್ನಿಸಲಾಗಿದೆ. ಅವರಿಗೆಲ್ಲ ನಮ್ಮ ಕೃತಜ್ಞತೆಗಳು. ಸಂಪಾದಕ ಮಂಡಳಿಯ ಸದಸ್ಯರು ಪ್ರತಿಯೊಂದು ಪಾಠವನ್ನು ಅವಲೋಕಿಸಿ ತಮ್ಮ ತಜ್ಞಸಲಹೆ ನೀಡಿದ್ದಾರೆ. ಈ ಸದಸ್ಯರಿಗೆ ನಮನಗಳು. ಕರ್ನಾಟಕ ಪಠ್ಯಪುಸ್ತಕ ಸಂಘ(ರಿ) ಇಂಥದೊಂದು ಜವಾಬ್ದಾರಿಯನ್ನು ನಮಗೆ ನೀಡಿದೆ. ಸಂಘದ ವ್ಯವಸ್ಥಾಪಕ ನಿರ್ದೇಶಕರು, ಈ ಯೋಜನೆಯ ಸಂಯೋಜಕರಾದ ಡಾ ಮೂಡಂಬಡಿತ್ತಾಯ, ಸಂಘದ ಹಿರಿಯ ಸಹಾಯಕ ನಿರ್ದೇಶಕರಾದ ಶ್ರೀ ಪಾಂಡುರಂಗ ಎಲ್ಲ ಹಂತಗಳಲ್ಲಿ ನಮ್ಮೊಡನಿದ್ದು ಸೂಕ್ತ ಮಾರ್ಗದರ್ಶನ ನೀಡಿದ್ದಾರೆ. ಅವರೆಲ್ಲರಿಗೆ ವಂದನೆಗಳು. ಸಮಿತಿಯ ಎಲ್ಲ ಸದಸ್ಯರು, ಪರಿಶೀಲಕರು, ಕಲಾವಿದರು ಮುಕ್ತ ಮನಸ್ಸಿನಿಂದ ಮತ್ತು ಕಾಳಜಿಯಿಂದ ಸಹಕರಿಸಿ ಪುಸ್ತಕವನ್ನು ರೂಪಿಸಿದ್ದಾರೆ. ಅವರೆಲ್ಲರ ಜೊತೆಗೆ ಇದನ್ನು ಅಂದವಾಗಿ ಹೊರತಂದಿರುವ ಮುದ್ರಕರಿಗೂ ವಂದನೆಗಳು.

**ಡಾ. ಸತ್ಯನಾರಾಯಣ ಮಲ್ಲಿಪಟ್ಟಣ**
ಅಧ್ಯಕ್ಷರು, ಸಿರಿ ಕನ್ನಡ–೭
ಪಠ್ಯಪುಸ್ತಕ ರಚನಾಸಮಿತಿ

# ಪರಿವಿಡಿ

## ಸೇತುಪಾಠಗಳು

# (ಅ) ದೇವರೆಲ್ಲಿದ್ದಾನೆ? ಹೇಗಿದ್ದಾನೆ?

–ಎಸ್. ಷಡಕ್ಷರಿ

ನಮ್ಮೆಲ್ಲರನ್ನೂ ಬದುಕಿನಲ್ಲಿ ಒಂದಲ್ಲ ಒಂದು ಸಲ ಕಾಡಿರುವ ಪ್ರಶ್ನೆಗಳು 'ದೇವರಿದ್ದಾನೆಯೇ? ದೇವರೆಲ್ಲಿದ್ದಾನೆ? ಹೇಗೆ ಅವನನ್ನು ಕಾಣುವುದು?', ಈ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಂಡ ಪುಟ್ಟ ಬಾಲಕನ ಅನುಭವಗಳ ಬಗ್ಗೆ ಹಲವಾರು ಕತೆಗಳನ್ನು ಅನೇಕ ಪುಣ್ಯಾತ್ಮರುಗಳು ಬರೆದಿದ್ದಾರೆ. ಅವರೆಲ್ಲರಿಗೂ ವಂದಿಸೋಣ. ಈಗೊಂದು ಕತೆಯನ್ನು ತಿಳಿಯೋಣ.





ಒಂದು ರಾತ್ರಿ ಬಾಲಕನೊಬ್ಬ ತಾಯಿಯನ್ನು 'ಅಮ್ಮಾ! ನನಗೆ ದೇವರನ್ನು ನೋಡಬೇಕೆನಿಸುತ್ತೆ, ದೇವರೆಲ್ಲಿದ್ದಾನೆ?' ಎಂದು ಮೃದುವಾಗಿ ಕೇಳಿದ. ಬುದ್ಧಿವಂತ ತಾಯಿ 'ಮಗು! ದೇವರು ಬಹಳ ದೂರದಲ್ಲಿದ್ದಾನೆ. ಅವನನ್ನು ಕಾಣಲು ತುಂಬಾ ನಡೆಯಬೇಕು', ಎಂದು ಹೇಳಿ ಮಾತು ಮರೆಸಿ ಮಗನನ್ನು ಮಲಗಿಸಿದರು. ಬೆಳಗಿನ ಜಾವದಲ್ಲಿ ಬಾಲಕ ಎದ್ದ. ತಾಯಿ ಇನ್ನೂ ಮಲಗಿದ್ದರು. ಆತ ಒಂದು ಬಿಸ್ಕತ್ ಪೊಟ್ಟಣ ಮತ್ತು ಒಂದು ಬಾಟಲ್ ನೀರನ್ನು ತನ್ನ ಚೀಲಕ್ಕೆ ತುರುಕಿಕೊಂಡು ಮನೆಯಿಂದ ಹೊರಟ. ನಡೆಯುತ್ತಲೇ ಹೋದ. ಮಧ್ಯಾಹ್ನದ ಹೊತ್ತಿಗೆ ತುಂಬ ಬಳಲಿಕೆಯಾಗಿತ್ತು. ಹೊಟ್ಟೆಯೂ ಹಸಿಯುತ್ತಿತ್ತು. ಒಂದು ಪಾರ್ಕ್ ಕಂಡಿತು. ಒಳಗೆ ಹೋಗಿ ಮರದ ಕೆಳಗೆ ಕುಳಿತ. ಹತ್ತಿರದಲ್ಲಿಯೇ ಮುದುಕರೊಬ್ಬರು ಕುಳಿತಿದ್ದರು. ತುಂಬ ಬಳಲಿದಂತೆ ಕಾಣುತ್ತಿದ್ದರು. ಇವನನ್ನು ನೋಡಿ ಮುಗುಳ್ನಕ್ಕರು. ಅವನೂ ಮುಗುಳ್ನಕ್ಕ. ತನ್ನ ಕೈಯಲ್ಲಿದ್ದ ಪೊಟ್ಟಣದಿಂದ ಒಂದು ಬಿಸ್ಕತ್ ತೆಗೆದು ಅವರಿಗೆ ಕೊಟ್ಟ. ಇಬ್ಬರೂ ತಿಂದರು. ನೀರು ಕುಡಿದರು. ಧನ್ಯವಾದ ಹೇಳುವಂತೆ ಅವನನ್ನು ನೋಡಿ ಮುಗುಳ್ನಕ್ಕರು. ನಡೆದು ಬಳಲಿದ್ದ ಬಾಲಕ ಮುದುಕನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ. ಕೆಲವೇ ಕ್ಷಣಗಳಲ್ಲಿ ಗಾಢ ನಿದ್ದೆಯಲ್ಲಿದ್ದ. ಎಚ್ಚರವಾದಾಗ ಸಂಜೆಯಾಗಿತ್ತು. ಎದ್ದು ಕುಳಿತು ಮಿಕ್ಕಿದ್ದ ಬಿಸ್ಕತ್‌ಗಳನ್ನು ಇಬ್ಬರೂ ತಿಂದರು. ಉಳಿದಿದ್ದ ನೀರನ್ನೂ ಕುಡಿದರು.

ಇಬ್ಬರಲ್ಲೂ ಮಾತಿಲ್ಲ, ಕತೆಯಿಲ್ಲ, ಬರೀ ಮುಗುಳ್ನಗೆಗಳು. ಅಷ್ಟರಲ್ಲಿ ಅವನಿಗೆ ತಾಯಿಯ ನೆನಪಾಯಿತು. ಅವರಿಗೆ ಹೇಳದೆ ಬಂದಿದ್ದೇನಲ್ಲ, ಅವರು ಗಾಬರಿಯಾಗಿರುತ್ತಾರೇನೋ ಎನಿಸಿತು. ಎದ್ದು ಚೀಲವನ್ನು ಬೆನ್ನಿಗೇರಿಸಿಕೊಂಡ. ಮುದುಕನ ಕೆನ್ನೆಗೊಂದು ಮುತ್ತನ್ನಿತ್ತು ಟಾ ಟಾ ಎಂದು ಸಂಜ್ಞೆ ಮಾಡಿ ಮನೆಗೆ ಹೊರಟ. ಮುದುಕ ಮತ್ತೆ ಮುಗುಳ್ನಕ್ಕರು.

ಬಾಲಕ ಮನೆ ಮುಟ್ಟುವ ಹೊತ್ತಿಗೆ ಕತ್ತಲಾಗಿತ್ತು. ಮನೆಯಲ್ಲಿ ತಾಯಿ ಅಳುತ್ತಾ ಕುಳಿತಿದ್ದರು. ಇವನನ್ನು ಕಂಡು ಬಾಚಿ ತಬ್ಬಿ, 'ಮಗೂ! ಬೆಳಗಿನಿಂದ ಎಲ್ಲಿ ಹೋಗಿದ್ದೆ? ಎಲ್ಲಾ ಕಡೆಯೂ ನಿನ್ನ ಹುಡುಕಿದೆವು. ನಮಗೆ ತುಂಬಾ ಗಾಬರಿಯಾಗಿತ್ತು', ಎಂದು ಅಳುತ್ತಳುತ್ತಲೇ ಹೇಳಿದರು.

ಆ ಬಾಲಕ 'ಅಮ್ಮಾ! ನಾನು ದೇವರನ್ನು ಹುಡುಕಿಕೊಂಡು ಹೋಗಿದ್ದೆ. ದೇವರು ನನಗೆ ಪಾರ್ಕಿನಲ್ಲೇ ಕಂಡ. ಪಾಪ! ದೇವರಿಗೆ ತುಂಬಾ ವಯಸ್ಸಾಗಿದೆ, ಬಳಲಿದ್ದಾನೆ, ಆದರೆ ಸದಾ ನಗುನಗುತ್ತಾ ಇರುತ್ತಾನೆ', ಎಂದ. ತಾಯಿ ಅವನನ್ನು ಮತ್ತೊಮ್ಮೆ ತಬ್ಬಿ ಸಮಾಧಾನದ ನಿಟ್ಟುಸಿರು ಬಿಟ್ಟರು.

ಈ ಕಡೆ ಮುದುಕಪ್ಪ ತನ್ನ ಮನೆಗೆ ನಿಧಾನವಾಗಿ ನಡೆದು ಹೋದರು. ಅವರ ಮಗ ಸೊಸೆ ಇವರನ್ನು ಕಂಡು 'ಬೆಳಗಿನಿಂದ ಎಲ್ಲಿ ಹೋಗಿದ್ದಿರಿ? ಮಧ್ಯಾಹ್ನ ಊಟಕ್ಕೂ ಬಂದಿರಲಿಲ್ಲ', ಎಂದು ಪ್ರಶ್ನಿಸಿದರು. ಮುದುಕಪ್ಪ ನಿಧಾನವಾಗಿ 'ಇಂದು ಮಧ್ಯಾಹ್ನ ದೇವರೊಟ್ಟಿಗೆ ಊಟದ ಬದಲು ಬಿಸ್ಕತ್ ತಿಂದೆ. ದೇವರಿಗಿನ್ನೂ ಚಿಕ್ಕ ವಯಸ್ಸು. ಎಷ್ಟು ಚೆನ್ನಾಗಿ ನಗುತ್ತಾನೆ! ಎಷ್ಟು ಪ್ರೀತಿಸುತ್ತಾನೆ! ಅದನ್ನು ನೋಡಿಯೇ ಅನುಭವಿಸಬೇಕು', ಎಂದರು.

ನಮಗೂ ದೇವರು ಬಾಲಕನಾಗಿಯೋ, ಮುದುಕನಾಗಿಯೋ ಕಾಣಬಹುದು. ನಮಗೆ ನೋಡುವ ಕಣ್ಣಿರಬೇಕು, ನಾವು ನೋಡಲು ಸಿದ್ಧರಾಗಿರಬೇಕು.



## ಲೇಖಕರ ಪರಿಚಯ



ಎಂಜಿನಿಯರಿಂಗ್‌ನಲ್ಲಿ ಪದವಿ ಪಡೆದಿರುವ ಎಸ್. ಷಡಕ್ಷರಿ ಅವರು ರಮಣಶ್ರೀ ಹೋಟೆಲುಗಳ ಸಮೂಹದ ಕಾರ್ಯನಿರ್ವಾಹಕ ನಿರ್ದೇಶಕರು. ಇವರು ಉತ್ತಮ ವಾಗ್ಮಿ ಹಾಗೂ ಹವ್ಯಾಸಿ ಸಂಗ್ರಾಹಕ. ೨೫೦೦ ವಿವಿಧ ಬಗೆಯ ಗಣಪತಿ ಮೂರ್ತಿಗಳ ಸಂಗ್ರಹ ಇವರಲ್ಲಿದೆ. ಕೋಲಾರದ ಚೊಕ್ಕಹಳ್ಳಿಯಲ್ಲಿ ೫೦ ಅಡಿ ಎತ್ತರದ ಗಣಪತಿ ಮೂರ್ತಿಯನ್ನು ನಿರ್ಮಿಸಿಕೊಟ್ಟಿದ್ದಾರೆ. 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ **"ಕ್ಷಣಹೊತ್ತು ಅಣಿಮುತ್ತು"** ಎಂಬ ಇವರ ಅಂಕಣ ಈಗ ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿವೆ. ಈ ಪುಸ್ತಕಗಳ ಎರಡೂವರೆ ಲಕ್ಷ ಪ್ರತಿಗಳು ಮಾರಾಟವಾಗಿದ್ದು ಇದೊಂದು ದಾಖಲೆಯಾಗಿದೆ. ಶ್ರೀ ಷಡಕ್ಷರಿ ಅವರು ವಿಜಯಪ್ರಶಸ್ತಿ, ಆರ್ಯಭಟಪ್ರಶಸ್ತಿ, ರಾಜ್ಯೋತ್ಸವಪ್ರಶಸ್ತಿ ಮುಂತಾದವುಗಳಿಂದ ಪುರಸ್ಕೃತರಾಗಿದ್ದಾರೆ. 'ದೇವರೆಲ್ಲಿದ್ದಾನೆ? ಹೇಗಿದ್ದಾನೆ?' ಎಂಬ ಪಾಠವನ್ನು ಅವರ **"ಕ್ಷಣಹೊತ್ತು ಅಣಿಮುತ್ತು"** ಕೃತಿಯ ಮೊದಲ ಸಂಪುಟದಿಂದ ಆರಿಸಲಾಗಿದೆ.

## ಅಭ್ಯಾಸ

**ಅ. ಈ ಮಾತುಗಳನ್ನು ಯಾರು ಹೇಳಿದರು?**

೧. 'ಅಮ್ಮಾ! ನನಗೆ ದೇವರನ್ನು ನೋಡಬೇಕೆನಿಸುತ್ತೆ, ದೇವರೆಲ್ಲಿದ್ದಾನೆ?'

೨. 'ಎಲ್ಲಾ ಕಡೆಯೂ ನಿನ್ನ ಹುಡುಕಿದೆವು. ನಮಗೆ ತುಂಬಾ ಗಾಬರಿಯಾಗಿತ್ತು'

೩. 'ಬೆಳಗಿನಿಂದ ಎಲ್ಲಿ ಹೋಗಿದ್ದಿರಿ? ಮಧ್ಯಾಹ್ನ ಊಟಕ್ಕೂ ಬಂದಿರಲಿಲ್ಲ'

೪. 'ಇಂದು ಮಧ್ಯಾಹ್ನ ದೇವರೊಟ್ಟಿಗೆ ಊಟದ ಬದಲು ಬಿಸ್ಕತ್ ತಿಂದೆ.'

**ಆ. ಈ ಮಾತುಗಳನ್ನು ಯಾರಿಗೆ ಹೇಳಿದರು?**

೧. 'ಮಗು! ದೇವರು ಬಹಳ ದೂರದಲ್ಲಿದ್ದಾನೆ. ಅವನನ್ನು ಕಾಣಲು ತುಂಬಾ ನಡೆಯಬೇಕು'

೨. 'ಬೆಳಗಿನಿಂದ ಎಲ್ಲಿ ಹೋಗಿದ್ದೆ? ಎಲ್ಲಾ ಕಡೆಯೂ ನಿನ್ನ ಹುಡುಕಿದೆವು.'

೩. 'ಪಾಪ! ದೇವರಿಗೆ ತುಂಬಾ ವಯಸ್ಸಾಗಿದೆ. ಬಳಲಿದ್ದಾನೆ. ಆದರೆ ಸದಾ ನಗುನಗುತ್ತಾ ಇರುತ್ತಾನೆ'.

**ಇ. ಕೆಳಗೆ ಕತೆಯೊಂದನ್ನು ನೀಡಲಾಗಿದೆ. ಈ ಕತೆಯಲ್ಲಿ ಕೆಲವು ಪದಗಳು ಬಿಟ್ಟುಹೋಗಿವೆ. ಯಾವ ಪದಗಳು ಬಿಟ್ಟು ಹೋಗಿವೆ ಎಂದು ಹುಡುಕಿ ತುಂಬುವುದು ನಿಮ್ಮ ಕೆಲಸ. ಸರಿಯಾದ ಪದಗಳನ್ನು ಬಿಟ್ಟ ಸ್ಥಳಗಳಲ್ಲಿ ತುಂಬಿ ಕತೆಯನ್ನು ಪೂರ್ಣಗೊಳಿಸಿ.**

ಒಂದೂರಿನಲ್ಲಿ ಒಬ್ಬ __________ ಇದ್ದ. ಅವನ ಅಂಗಡಿಯ ಮುಂದೆ ಒಬ್ಬ ಮಾವಟಿಗ ಒಂದು __________ ಕರೆತರುತ್ತಿದ್ದ. ಒಂದು ದಿನ ಎಂದಿನಂತೆ __________ ಬಂದಿತು. ದರ್ಜಿಗೆ ಆ ದಿನ ಯಾಕೋ ಕೋಪ. __________ ಅವನು ಒಂದು ಸೂಜಿಯಿಂದ __________ ಸೊಂಡಿಲಿಗೆ ಚುಚ್ಚಿದ. __________. ತುಂಬಾ __________ ಬಂದಿತು. ಅದು ಹತ್ತಿರದ __________ ಇದ್ದ ಕೊಚ್ಚೆ ನೀರನ್ನು ಸೊಂಡಿಲಿನಿಂದ ತಂದು ದರ್ಜಿಯ __________ ಒಳಗೆ ಹಾಕಿಬಿಟ್ಟಿತು. ದರ್ಜಿಗೆ ತನ್ನ __________ ಅರಿವಾಯಿತು. ಅವನು __________ ಸಮಾಧಾನ ಪಡಿಸಿದ. ಎಂದಿನಂತೆ ಅದಕ್ಕೆ ತಿನ್ನಲು __________ ಗಳನ್ನು ನೀಡಿದ. __________ ಸಂತೋಷದಿಂದ ಎಲ್ಲವನ್ನೂ __________. ದರ್ಜಿಯ ತಲೆಯ ಮೇಲೆ ಸೊಂಡಲಿನಿಂದ ಮುದ್ದು ಮಾಡಿ ಹೋಯಿತು.

**ಈ. ಕೆಳಗೆ ಮತ್ತೊಂದು ಕತೆಗೆ ಸಂಬಂಧಿಸಿದಂತೆ ಪದಗಳ ಮೂಲಕ ಸೂಚನೆಗಳನ್ನು ನೀಡಲಾಗಿದೆ. ಇವುಗಳನ್ನು ಬಳಸಿಕೊಂಡು ಒಂದು ಕತೆ ರಚಿಸಿ.**

ಪ್ರಾಮಾಣಿಕ–ರೈತ (ಆತನಿಗೊಂದು ಹೆಸರಿಡಿ)– ಹೆಂಡತಿ–ಹೊಲ–ದುಡಿಮೆ–ಬಾತುಕೋಳಿ–ಮೊಟ್ಟೆ–ಒಂದು ದಿನ–ಚಿನ್ನದ ಮೊಟ್ಟೆ–ಆನಂದ–ಪ್ರತಿದಿನ–ಚಿನ್ನದ ಮೊಟ್ಟೆ–ಆನಂದ–ಮಾರಾಟ–ಶ್ರೀಮಂತ–ಅತಿಆಸೆ–ಹೊಟ್ಟೆತುಂಬಾ ಮೊಟ್ಟೆ–ಕುಯ್ದು–ಏನೂ ಇಲ್ಲ–ಪಶ್ಚಾತ್ತಾಪ.

(ಈ ಕತೆಗೊಂದು ಹೆಸರು ಕೊಡಿ)

# (ಆ) ಈ ಭೂಮಿ ಬಣ್ಣದ ಬುಗರಿ

–ಹಂಸಲೇಖ



ಈ ಭೂಮಿ ಬಣ್ಣದ ಬುಗರಿ
ಆ ಶಿವನೆ ಚಾಟಿಕಣೋ,

ಈ ಬಾಳು ಸುಂದರ ನಗರಿ
ನೀನಿದರ ಮೇಟಿ ಕಣೋ

ನಿಂತಾಗ ಬುಗರಿಯ ಆಟ
ಎಲ್ಲಾರು ಒಂದೇ ಓಟ
ಕಾಲಾ ಕ್ಷಣಿಕ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ

ಮರಿಬೇಡ ತಾಯಿಯ ಋಣವ
ಮರಿಬೇಡ ತಂದೆಯ ಒಲವ
ಹಡೆದವರೇ ದೈವ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ

ಸುಖವಾದ ಭಾಷೆಯ ಕಲಿಸೋ
ಸರಿಯಾದ ದಾರಿಗೆ ನಡೆಸೋ
ಸಂಸ್ಕೃತಿಯೇ ಗುರುವು ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ

ಮರೆತಾಗ ಜೀವನ ಪಾಠ
ಕೊಡುತಾರೆ ಚಾಟಿಯ ಏಟ
ಕಾಲ ಕ್ಷಣಿಕ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ

ಮರಿಬೇಡ ಮಗುವಿನ ನಗುವ
ಕಳಿಬೇಡ ನಗುವಿನ ಸುಖವ
ಭರವಸೆಯೇ ಮಗುವು ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ

ಕಳಬೇಡ ಕೊಲ್ಲಲು ಬೇಡ
ನೀಹಾಡು ಶಾಂತಿಯ ಹಾಡ
ಜೀವನವೇ ಪ್ರೀತಿ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ

ನಿಂತಾಗ ಬುಗರಿಯ ಆಟ
ಎಲ್ಲಾರು ಒಂದೇ ಓಟ
ಕಾಲ ಕ್ಷಣಿಕ ಕಣೋ
ಈ ಭೂಮಿ ಬಣ್ಣದ ಬುಗರಿ ಆ ಶಿವನೆ ಚಾಟಿಕಣೋ,

## ಕವಿ ಪರಿಚಯ



೧೯೫೧ರಲ್ಲಿ ಜನಿಸಿದ ಹಂಸಲೇಖ ಇವರ ಮೂಲ ಹೆಸರು ಜಿ. ಗಂಗರಾಜು. ಹಿಂದೂಸ್ಥಾನಿ ಮತ್ತು ಪಾಶ್ಚಾತ್ಯ ಸಂಗೀತ ಶೈಲಿಗಳನ್ನು ಅವರು ವಿವಿಧ ಗುರುಗಳಿಂದ ಕಲಿತರು. ತಮ್ಮ ಸ್ವಂತ ಸಾಧನೆಯಿಂದ ಬೆಳಸಿಕೊಂಡರು. ಹಂಸಲೇಖ ರಚನೆಯ "ಹುಟ್ಟಿದರೇ ಕನ್ನಡ ನಾಡಲ್ಲಿ ಹುಟ್ಟಬೇಕು." ಗೀತೆಯು ಅಪಾರ ಜನಪ್ರಿಯತೆ ಪಡೆಯಿತು. ಚಿತ್ರರಂಗದೊಂದಿಗೆ ಬೆಳೆದ ೩೦ ವರ್ಷಗಳ ನಂಟು ಅವರದು. ಈ ಅವಧಿಯಲ್ಲಿ ಹಂಸಲೇಖ ೩೦೦ಕ್ಕೂ ಹೆಚ್ಚು ಚಿತ್ರಗಳಿಗೆ ಗೀತೆ ಬರೆದಿದ್ದಾರೆ. ಸಂಗೀತ ನಿರ್ದೇಶಕರಾಗಿದ್ದಾರೆ.

'ಹಾಲುಂಡ ತವರು' ಚಿತ್ರದ ಸಂಗೀತ ನಿರ್ದೇಶನ ಹಾಗೂ ಅದೇ ಚಿತ್ರದ ಗೀತರಚನೆಗಾಗಿ ರಾಜ್ಯಸರ್ಕಾರದ ಪ್ರಶಸ್ತಿ "ಸಂಗೀತ ಸಾಗರ ಗಾನಯೋಗಿ ಪಂಚಾಕ್ಷರಿ ಗವಾಯಿ" ಚಿತ್ರದ ಸಂಗೀತ ನಿರ್ದೇಶನಕ್ಕಾಗಿ ರಾಜ್ಯಪ್ರಶಸ್ತಿ ಹಾಗೂ ರಾಷ್ಟ್ರಪ್ರಶಸ್ತಿ, "ಟುವ್ವಿ ಟುವ್ವಿ ಟುವ್ವಿ" ಚಿತ್ರದ ಸಂಗೀತ ಸಂಯೋಜನೆಗೆ ರಾಜ್ಯ ಪ್ರಶಸ್ತಿ ಲಭಿಸಿವೆ.

ಇವರ ಹಲವು ಚಿತ್ರಗಳ ಸಂಗೀತ ನಿರ್ದೇಶನಕ್ಕೆ ಫಿಲ್ಮ್ ಫೇರ್ ಪ್ರಶಸ್ತಿ ದೊರೆತಿದೆ. ಗ್ರಾಮೀಣ ಮತ್ತು ನಗರ ಪ್ರದೇಶದ ಬಡ ಮಕ್ಕಳಿಗಾಗಿ 'ದೇಸಿ' ಪ್ರೌಢಶಾಲೆ ಆರಂಭಿಸಿದ್ದಾರೆ. ನೃತ್ಯ, ಸಂಗೀತದ ಮೂಲಕ ಶಿಕ್ಷಣ ನೀಡುತ್ತಿರುವ ಪ್ರಯೋಗ ಇಲ್ಲಿ ಯಶಸ್ವಿಯಾಗಿದೆ. 'ಹಂಸಲೇಖ' ತಮ್ಮದೇ ಆದ ಒಂದು ರೆಕಾರ್ಡಿಂಗ್ ಸಂಸ್ಥೆ ಆರಂಭಿಸಿದ್ದಾರೆ.

## ಓದಿ–ತಿಳಿಯಿರಿ

ಶಿವ–ಈಶ್ವರ ; ಕ್ಷಣಿಕ– ಶಾಶ್ವತವಲ್ಲದ; ಕಾಲ–ಸಮಯ, ವೇಳೆ; ಚಾಟಿ– ಬಾರುಕೋಲು, ಚಾವಟಿ ; ಋಣ– ಸಾಲ; ಮೇಟಿ–ಕಂಬ; ದೈವ–ದೇವರು.

**ಮೇಟಿ :** ಧಾನ್ಯ ಮತ್ತು ಹುಲ್ಲನ್ನು ಬೇರ್ಪಡಿಸಲು ಇರುವ ಕಣದ ಮಧ್ಯದಲ್ಲಿ ನೆಟ್ಟ ಕಂಬ.

## ಅಭ್ಯಾಸ

ಅ. ೧. ಈ ಪದ್ಯವನ್ನು ಗಮನವಿಟ್ಟು ಓದಿರಿ.

೨. ಚಲನಚಿತ್ರದ ಧಾಟಿಯಂತೆ ಸಾಮೂಹಿಕವಾಗಿ ಹಾಡಿರಿ.

೩. ಬುಗರಿ ಆಟದ ನೆನಪುಗಳನ್ನು ಕುರಿತು ಐದು ಅಥವಾ ಆರು ವಾಕ್ಯಗಳನ್ನು ಸೂಕ್ತ ಲೇಖನ ಚಿಹ್ನೆಗಳೊಂದಿಗೆ ಬರೆಯಿರಿ.

೪. ಬುಗರಿ ಆಡುವ ವಿಧಾನವನ್ನು ತಿಳಿದಿಲ್ಲದವರಿಗೆ ಗಟ್ಟಿಯಾಗಿ ಹೇಳಿ ತಿಳಿಸಿ.

**ಆ ಈ ಪ್ರಶ್ನೆಗಳಿಗೆ ಉತ್ತರವನ್ನು ನಿಮ್ಮ ಗೆಳೆಯರೊಂದಿಗೆ ಹಂಚಿಕೊಳ್ಳಿ.**

೧. ಬಣ್ಣದ ಬುಗರಿ ಯಾವುದು?

೨. ಯಾರ ಋಣವನ್ನು ಮರೆಯಬಾರದು?

೩. ನಮ್ಮ ದೈವ ಯಾರು?

೪. ಯಾವುದು ಕ್ಷಣಿಕವಾದುದು?

೫ ಎಂತಹ ನಗುವನ್ನು ಮರೆಯಬಾರದು?

## ಪದ್ಯ ಪಾಠ – ೧

# ಗಿಡ ಮರ

–ಸತ್ಯಾನಂದ ಪಾತ್ರೋಟ

**ಪ್ರವೇಶ :** ನಮ್ಮ ಕೈಯಲ್ಲಿರುವ ಐದು ಬೆರಳುಗಳೂ ಒಂದೇ ರೀತಿಯಿಲ್ಲ. ಪ್ರತಿಯೊಂದು ಬೆರಳನ್ನು ಅದರದೇ ಆದ ಕಾರ್ಯಗಳಿಗೆ ನಾವು ಬಳಸುತ್ತೇವೆ. ಏನನ್ನಾದರೂ ಹಿಡಿಯಬೇಕಾದರೆ ಐದೂ ಬೆರಳುಗಳನ್ನು ಒಟ್ಟಾಗಿ ಬಳಸುತ್ತೇವೆ. ಬೆರಳಿನ ಆಕಾರ, ಸ್ವರೂಪ ನಮ್ಮ ಗಮನಕ್ಕೆ ಬರುವುದಿಲ್ಲ. ಒಂದು ಮರ ಕಾಯನ್ನು, ಹಣ್ಣನ್ನು, ನೆರಳನ್ನು ನೀಡಬಹುದು. ಹಾಗೆಯೇ, ಹಲವು ಹಕ್ಕಿಗಳು ಗೂಡುಕಟ್ಟಲು ಅವಕಾಶ ಮಾಡಬಲ್ಲುದು. ಮನುಷ್ಯರಾದ ನಾವೂ ಸಹಕಾರಿಯಾಗಿ ಬದುಕಿದರೆ ಎಷ್ಟು ಚಂದ ಅಲ್ಲವೆ? ಪ್ರಕೃತಿಯನ್ನು ಅನುಸರಿಸುವುದರಿಂದ ಆಗುವ ಪ್ರಯೋಜನ ಅಪಾರ.



ಬೊಡ್ಡೆ ಕರಿದು ಎಲೆ ಹಸಿರು
ಹೂವು ನಾನಾ ತರತರ
ಎಂಥ ಸೊಗಸು ಏನು ಕಂಪು
ಬೆಳೆದು ನಿಂತ ಗಿಡ ಮರ

ಯಾರೇ ಬಂದು ಏನೇ ಮಾಡಲಿ
ಎಲ್ಲದಕ್ಕೂ ದಿವ್ಯ ಮೌನ
ರೆಂಬೆ ಕೊಂಬೆ ಚಿಗುರುವಲ್ಲಿ
ಕಡಲುಕ್ಕುವ ಚೇತನ

ಮನುಷ್ಯನಲ್ಲಿ ಮಾತು ಉಂಟು
ಮಾತಿನಂತೆ ಇಲ್ಲ ಮನ
ಲಿಂಗ ವರ್ಣ ಜಾತಿ ಧರ್ಮ
ಹಾಳು ಕೊಂಪೆ ಇವನ ಮನ

ಜಾತಿ-ಗೀತಿ, ಲಿಂಗ-ಧರ್ಮ
ಮೀರಿ ಬೆಳೆದ ಗಿಡಮರ
ಅವನು ಇವಳು ಅದು ಇದು
ಎಣಿಸುತಿಲ್ಲ ಒಂದು ದಿನ

ಬೊಡ್ಡೆ ಕರಿದು ಎಲೆ ಹಸಿರು
ಹೂವು ನಾನಾ ತರತರ
ಬಿಸಿಲು ಮಳೆ ಚಳಿಯ ತಡೆದು
ಅರಳುತಿಹವು ಅನುದಿನ.

**ಕ್ಷೇತ್ರ :** ಆಲಿಸುವುದು

**ಸಾಮರ್ಥ್ಯ : ಕವಿತೆ, ಕಥೆ, ನಾಟಕ, ಪ್ರಬಂಧ, ಪ್ರಹಸನ ಇವುಗಳನ್ನು ಆಲಿಸಿ ಅರ್ಥಮಾಡಿಕೊಳ್ಳುವುದು.**

**ಆಶಯ :** ಪ್ರಕೃತಿಯಲ್ಲಿ ಹಲವು ಬಣ್ಣ, ಹಲವು ಆಕಾರ, ಹಲವು ಸ್ವರೂಪದ ಗಿಡ ಮರಗಳಿವೆ. ಮನುಷ್ಯನೂ ಪ್ರಕೃತಿಯ ಒಂದು ಭಾಗ. ಮನುಷ್ಯರಲ್ಲಿಯೂ ಹಲವು ಬಗೆಯ ಜನರಿದ್ದಾರೆ. ಬೇರೆ ಬೇರೆ ಧರ್ಮ, ಆಚಾರ ವಿಚಾರಗಳನ್ನು ಅನುಸರಿಸುವವರಿದ್ದಾರೆ. ಆದರೆ ಗಿಡಮರಗಳಲ್ಲಿಲ್ಲದ ಭೇದ-ಭಾವ ಮನುಷ್ಯರಲ್ಲಿದೆ. ಇದು ಅಗತ್ಯವಿಲ್ಲ. ಭೇದ ಭಾವವಿಲ್ಲದೆ ಗಿಡಮರಗಳಂತೆ ಪರರಿಗೆ ಉಪಕಾರಿಗಳಾಗಿ ಬೆಳೆದರೆ ಮನುಷ್ಯನ ಬದುಕು ಸಾರ್ಥಕವಾಗುತ್ತದೆ.



## ಕವಿ ಪರಿಚಯ



ಡಾ. ಸತ್ಯಾನಂದ ಪಾತ್ರೋಟ ಬಾಗಲಕೋಟೆಯಲ್ಲಿ ಜನಿಸಿದರು. ಕನ್ನಡದಲ್ಲಿ ಎಂ.ಎ., ಪಿಹೆಚ್.ಡಿ.ಪದವಿ ಪಡೆದಿರುವ ಇವರು ಬಾಗಲಕೋಟೆಯ ಎಸ್.ಬಿ.ಪಾಟೀಲ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ಇವರು **ಕರಿನೆಲದ ಕಲೆಗಳು, ಜಾಜಿ ಮಲ್ಲಿಗೆ, ಕಲ್ಲಿಗೂ ಗೊತ್ತಿರುವ ಕಥೆ, ಕರಿಯ ಕಟ್ಟಿದ ಕವನ, ನನ್ನ ಕನಸಿನ ಹುಡುಗಿ, ನದಿಗೊಂದು ಕನಸು** ಮತ್ತು **ಅವಳು** ಎಂಬ ಕವನ ಸಂಕಲನಗಳನ್ನೂ **ನಮಗ ಯಾರು ಇಲ್ಲೋ ಎಪ್ಪಾ ಸಾಕ್ಷಿ, ಮತ್ತೊಬ್ಬ ಏಕಲವ್ಯ** ಎಂಬ ನಾಟಕಗಳನ್ನು **ಒಂದಿಷ್ಟು ಕ್ಷಣಗಳು** ಎಂಬ ಪ್ರಬಂಧ

ಸಂಕಲನವನ್ನು ಪ್ರಕಟಿಸಿರುತ್ತಾರೆ. **ಎದೆಯ ಮಾತು** ಎಂಬುದು ಇವರ ಕಾವ್ಯದ ಧ್ವನಿಸುರುಳಿ. ಕರ್ನಾಟಕ ಸರಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಇವರನ್ನು ಪುರಸ್ಕರಿಸಿದೆ. 'ಗಿಡಮರ' ಎಂಬ ಈ ಕವನವನ್ನು ಅವರ **ಕರಿಯ ಕಟ್ಟಿದ ಕವನ** ಎಂಬ ಕವನಸಂಕಲನದಿಂದ ಆರಿಸಲಾಗಿದೆ.

## ಓದಿ–ತಿಳಿಯಿರಿ

ಬೊಡ್ಡೆ–ಮರದ ಕಾಂಡದ ಭಾಗ; ಅನುದಿನ–ದಿನನಿತ್ಯ; ಕರಿದು–ಕಪ್ಪಾದ ಬಣ್ಣ; ತರತರ–ವಿಧವಿಧವಾದ; ಕಡಲುಕ್ಕುವ–ಸಮುದ್ರ ಉಕ್ಕಿದಂತೆ; ಮನ–ಮನಸ್ಸು; ಹಾಳುಕೊಂಪೆ–ನಾಶಹೊಂದಿದ ಊರು.

## ಅಭ್ಯಾಸ

**ಅ. ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಯಾರೇ ಏನೇ ಮಾಡಿದರೂ ಗಿಡಮರ ಏನು ಮಾಡುತ್ತವೆ?

೨. ಕಡಲುಕ್ಕುವ ಚೇತನ ಎಲ್ಲಿ ಕಾಣಬರುತ್ತದೆ?

೩. ಅದು ಇದು ಎಣಿಸದಿರುವುದು ಯಾವುದು?

೪. ಗಿಡ ಮರಗಳು ಹೇಗೆ ಬೆಳೆದು ಅರಳುತ್ತಿವೆ?



**ಆ. ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೆ ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಬೆಳೆದು ನಿಂತ ಗಿಡಮರ ಹೇಗಿವೆ?

೨. ಯಾರ ಮಾತಿನಂತೆ ಮನ ಇಲ್ಲ? ಏಕೆ?

೩. ಗಿಡ ಮರ ಯಾವುದನ್ನು ಮೀರಿ ಬೆಳೆದಿದೆ?

**ಇ. ಬಿಟ್ಟ ಸ್ಥಳವನ್ನು ಪದ್ಯದಿಂದ ಆರಿಸಿದ ಸೂಕ್ತ ಪದಗಳಿಂದ ತುಂಬಿರಿ.**

| | | | |
|---|---|---|---|
| ಎಂಥ ಸೊಗಸು | ________ | ಬೆಳೆದು ನಿಂತ | ________ |
| ರೆಂಬೆ ಕೊಂಬೆ | ________ | ಕಡಲುಕ್ಕುವ | ________ |
| ಮನುಷ್ಯನಲ್ಲಿ | ________ | ಮಾತಿನಂತೆ | ________ |
| ಜಾತಿ–ಗೀತಿ | ________ | ಮೀರಿ ಬೆಳೆದ | ________ |

ಈ) ಕೆಳಗೆ ನೀಡಿರುವ ಪದಗಳಲ್ಲಿ ಗಿಡ ಮರಗಳಿಗೆ ಮತ್ತು ಮಾನವನಿಗೆ ಸಂಬಂಧಿಸಿರುವ ಪದಗಳನ್ನು ಪ್ರತ್ಯೇಕವಾಗಿ ಪಟ್ಟಿ ಮಾಡಿ.

| ಬೊಡ್ಡೆ | ಮಾತು | ಅವನು |
|---|---|---|
| ಮನ | ಹಸಿರು | ಧರ್ಮ |
| ಚಿಗುರು | ಜಾತಿ | ಹೂವು |
| ಕೊಂಬೆ | ಅವಳು | ರೆಂಬೆ |

## ಚಟುವಟಿಕೆ

ಅ. ಕೆಳಗೆ ನೀಡಿರುವ ಪದಗಳನ್ನು ಅಕಾರಾದಿಯಾಗಿ ಬರೆಯಿರಿ.

ಬೊಡ್ಡೆ, ಕರಿದು, ಎಲೆ, ಹಸಿರು, ಹೂವು, ತರತರ, ಎಂಥ, ಸೊಗಸು, ಏನು, ಕಂಪು, ಬೆಳೆ, ನಿಂತ, ಗಿಡ, ಮರ, ಮಾಡಲಿ, ದಿವ್ಯ, ಮೌನ, ರೆಂಬೆ, ಕೊಂಬೆ, ಚಿಗುರು, ಕಡಲು, ಚೇತನ.

ಆ. ಪ್ರಕೃತಿಯಲ್ಲಿಲ್ಲದ ಭೇದ ಭಾವ ಮನುಷ್ಯನಿಗೆ ಬೇಕೆ? ಈ ಬಗ್ಗೆ ಯೋಚಿಸಿ, ಪುಟ್ಟ ಪ್ರಬಂಧ ಸಿದ್ಧಪಡಿಸಿ.

ಇ. ನಿನಗೆ ಗೊತ್ತಿರುವ, ಸ್ನೇಹಿತರಿಗೆ ಗೊತ್ತಿರುವ, ಮನೆಯಲ್ಲಿನ ಹಿರಿಯರಿಗೆ, ಗೊತ್ತಿರುವ ಮರಗಳ ಹೆಸರುಗಳನ್ನು ಪುನರಾವರ್ತನೆಯಾಗದಂತೆ ಪ್ರತ್ಯೇಕವಾಗಿ ಪಟ್ಟಿಮಾಡಿರಿ.



## ಭಾಷಾಭ್ಯಾಸ

ಅ) ಕೆಳಗೆ ನೀಡಿರುವ ವಾಕ್ಯಗಳನ್ನು ಆವರಣದಲ್ಲಿ ನೀಡಿರುವ ಪದಗಳಲ್ಲಿ ಸೂಕ್ತವಾದುದನ್ನು ಆರಿಸಿ ವಾಕ್ಯ ಪೂರ್ಣಗೊಳಿಸಿ.

೧. ಬೆಳದಿಂಗಳ ರಾತ್ರಿಯಲ್ಲಿ ಚಂದ್ರನಿರುವ ____________ ನೋಡುವುದೇ ಆನಂದ (ಅಗಸನನ್ನು/ಆಗಸವನ್ನು)

೨. ನಿನಗೆ ಪೆಟ್ಟಾಗಿರುವುದನ್ನು ಕಂಡಾಗ ನನಗೆ ____________ ಬಂದಿತು. (ಆಳು/ಅಳು)

೩. ನನ್ನ ____________ ಬೆಂಗಳೂರು. (ಉರು/ಊರು)

೪. ಸಂಜೆ ಆಟ ಆಡಿ ____________ ನಂತರ ಊಟಮಾಡುತ್ತೇನೆ. (ಓದಿದ/ಒದಿದ)

೫. ____________ ಮೇಲೆ ಹಾಲನ್ನು ಇಡಲಾಗಿದೆ. (ಒಲೆಯ/ಓಲೆಯ)

**ಆ) ಕೆಳಗೆ ನೀಡಿರುವ ವಾಕ್ಯಗಳನ್ನು ಆವರಣದಲ್ಲಿ ನೀಡಿರುವ ಅಕ್ಷರಗಳಲ್ಲಿ ಸೂಕ್ತವಾದುದನ್ನು ಆರಿಸಿ ವಾಕ್ಯ ಪೂರ್ಣಗೊಳಿಸಿ.**

೧. ______ ವೇರಿ ______ ಡಗಿನ ಭಾಗಮಂಡಲದ ಬೆಟ್ಟದ ಬಳಿ ______ ರಿದಾಗಿ ಹುಟ್ಟಿ ______ ಳಗೆ ಹರಿಯುತ್ತದೆ. **(ಕ/ಕಾ/ಕಿ/ಕೀ/ಕೆ/ಕೊ)**

೨. ನದಿಯನ್ನು ______ ಟಿ ಆಚೆಯ ______ ಡ ಸೇರಿದರೆ ______ ಡ್ಡ ಆಲ ______ ಮರ ಕಾಣುತ್ತ ______ **(ದ/ದಾ/ದೆ/ದೊ)**

೩. ಕಾವೇರಿ ______ ವಿನಂತೆ ______ ರಳಿ ______ ರಿಯುವ ನದಿ **(ಹ/ಹಾ/ಹಿ/ಹೊ)**

**ಚೆನ್ನುಡಿ**

**'ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ–ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ, ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; ಮನುಜಮತ. ಆ ಪಥ ಈ ಪಥ ಅಲ್ಲ; ವಿಶ್ವಪಥ. ಆ ಒಬ್ಬರ ಈ ಒಬ್ಬರ ಉದಯ ಮಾತ್ರವಲ್ಲ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ; ಸಮನ್ವಯಗೊಳ್ಳುವುದು. ಮಿತಮತದ ಆಂಶಿಕ ದೃಷ್ಟಿಯಲ್ಲ; ಭೌತಿಕ, ಪಾರಮಾರ್ಥಿಕ ಎಂಬ ಭಿನ್ನ ದೃಷ್ಟಿಯಲ್ಲ; ಎಲ್ಲವನ್ನೂ ಭಗವದ್ ದೃಷ್ಟಿಯಿಂದ ಕಾಣುವ ಪೂರ್ಣದೃಷ್ಟಿ'.**

–ಕುವೆಂಪು (ಜ್ಞಾನಪೀಠ, ಕರ್ನಾಟಕ ರತ್ನ ಮುಂತಾದ ಪ್ರಶಸ್ತಿಗಳಿಂದ ಪುರಸ್ಕೃತರಾದ ರಾಷ್ಟ್ರಕವಿ ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ)

# ಪುಟ್ಟಜ್ಜಿ ಪುಟ್ಟಜ್ಜಿ ಕತೆ ಹೇಳು

–ಡಾ. ನಾ. ಡಿಸೋಜಾ

**ಪ್ರವೇಶ : ಬೆಳಗ್ಗೆ ಶಾಲೆಗೆ ಬಂದ ವಿದ್ಯಾರ್ಥಿನಿಯರು ಶಾಲಾ ಆವರಣದಲ್ಲಿ ಕುಳಿತು ಮಾತಿಗಿಳಿಯುತ್ತಾರೆ.**

ಮಾಲಾ : ನಿನ್ನೆ ನಮ್ಮ ಮನೆಯ ಸಮೀಪದ ದೇವಸ್ಥಾನದಲ್ಲಿ ಪುರಾಣದ ಕತೆ ಹೇಳುವ ಕಾರ್ಯಕ್ರಮ ಇತ್ತು. ನಾನು ನಮ್ಮಮ್ಮ ಹೋಗಿದ್ದೆವು. ತುಂಬಾ ಚೆನ್ನಾಗಿತ್ತು.

ರೇಖಾ : ಪುರಾಣದಕತೆ ಹೇಳುವಾಗ ಮಧ್ಯೆ ಮಧ್ಯೆ ದೇವರನಾಮಗಳನ್ನು ಹಾಡುತ್ತಾರೆ. ನನಗದು ತುಂಬಾ ಇಷ್ಟ.

ಮೇರಿ : ರೇಖಾ.... ನನಗೆ ನೀತಿ ಕತೆಗಳು ಎಂದರೆ ಇಷ್ಟ. ನನ್ನ ಬಳಿ ಕೆಲವು ನೀತಿಕತೆಗಳ ಪುಸ್ತಕಗಳು ಇವೆ.

ಫಾತಿಮಾ : ಮಾಲಾ.... ಕೆಲವು ಕತೆಗಳನ್ನು ಹಾಡಿನ ರೂಪದಲ್ಲಿ ಹೇಳುತ್ತಾರಲ್ಲಾ....

ಮಾಲಾ : ಹೌದು, ಇದನ್ನು ಕಥನ–ಕವನ ಎನ್ನುತ್ತಾರೆ.

ರೇಖಾ : ಕೆಲವು ಕಡೆಗಳಲ್ಲಿ ಜಾನಪದ ಹಾಡುಗಳ ರೂಪದಲ್ಲಿ ಕತೆ ಹೇಳುತ್ತಾರೆ. ಇವು ತುಂಬಾ ಚೆನ್ನಾಗಿರುತ್ತವೆ.

ಮಾಲಾ : ನಾನು ಚಿಕ್ಕವಳಿರುವಾಗ ನಮ್ಮಜ್ಜ ನನಗೆ ರಾಮಾಯಣ ಮಹಾಭಾರತದ ಕತೆ. ಹೇಳುತ್ತಿದ್ದರು. ಬೇರೆ ಬೇರೆ ಕತೆ ಪುಸ್ತಕಗಳನ್ನೆಲ್ಲಾ ತಂದುಕೊಟ್ಟು ಓದಿಸುತ್ತಿದ್ದರು.

ಫಾತಿಮಾ : ನನಗಂತೂ ಕತೆಗಳೆಂದರೆ ತುಂಬಾ ಇಷ್ಟ.

ಮೇರಿ : ನನಗೂ ಅಷ್ಟೆ.

(ವಿದ್ಯಾರ್ಥಿನಿಯರು ಮಾತಾಡುತ್ತಿರುವಾಗ ಅಲ್ಲಿಗೆ ಬಂದ ತರಗತಿ ಶಿಕ್ಷಕಿಯ ಕಿವಿಗೆ ವಿದ್ಯಾರ್ಥಿನಿಯರ ಮಾತುಗಳು ಕೇಳಿದವು.)

ಶಿಕ್ಷಕಿ : ನಿಮಗೆಲ್ಲಾ ಕತೆಗಳೆಂದರೆ ಅಷ್ಟೊಂದು ಇಷ್ಟವೇ? ಇವತ್ತಿನ ನಮ್ಮ ಪಾಠ ಕೂಡಾ ಸ್ವಾರಸ್ಯಕರವಾದ ಕತೆಯೇ; ಪುಟ್ಟಜ್ಜಿ ಹೇಳುವ ಕತೆ ಕೇಳುವ ಆಯ್ತೇ?

ಇದನ್ನು ಕೇಳಿದ ಮಕ್ಕಳ ಮುಖ ಅರಳಿತು.



ಪುಟ್ಟಜ್ಜಿ ಪುಟ್ಟಜ್ಜಿ ಕತೆ ಹೇಳು ಅಂದರೆ, 'ಬಾ ಮಗ ಹೇಳ್ತೀನಿ ಒಳ್ಳೇದೊಂದು ಕತೆಯ' ಅಂತಾಳೆ ಪುಟ್ಟಜ್ಜಿ. ಕತೆ ಹೇಳುವುದರಲ್ಲಿ ನಮ್ಮ ಪುಟ್ಟಜ್ಜಿ ಯಾವಾಗಲೂ ಫಸ್ಟು. ದೊಡ್ಡ ಕತೆ, ಸಣ್ಣ ಕತೆ, ಪುರಾಣಿ ಕತೆ, ತಮಾಷೆ ಕತೆ, ಹಾಡ್ಗತೆ ಹೀಗೆ ತರಾವರಿ ಕತೆ ಹೇಳುತ್ತಾಳೆ ಪುಟ್ಟಜ್ಜಿ. ಮೊನ್ನೆ ನಾನು ಪುಟ್ಟಜ್ಜಿ ಮನೆ ಕಡೆ ಹೋಗಿದ್ದೆ.

ಪುಟ್ಟಜ್ಜಿ ಮನೆ ಜಗಲಿ ಮೇಲೆ ಕೂತಿದ್ದಳು. ಅವಳು ಸಂತಸದಿಂದ ಇದ್ದಾಳೆ ಅಂತ ಅವಳ ಮುಖವೇ ಹೇಳುತ್ತಿತ್ತು.

'ಪುಟ್ಟಜ್ಜಿ ಪುಟ್ಟಜ್ಜಿ ಕತೆ ಹೇಳುತೀಯಾ?' ಅಂತ ಕೇಳಿದೆ.

'ಬಾ ಮಗ ಹೇಳ್ತೀನಿ ಒಳ್ಳೇದೊಂದು ಕತೆಯಾ' ಅಂದಳು.

ಅವಳ ಮನೆ ಜಗಲಿ ಹತ್ತಿ ಕಂಬಕ್ಕೆ ಒರಗಿ ಕೂತು ಅವಳ ಮುಖ ನೋಡಿದೆ.

'ಯಾವ ಕತೆ ಹೇಳಲಿ?'

'ಯಾವದಾದರೂ ಒಂದು ಹಾಡ್ಗತೆ ಹೇಳು' ಅಂದೆ.

ಪುಟ್ಟಜ್ಜಿ ಸ್ಪೆಷಾಲಿಟಿ ಅಂದರೆ ಹಾಡ್ಗತೆ. ಅದರಲ್ಲಿ ಹಾಡೂ ಇರುತ್ತೆ, ಕತೇನೂ ಇರುತ್ತೆ. ಪುಟ್ಟಜ್ಜಿ ಗಂಟಲು ಸರಿಪಡಿಸಿಕೊಂಡಳು. ಹಾಗೇ ತಣ್ಣನೆ ಗಾಳಿ ಬೀಸಿದ ಹಾಗೆ ಹೇಳಲಿಕ್ಕೆ ಪ್ರಾರಂಭ ಮಾಡಿದಳು.

ಪುಟ್ಟದೊಂದು ಊರ ಹೊರಗೆ
ಒಂದು ಹಳ್ಳ ಹರಿದಿದೆ
ಹಳ್ಳ ಅಲ್ಲಿ ಹರಿದು ಹರಿದು
ಊರ ಜನರ ಪೊರೆದಿದೆ
ಹರಿವ ಹಳ್ಳ ಊರಿಗೊಂದು
ಸೊಬಗ ತಂದು ಕೊಟ್ಟಿದೆ
ಹಸಿರು ಕಾಡು ಮರಗಳಲ್ಲಿ
ಹಕ್ಕಿ ಹಾಡು ಕೇಳಿದೆ



ಇಂತಹಾ ಒಂದು ಸೊಗಸಾದ ಸ್ಥಳದಲ್ಲಿ ಒಂದು ಕಾಲದಲ್ಲಿ ಜನ ಇರಲಿಲ್ಲ. ಹಳ್ಳ ತನ್ನ ಪಾಡಿಗೆ ತಾನು ಹರಿದು ಹೋಗುತ್ತಾ ಇತ್ತು. ಹಕ್ಕಿಗಳು ಹಾಡಿಕೊಂಡಿದ್ದವು. ಒಂದು ದಿನ ಬಹಳ ದೂರದಿಂದ ಒಬ್ಬ ಯುವಕ ಅಲ್ಲಿಗೆ ಬಂದ. ಇಲ್ಲಿ ಇಷ್ಟೊಂದು ಚೆನ್ನಾಗಿದೆಯಲ್ಲ ಅಂತ ಅಲ್ಲಿ ಉಳಿಯೋ ಯೋಚನೆ ಮಾಡಿದ. ಒಂದು ಮನೆ ಕಟ್ಟಿದ. ಮನೆ ಮುಂದೆ ತೋಟ ಮಾಡಿದ. ತನಗೆ ಏನು ಬೇಕೋ ಅದನ್ನು ಬೆಳೆಸಿಕೊಂಡು ಅಲ್ಲಿ ಉಳಿದ. ಹಳ್ಳ, ಹಳ್ಳದ ದಡದಲ್ಲಿ ಇವನ ಮನೆ. ಮನೆಯ ಹಿಂದೆಯೇ ಭಾರೀ ಕಾಡು. ಅಲ್ಲಿ ಹುಲಿ, ಚಿರತೆ, ಕಾಡುಕೋಣ, ಆನೆ ಎಂದೆಲ್ಲ ಕಾಡುಪ್ರಾಣಿಗಳು. ಈ ಯುವಕನಿಗೆ ಯಾವುದೇ ಭೀತಿ ಇರಲಿಲ್ಲ. ಏಕೆಂದರೆ ಇವನು ಅವುಗಳ ಸುದ್ದಿಗೇ ಹೋಗುತ್ತಿರಲಿಲ್ಲ. ಅವು ಇವನ ಸುದ್ದಿಗೆ ಬರುತ್ತಿರಲಿಲ್ಲ. ಅವರವರ ಪಾಡಿಗೆ ಅವರೆಲ್ಲ ಸುಖವಾಗಿ ಇದ್ದರು. ಇವನ ಮನೆಯ ಹತ್ತಿರವೇ ಪ್ರಾಣಿಗಿಂಡಿ ಇದ್ದಿತು. ಅಲ್ಲಿಗೆ ಬಂದು ಪ್ರಾಣಿಗಳೆಲ್ಲ ನೀರು ಕುಡಿದು ಹೋಗುತ್ತಿದ್ದವು. ಒಂದು ದಿನ ಯುವಕ ಮನೆ ಜಗಲಿ ಮೇಲೆ ಕುಳಿತಿದ್ದಾನೆ. ಆಗ ಹೆದರಿ ಗಾಬರಿಯಾದ ಒಂದು ಜಿಂಕೆ ಅಂಗಳಕ್ಕೆ ಧಾವಿಸಿ ಬಂದಿತು. ಆ ಜಿಂಕೆಯ ಕುತ್ತಿಗೆಯಲ್ಲಿ ಒಂದು ಗೆಜ್ಜೆ ಬೇರೆ ಇತ್ತು. ಜಿಂಕೆಯ ಮೈ ನಡುಗುತ್ತಿತ್ತು. ಈ ಜಿಂಕೆ ಹೀಗೆ ಓಡಿ ಬರಲು ಒಂದು ಕಾರಣವಿತ್ತು.

ಕಾಡಿನಲ್ಲಿ ಒಂದು ಹುಲಿ
ಜಿಂಕೆಯನ್ನು ಕಂಡಿತು
ಅದರ ಬೆನ್ನು ಹತ್ತಿ ಹುಲಿ
ಹಳ್ಳದೆಡೆಗೆ ಬಂದಿತು
ಪ್ರಾಣಭಯದಿ ಜಿಂಕೆ ಬಂದು
ಮನೆಯನೊಂದ ಹೊಕ್ಕಿತು
ನನ್ನ ಪ್ರಾಣ ಉಳಿಸು ಎಂದು
ಮನೆಯೊಡೆಯನ ಕೇಳಿತು.

ಈ ಯುವಕನಿಗೆ ಜಿಂಕೆ ಹುಲಿಗೆ ಹೆದರಿ ಅಲ್ಲಿ ಬಂದಿದೆ ಅನ್ನುವುದು ತಿಳಿಯಿತು. ಅವನು ಎದ್ದು ಅದನ್ನ ಅಪ್ಪಿಕೊಂಡು ಅದಕ್ಕೆ ಸಾಂತ್ವನ ನೀಡಿದ. ಅದೇ ಸಮಯಕ್ಕೆ ಒಂದು ಹುಲಿ ಬಂದು ಯುವಕನ ಮನೆಯ ಮುಂದೆ ನಿಂತಿತು. "ಏಯ್ ಯುವಕ, ಈ ಜಿಂಕೆ ನನ್ನ ಆಹಾರ. ನೀನು ಇದಕ್ಕೆ ರಕ್ಷಣೆ ನೀಡಿದರೆ ಅದು ಅರಣ್ಯ ನಿಯಮಕ್ಕೆ ವಿರೋಧವಾಗುತ್ತದೆ. ಜಿಂಕೆಯನ್ನ ಬಿಟ್ಟುಕೊಡು" ಎಂದಿತು ಹುಲಿ.

"ನೋಡು, ಇದು ಅರಣ್ಯದ ಜಿಂಕೆಯಲ್ಲ. ಯಾರೋ ಸಾಕಿದ ಪ್ರಾಣಿ. ಇದರ ಕುತ್ತಿಗೆಯಲ್ಲಿ ಗೆಜ್ಜೆ ಇವೆ. ಅರಣ್ಯದ ಪ್ರಾಣಿಯನ್ನು ಕೊಂದು ತಿನ್ನಲು ನಿನಗೆ ಅಧಿಕಾರವಿದೆ. ಆದರೆ ಹೀಗೆ ಯಾರೋ ಸಾಕಿದ ಪ್ರಾಣಿಯನ್ನು ಕೊಲ್ಲಲು ನಿನಗೆ ಅಧಿಕಾರವಿಲ್ಲ. ನಾನು ಇದನ್ನ ಬಿಟ್ಟು ಕೊಡುವುದಿಲ್ಲ" ಎಂದು ಆ ಯುವಕ ಹುಲಿಗೆ ಉತ್ತರ ನೀಡಿದ. ಈ ಮಾತು ಕೇಳಿ ಹುಲಿಗೆ ಸಿಟ್ಟು ಬಂದಿತು. ಆ ಸಿಟ್ಟಿನಲ್ಲಿ ಅದು ಅಬ್ಬರಿಸಿತು. ಯುವಕ ಜಿಂಕೆಗೆ ತನ್ನ ಮನೆಯೊಳಗೆ ಆಶ್ರಯ ನೀಡಿ ಹುಲಿಯನ್ನ ಎದುರಿಸಿದ. ತನ್ನಲ್ಲಿ ರಕ್ಷಣೆ ಬೇಡಿ ಬಂದವರನ್ನು ತಾನು ಬಿಟ್ಟುಕೊಡಲಾರೆ ಎಂದ.

ಹುಲಿಗೂ ಆ ಯುವಕನಿಗೂ ಜಗಳವಾಯಿತು. ಹುಲಿ ಯುವಕನನ್ನು ಸಿಕ್ಕಲ್ಲಿ ಕಚ್ಚಿತು. ಗಾಯ ಮಾಡಿತು. ಕಷ್ಟಪಟ್ಟು ಬದುಕು ಸಾಗಿಸುತ್ತಿದ್ದ ಯುವಕ ಸೋಲಲಿಲ್ಲ. ಹುಲಿ ಕೊನೆಗೆ ಸೋತು ಪಲಾಯನ ಪಠಿಸಿತು. ಮತ್ತೆ ನಾನು ನಿನ್ನ ಸಹವಾಸಕ್ಕೆ ಬರುವುದಿಲ್ಲ ಅಂದಿತು ಹುಲಿ. ಅದಕ್ಕೂ ಹೊಡೆದು ಬಡಿದು ಗಾಯ ಮಾಡಿದ್ದ ಯುವಕ. ಜಿಂಕೆ ಯುವಕನ ಸ್ಥಿತಿಯನ್ನು ನೋಡಿತು. ಪಾಪ ಎಂದು ಮರುಗಿತು. "ನನ್ನನ್ನು ಉಳಿಸಲು ಹೋಗಿ ನಿನಗೆ ಹೀಗಾಯಿತೇ" ಎಂದು ಕಣ್ಣೀರು ಸುರಿಸಿತು. ಹಾಗೆಯೇ ಕಾಡಿಗೆ ಹೋಗಿ –

ಸೊಪ್ಪು ಸದೆ ಬೇರು ತೊಗಟೆ
ಎಲ್ಲವನ್ನ ತಂದಿತು
ಅರೆದು ಕುಟ್ಟಿ ಮದ್ದುಮಾಡಿ
ಗಾಯಗಳಿಗೆ ಹಚ್ಚಿತು
ಗಾಯ ಮಾಗಿ ಅವನು ಮತ್ತೆ

ಎದ್ದು ನಡೆಯತೊಡಗಿದ
ಇದನ್ನು ಕಂಡು ಜಿಂಕೆಗಾಯ್ತು
ಅಪರಿಮಿತ ಆನಂದ



ಹೀಗೆ ಆ ಜಿಂಕೆಗೂ ಆ ಯುವಕನಿಗೂ ಏನೋ ಸಂಬಂಧ ಕೂಡಿ ಬಂದಿತು. ಆದರೂ ಜಿಂಕೆಯ ಮನಸ್ಸಿನಲ್ಲಿ ಏನೋ ಚಿಂತೆ ಇರುವುದನ್ನು ಯುವಕ ಗಮನಿಸಿದ. ಒಂದು ದಿನ ಯುವಕ ಏನೋ ಮಾಡುತ್ತ ಅಂಗಳದಲ್ಲಿ ಕುಳಿತಿದ್ದಾನೆ. ಅಷ್ಟು ದೂರದಲ್ಲಿ ಮಲಗಿದ್ದ ಜಿಂಕೆ ತಟ್ಟನೆ ಎದ್ದು ನಿಂತಿದೆ. ಹೊರಗೆ ಕಿವಿಗೊಟ್ಟು ಏನನ್ನೋ ಕೇಳುತ್ತಿದೆ. ಆಗ ಯುವಕನ ಮನೆಯ ಹತ್ತಿರವೇ ಒಂದು ಇಂಪಾದ ದನಿ ಕೇಳಿಸುತ್ತಿದೆ. ಜಿಂಕೆ ಮತ್ತೂ ಸಂಭ್ರಮದಿಂದ ಎದ್ದು ನಿಲ್ಲುತ್ತದೆ.



"ಚುಕ್ಕಿ ಎಲ್ಲಿದ್ದಿಯಾ..... ಚುಕ್ಕಿ ಎಲ್ಲಿದ್ದಿಯಾ?" ಎಂದು ಒಂದು ದನಿ ಕೇಳಿ ಬರುತ್ತದೆ. ಜಿಂಕೆ ಹೊರ ಓಡುತ್ತದೆ. ಯುವಕ ಗಾಬರಿಯಿಂದ ಅದರ ಹಿಂದೆ ಓಡುತ್ತಾನೆ. ಅಲ್ಲಿ ಓರ್ವ ಯುವತಿ ಜಿಂಕೆಯನ್ನು ತಬ್ಬಿ ಹಿಡಿದಿದ್ದಾಳೆ. ಜಿಂಕೆ ಅವಳ ಕೈ ನೆಕ್ಕುತ್ತಿದೆ. ಅವಳ ಮೈಗೆ ತನ್ನ ಮೈ ತಿಕ್ಕುತ್ತಿದೆ. ಆಕೆ ಜಿಂಕೆಯ ಮುಖಕ್ಕೆ ತನ್ನ ಮುಖ ತಾಗಿಸಿ ಅಳುತ್ತಿದ್ದಾಳೆ. ಆ ಯುವತಿ ಈ ಯುವಕನನ್ನು ನೋಡಿದ ಕೂಡಲೇ ತನ್ನ ಪರಿಚಯ ಹೇಳಿಕೊಂಡಳು.

"ಇದು ನಾವು ಸಾಕಿಕೊಂಡ ಜಿಂಕೆ.... ಇದರ ಮೇಲಿನ ಈ ಚುಕ್ಕೆಯ ಗುರುತಿಗೆ ಇದಕ್ಕೆ ನಾವು ಚುಕ್ಕಿ ಎಂದು ಕರೆದೆವು.... ಇದು ಕೆಲ ದಿನಗಳ ಹಿಂದೆ ಕಾಡಿಗೆ ಬಂದುಬಿಟ್ಟಿತು..... ಇದನ್ನ ಒಂದು ಹುಲಿ ಅಟ್ಟಿಸಿಕೊಂಡು ಬಂದುದನ್ನ ಕೆಲ ಹಳ್ಳಿ ಜನ ನೋಡಿದರು... ಚುಕ್ಕಿಯ ಕತೆ ಮುಗಿಯಿತು ಅಂತ ನಾವು ತಿಳಿದೆವು..... ಆದರೂ ನನಗೆ ಏನೋ ನಂಬಿಕೆ ..... ಚುಕ್ಕಿ ಬದುಕಿದೆ ಎಂದು.... ನಾನು ಆವತ್ತಿನಿಂದ ಅದನ್ನ ಹುಡುಕುತ್ತಿದ್ದೆ. ಇಂದು ಇದು ಸಿಕ್ಕಿದೆ...." ಆ ಯುವತಿ ಸಂತಸದಿಂದಲೇ ಇದೆಲ್ಲವನ್ನು ನುಡಿದಳು.

ಆ ಯುವಕ ತಾನು ಚುಕ್ಕಿಯನ್ನ ಉಳಿಸಿದ ಕತೆ ಹೇಳಿದ. ಹುಲಿಗೂ ತನಗೂ ನಡೆದ ಹೋರಾಟದಲ್ಲಿ ತನಗಾದ ಗಾಯಗಳನ್ನು ತೋರಿಸಿದ. ಚುಕ್ಕಿಯು ಕಾಡಿನಲ್ಲಿ ಮದ್ದು ಮಾಡಿದ್ದನ್ನು ಹೇಳಿದ.

"ಚಿಕ್ಕಂದಿನಿಂದ ಚುಕ್ಕಿ ನಮ್ಮ ಮನೆಯಲ್ಲಿಯೇ ದೊಡ್ಡದಾಗಿದೆ. ನಾನು ಚುಕ್ಕಿಯನ್ನು ಬಿಟ್ಟು ಇರಲಾರೆ.... ಇದನ್ನ ಮನೆಗೆ ಕರೆದೊಯ್ಯುತ್ತೇನೆ" ಎಂದಳು ಯುವತಿ. ಅವಳು ಹಾಗೆ ಹೇಳುವಾಗ ಚುಕ್ಕಿಗೆ ವಿಷಯ ತಿಳಿದುಹೋಯಿತು. ಅದು ಹೋಗಿ ಆ ಯುವಕನ ಮನೆಯೊಳಗೆ ಅವಿತುಕೊಂಡಿತು.

"ನಾನೂ ಅದನ್ನ ಬಿಟ್ಟು ಇರಲಾರೆ ..... ಹುಲಿ ಬಾಯಿಂದ ಅದನ್ನು ಕಾಪಾಡಿದ್ದೇನೆ..... ಈಗ ನಿನಗೆ ಇದನ್ನ ಕೊಡಲಾರೆ...." ಎಂದ ಯುವಕ.

"ಹಾಗಾದರೆ ನಾನೂ ಇಲ್ಲಿಯೇ ಇರುತ್ತೇನೆ.. ಚುಕ್ಕಿಯ ಜೊತೆಯಲ್ಲಿ" ಎಂದ ಯುವತಿ ಯುವಕನ ಮನೆಯೊಳಗೆ ಹೋಗಿ ಚುಕ್ಕಿಯನ್ನ ಅಪ್ಪಿಕೊಂಡಳು.

ಚುಕ್ಕಿಯೆಂಬ ಜಿಂಕೆ ಪಾಪ
ಹುಲಿಯ ಕಣ್ಗೆ ಬಿದ್ದಿತು
ಯುವಕನೊಬ್ಬ ಅದನು ಉಳಿಸಿ
ಮನೆಯಲಿರಿಸಿ ಸಾಕಿದ
ಹುಡುಕಿಕೊಂಡು ಬಂದ ಹುಡುಗಿ
ಅದನು ಬಿಡೆ ಎಂದಳು
ಹುಡುಗ ಹುಡುಗಿ ಒಂದಾಗಲು
ಚುಕ್ಕಿಯೇ ಮುಂದಾಯಿತು

ಹೀಗೆ ಹಳ್ಳದ ದಂಡೆಯ ಮೇಲಿನ ಊರು ಬೆಳೆಯಿತು. ನಂತರ ಇಲ್ಲಿ ಎಲ್ಲ ಸುಖವಾಗಿದ್ದರು. ಪುಟ್ಟಜ್ಜಿ ಕತೆ ಮುಗಿಸಿ ಎದ್ದಳು.



"ಮತ್ತೆ ಯಾವತ್ತಾರ ಬಾ. ಬೇರೆ ಬೇರೆ ಕತೆ ಹೇಳತೇನೆ" ಎಂದಳು ಪುಟ್ಟಜ್ಜಿ. ನಾನು ಸಂತಸದಿಂದ ಅಲ್ಲಿಂದ ಹೊರಟೆ.

**ಕ್ಷೇತ್ರ :** ಆಲಿಸುವುದು.

**ಸಾಮರ್ಥ್ಯ : ಅಪರಿಚಿತ ಸನ್ನಿವೇಶದ ಘಟನೆಗಳನ್ನು ಆಲಿಸಿ ಅರ್ಥಮಾಡಿಕೊಳ್ಳುವುದು.**

**ಆಶಯ :** ಕತೆ ಹೇಳುವುದು ಎಂದಾಗ- ಅಜ್ಜಿಯ ನೆನಪಾಗುತ್ತದೆ. ಅನಾದಿಯಿಂದಲೂ ಸುತ್ತಲೂ ಮಕ್ಕಳನ್ನು ಕುಳ್ಳಿರಿಸಿಕೊಂಡು ಹಾವ-ಭಾವದಿಂದ ಕೂಡಿ, ಅಭಿನಯ ಸಹಿತ ಅಜ್ಜಿ ಹೇಳುವ ಕತೆಯ ಗಮ್ಮತ್ತೇ ಗಮ್ಮತ್ತು. ಹೊಟ್ಟೆ ಹುಣ್ಣಾಗುವಂತೆ ನಗುತ್ತಾ, ಕತೆಯ ಪಾತ್ರದ ದುಃಖ ಸನ್ನಿವೇಶಕ್ಕೆ ಕಣ್ಣೀರಿಡುತ್ತ, ಹೆದರಿಕೆಯಿಂದ ನಡುಗುತ್ತ ಕತೆ ಕೇಳುವುದೆಂದರೆ ಮಕ್ಕಳಿಗೆ ನಿದ್ದೆಯೂ ಬಾರದು; ಹಸಿವೆಯೂ ಕಾಣಿಸದು.

ಇಂತಹ ಕತೆಗಳು ಮಕ್ಕಳ ಜೀವನದ ಮೇಲೆ ಪ್ರಭಾವ ಬೀರುವ ಸಾಧ್ಯತೆ ಹೆಚ್ಚಾಗಿದೆ. ಹಾಗಾಗಿ ಉದಾತ್ತ ಭಾವನೆಗಳನ್ನೊಳಗೊಂಡ, ಧೈರ್ಯ ಸಾಹಸ ಪ್ರಧಾನವಾದ, ನೀತಿ ಬೋಧನೆಯ ಕಥೆಗಳು ಬಳಕೆಗೆ ಬಂದಲ್ಲಿ ಮುಂದೆ ಉತ್ತಮ ಗುಣನಡತೆಯ ಜನಾಂಗವನ್ನು ನಿರೀಕ್ಷಿಸಲು ಸಾಧ್ಯ.

## ಲೇಖಕರ ಪರಿಚಯ



ಡಾ. ನಾರ್ಬರ್ಟ್ ಡಿಸೋಜಾರವರು ೧೯೩೭ ಜೂನ್ ೬ರಂದು ಜನಿಸಿದರು. ತಂದೆ ಎಫ್.ಪಿ.ಡಿಸೋಜಾ ತಾಯಿ ರೂಪಿನಾ ಡಿಸೋಜಾ.

ನಾ.ಡಿಸೋಜಾರವರು ಈವರೆಗೆ ೩೭ ಕಾದಂಬರಿಗಳನ್ನು, ನಾಲ್ಕು ನಾಟಕಗಳನ್ನು, ಇಪ್ಪತ್ತೆಂಟು ಮಕ್ಕಳ ಕೃತಿಗಳನ್ನು ನೂರಾರು ಕತೆಗಳನ್ನು ಬರೆದಿದ್ದಾರೆ. ಇವರ ಕಾದಂಬರಿ **'ಕಾಡಿನ ಬೆಂಕಿ'** ಹಾಗೂ **'ದ್ವೀಪ'** ಚಲನಚಿತ್ರಗಳಾಗಿ **'ರಜತ ಕಮಲ'** ಹಾಗೂ **'ಸ್ವರ್ಣಕಮಲ'** ಪ್ರಶಸ್ತಿಗಳನ್ನು ಪಡೆದಿವೆ. **'ಬಳುವಳಿ'** ಕಾದಂಬರಿ ಕೊಂಕಣಿಯಲ್ಲಿ ಚಲನಚಿತ್ರವಾಗಿದೆ. **'ಸಾರ್ಕ್'** ದೇಶಗಳ ಸಾಹಿತಿಗಳ ಸಮ್ಮೇಳನದಲ್ಲಿ ಸ್ವಂತ ಕಥಾವಾಚನ ಮಾಡಿದ್ದರು. ಇವರ 'ಮುಳಗಡೆಯ ಊರಿಗೆ ಬಂದವರು' ಕಿರು ಕಾದಂಬರಿಗೆ ೨೦೧೧ರ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಾಲ ಸಾಹಿತ್ಯ ಪುರಸ್ಕಾರ ದೊರೆತಿದೆ. 'ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ', 'ಗುಲ್ವಾಡಿ ವೆಂಕಟರಾವ್ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಮಂಗಳೂರು ಸಂದೇಶ ಪ್ರಶಸ್ತಿ, ನವದೆಹಲಿ ಕಥಾ ಪ್ರಶಸ್ತಿ, ಪುತ್ತೂರು ನಿರಂಜನ ಸಾಹಿತ್ಯ ಪ್ರಶಸ್ತಿ' ಮುಂತಾದ ಪ್ರಶಸ್ತಿಗಳಿಂದ ಇವರು ಪುರಸ್ಕೃತರಾಗಿದ್ದಾರೆ. ಜನವರಿ ೨೦೧೪ರಲ್ಲಿ ಮಡಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.



## ಓದಿ ತಿಳಿಯಿರಿ

ಹಾಡ್ಗತೆ – ಹಾಡು ಸೇರಿರುವ ಕತೆ; ತರಾವರಿ –ವಿಧವಿಧವಾದ; ಭೀತಿ – ಭಯ, ಹೆದರಿಕೆ; ಪ್ರಾಣಿಗಿಂಡಿ – ಕಾಡಿನಲ್ಲಿರುವ ಪ್ರಾಣಿಗಳು ನೀರನ್ನು ಕುಡಿಯುವುದಕ್ಕಾಗಿ ಹೋಗಲು ಮಾಡಕೊಂಡ ಕಿಂಡಿ ; ಅಂಗಳ–ಅಂಗಣ, ಮನೆಯ ಮುಂದಿನ ಅಥವಾ ಹಿಂದಿನ ಬಯಲು ಭಾಗ; ಸಾಂತ್ವನ – ಸಮಾಧಾನ, ಸಂತೈಸುವಿಕೆಯ ನುಡಿ; ಆಶ್ರಯ – ಆಸರೆ, ಅವಲಂಬನೆ, ಸಹಾಯ, ರಕ್ಷಣೆ; ಮದ್ದು –ಔಷಧ; ಪಲಾಯನ ಪಠಿಸು–ಓಡಿ ಹೋಗು; ಮಾಗು– ಒಣಗು, ವಾಸಿಯಾಗು; ಸಂಭ್ರಮ– ಉತ್ಸಾಹ, ಸಡಗರ, ಸಂತೋಷ ; ಬಿಡೆ – ಬಿಡುವುದಿಲ್ಲ; ಯಾವತ್ತಾರ – ಯಾವತ್ತಾದರೂ, ಇನ್ನೊಂದು ದಿನ.

## ಅಭ್ಯಾಸ

**೧. ಕೆಳಗೆ ನೀಡಿರುವ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಪುಟ್ಟಜ್ಜಿಯ ಬಳಿ ಹುಡುಗ ಯಾವ ಕತೆ ಹೇಳಬೇಕೆಂದು ಕೇಳಿದ?

೨. ಯುವಕ ಮನೆಯ ಮುಂದೆ ಏನು ಮಾಡಿದ?

೩. ಜಿಂಕೆಯ ಕುತ್ತಿಗೆಯಲ್ಲಿ ಏನಿತ್ತು?

೪. ಹುಲಿ ಸೋತು ಏನು ಮಾಡಿತು?

೫. ಯುವತಿ ಕರೆದುಕೊಂಡು ಹೋಗುತ್ತೇನೆ ಎಂದಾಗ ಚುಕ್ಕಿ ಏನು ಮಾಡಿತು?

೬. ಹಳ್ಳದ ದಂಡೆಯ ಮೇಲಿನ ಊರು ಏನಾಯಿತು ?

**೨. ಕೆಳಗೆ ನೀಡಿರುವ ಪ್ರಶ್ನೆಗಳಿಗೆ ಎರಡು-ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಹಳ್ಳ ಹರಿದು ಊರ ಜನರನ್ನು ಏನುಮಾಡಿದೆ?

೨. ಯುವಕ ಹಳ್ಳದ ಬಳಿಗೆ ಬಂದು ಏನು ಮಾಡಿದ ?

೩. ಹುಲಿ ಮತ್ತು ಯುವಕನ ನಡುವೆ ನಡೆದ ಸಂಭಾಷಣೆ ಏನು?

೪. ಜಿಂಕೆಯನ್ನು ನೋಡಿದ ಯುವತಿ ಏನು ಮಾಡಿದಳು?

೫. ಯುವಕ ಚುಕ್ಕಿಯ ಬಗೆಗೆ ಯುವತಿಗೆ ಏನು ಹೇಳಿದ?

**೩. ಕೆಳಗೆ ನೀಡಿರುವ ವಾಕ್ಯಗಳನ್ನು ಯಾರು? ಯಾರಿಗೆ? ಹೇಳಿದರು ಎಂಬುದನ್ನು ಬರೆಯಿರಿ.**

೧. "ಯಾವುದಾದರೊಂದು ಹಾಡ್ಗತೆ ಹೇಳು"

೨. "ಏಯ್ ಯುವಕ, ಈ ಜಿಂಕೆ ನನ್ನ ಆಹಾರ"

೩. "ಇದು ನಾವು ಸಾಕಿಕೊಂಡ ಜಿಂಕೆ"

೪. "ನಾನು ಚುಕ್ಕಿಯನ್ನು ಬಿಟ್ಟು ಇರಲಾರೆ."

**೪. ಕೆಳಗೆ ನೀಡಿದ ಸೂಚನೆಯಂತೆ ಉತ್ತರ ಬರೆಯಿರಿ.**

೧. ಈ ಪಾಠದಲ್ಲಿ ಬಂದಿರುವ ಪ್ರಾಣಿಗಳ ಹೆಸರನ್ನು ಪಟ್ಟಿಮಾಡಿ.

೨. ಈ ಪಾಠದಲ್ಲಿ ಬಂದಿರುವ ವ್ಯಕ್ತಿಗಳ ಹೆಸರನ್ನು ಪಟ್ಟಿಮಾಡಿ.

**೫. ಕೆಳಗೆ ನೀಡಿರುವ ಸೂಚನೆಯಂತೆ ಉತ್ತರ ಬರೆಯಿರಿ.**

೧. ಅಜ್ಜಿ ಮತ್ತು ಕತೆ ಕೇಳುವ ಹುಡುಗನ ಸಂಭಾಷಣೆ ಬರೆಯಿರಿ.

೨. ಯುವಕ ಮತ್ತು ಯುವತಿಯ ನಡುವೆ ನಡೆದ ಸಂಭಾಷಣೆಯನ್ನು ಬರೆಯಿರಿ.

**೬. ಕೆಳಗಿನ ಪದಗಳಿಗೆ ಅರ್ಥ ಬರೆಯಿರಿ.**

ಪೊರೆ, ಪ್ರಾಣಿಗಿಂಡಿ, ಭಯ, ತೊಗಟೆ, ಮದ್ದು, ಯಾವತ್ತಾರ.

೭. ಕೆಳಗೆ 'ಅ' ಪಟ್ಟಿಯಲ್ಲಿ ಹೆಸರುಗಳನ್ನು,'ಆ' ಪಟ್ಟಿಯಲ್ಲಿ ಹೆಸರಿಗೆ ಸಂಬಂಧಿಸಿದ ಮತ್ತೊಂದು ಪದವನ್ನು ಕೊಡಲಾಗಿದೆ. ಎರಡು ಪಟ್ಟಿಯ ಪದಗಳನ್ನು ಹೊಂದಿಸಿ ಬರೆಯಿರಿ.

| ಅ | ಆ |
|---|---|
| ಅ. ಪುಟ್ಟಜ್ಜಿ | ಹುಲಿಗೂ ಯುವಕನಿಗೂ |
| ಆ. ಕಾಡು | ಜಿಂಕೆ |
| ಇ. ಚುಕ್ಕಿ | ಸೊಪ್ಪುಸದೆ, ಬೇರು, ತೊಗಟೆ |
| ಈ. ಮದ್ದು | ಕತೆ |
| ಉ. ಹಳ್ಳದ ದಂಡೆ | ಹುಲಿ, ಚಿರತೆ, ಕಾಡುಕೋಣ |
| ಊ. ಜಗಳ | ಊರು ಬೆಳೆಯಿತು |

'ಅ' ಮತ್ತು 'ಆ' ಪಟ್ಟಿಯ ಪದಗಳನ್ನು ಹೊಂದಿಸಿ ನಂತರ ಅವುಗಳನ್ನು ಸೇರಿಸಿ ವಾಕ್ಯಗಳನ್ನು ರಚಿಸಿರಿ

## ಭಾಷಾಭ್ಯಾಸ



೧. ಅ) ಕೆಳಗೆ ಹಲವು ಜೀವಿಗಳ ಹೆಸರುಗಳನ್ನು ನೀಡಲಾಗಿದೆ. ಇವುಗಳನ್ನು ಸಾಕುಪ್ರಾಣಿಗಳು ಮತ್ತು ಕಾಡುಪ್ರಾಣಿಗಳು ಎಂದು ವಿಂಗಡಿಸಿ ಪ್ರತ್ಯೇಕ ಪಟ್ಟಿ ಮಾಡಿರಿ

| | | | | |
|---|---|---|---|---|
| ಹುಲಿ | ಕತ್ತೆ | ಎಮ್ಮೆ | ಆಡು | ಮೇಕೆ |
| ಹಂದಿ | ಕರಡಿ | ಜಿಂಕೆ | ನಾಯಿ | ಕಾಡುಕೋಣ |
| ಬೆಕ್ಕು | ಜಿರಾಫೆ | ಮಂಗ | ಸಿಂಹ | ಘೇಂಡಾಮೃಗ |
| ಚಿರತೆ | ಎತ್ತು | ಸಾರಂಗ | ಕೋಳಿ | ಆನೆ |

ಆ) ಮೇಲಿನ ಎಲ್ಲ ಪ್ರಾಣಿಗಳ ಹೆಸರನ್ನು ಅಕಾರಾದಿಯಾಗಿ ಬರೆಯಿರಿ.

೨. ಕೆಳಗೆ ಪ್ರತ್ಯೇಕ ಗುಂಪುಗಳಲ್ಲಿ ಕೆಲವು ಶಬ್ದಗಳಿವೆ. ಪ್ರತಿ ಗುಂಪಿನಲ್ಲೂ ಆ ಗುಂಪಿಗೆ ಸೇರದ ಒಂದೊಂದು ಶಬ್ದಗಳಿವೆ. ಈ ಶಬ್ದಗಳನ್ನು ಗುರುತಿಸಿ ಮತ್ತು ಆ ಶಬ್ದ ಆ ಗುಂಪಿಗೆ ಏಕೆ ಸೇರುವುದಿಲ್ಲ ಎಂಬುದಕ್ಕೆ ಕಾರಣ ನೀಡಿರಿ.

| ಗುಂಪು ೧ | | ಗುಂಪು ೨ | |
|---|---|---|---|
| ಹಸು | ಎಮ್ಮೆ | ನಾನು | ನೀನು |
| ಕರಡಿ | ಹಂದಿ | ಅವನು | ರಮ್ಯ |
| **ಗುಂಪು ೩** | | **ಗುಂಪು ೪** | |
| ಯುವಕ | ಯುವತಿ | ಕತೆ | ಕವನ |
| ಮುದುಕ | ಅಣ್ಣ | ಪೆನ್ಸಿಲು | ಕಾದಂಬರಿ |

೪. ಕೆಳಗೆ ನೀಡಿರುವ ಕತೆಯಲ್ಲಿ ಕೆಲವು ಪದಗಳನ್ನು ಬಿಟ್ಟು ಆ ಜಾಗದಲ್ಲಿ ಸ್ಥಳವನ್ನೂ ಖಾಲಿ ಬಿಡಲಾಗಿದೆ. ಬಿಟ್ಟ ಸ್ಥಳದಲ್ಲಿ ಇರಬೇಕಾದ ಪದಗಳನ್ನು ಕತೆಯ ಕೆಳಗೆ ಆವರಣದಲ್ಲಿ ನೀಡಲಾಗಿದೆ. ಸೂಕ್ತ ಪದವನ್ನು ಆರಿಸಿ ಬಿಟ್ಟ ಸ್ಥಳದಲ್ಲಿ ತುಂಬಿರಿ.

ಒಂದು ಕಾಗೆ __________ ಬಂದು ಒಂದು __________ ಮೇಲೆ ಕುಳಿತುಕೊಂಡು __________ ಇದ್ದ __________ಯನ್ನು ತಿನ್ನ ತೊಡಗಿತು. ಮೋಸಗಾರ ನರಿ__________ಯನ್ನು ಕಂಡು ತಿನ್ನಬೇಕೆಂದು __________ ಕೆಳಗೆ ನಿಂತು ಕಾಗೆಯನ್ನು ಹೊಗಳಿತು. 'ಎಲ್ಲೈ ಕಾಗೆ ನೀನು __________ ಹಾಡುತ್ತೀಯೆ ನಿನ್ನ __________ ತುಂಬಾ ಚಂದ. ನಿನ್ನ ಹಾಡನ್ನು __________ ಆಸೆ ನನಗೆ ಆಗಿದೆ' ಎಂದು ಹೊಗಳಿತು. ಕಾಗೆ ಅದರ ಹೊಗಳಿಕೆಗೆ ಮಾರು ಹೋಗಿ __________ ಎಂದು ಹಾಡತೊಡಗಿತು. ಆಗ ಅದರ __________ ರೊಟ್ಟಿ ಕೆಳಗೆ __________. ಬಿದ್ದ __________ಯನ್ನು ನರಿ ಕಚ್ಚಿ __________ ಹೋಯಿತು. (ಹಾರಿ, ಮರದ, ಬಾಯಲ್ಲಿ, ರೊಟ್ಟಿ, ಚಂದ, ಹಾಡು, ಕೇಳುವ, ಕಾಕಾಕಾ, ಬಾಯಿಂದ, ಬಿದ್ದಿತು, ಓಡಿ, ಕಾಗೆ, ಕೊಂಬೆ)

## ಚಟುವಟಿಕೆ

ನಿಮ್ಮ ಮನೆಯಲ್ಲಿರುವ ಹಿರಿಯರಿಂದ ಒಂದು ಕಥೆಯನ್ನು ಕೇಳಿ ಬರೆದುಕೊಂಡು ಬನ್ನಿ. ಅನಂತರ ಸ್ನೇಹಿತರೊಂದಿಗೆ ಚರ್ಚಿಸಿ ಎಲ್ಲಾ ಕಥೆಗಳನ್ನು ಒಟ್ಟು ಸೇರಿಸಿ ಒಂದು ಕೈಬರಹದ ಕಥಾಪುಸ್ತಕವನ್ನು ಸಿದ್ಧಪಡಿಸಿ.



## ವ್ಯಾಕರಣ

### ನಾಮಪದ

೧. ಪುಟ್ಟಜ್ಜಿ ಹೇಳಿದ ಕಥೆಯನ್ನು ಓದಿದಿರಲ್ಲ. ಈ ಕತೆಯಲ್ಲಿ ಜಿಂಕೆಗೆ ಮಾತ್ರ 'ಚುಕ್ಕಿ' ಎಂಬ ಹೆಸರಿದೆ. ಇಲ್ಲಿ ಬರುವ ಕಥೆ ಕೇಳುವವರು, ಯುವಕ, ಯುವತಿ, ಊರು, ಕಾಡುಪ್ರಾಣಿಗಳು ಯಾವುದಕ್ಕೂ ಹೆಸರಿಲ್ಲ ಎಂಬುದನ್ನು ಗಮನಿಸಿದ್ದೀರಿ ತಾನೆ ? ಯುವಕ, ಯುವತಿ, ಜಿಂಕೆ, ಹುಲಿ, ಚಿರತೆ, ಮರ, ಮನೆ, ಜಗಲಿ ಇವನ್ನು ಕೇಳಿದಾಗ ವ್ಯಕ್ತಿ, ಪ್ರಾಣಿ, ವಸ್ತುವಿನ ನೆನಪಾಗುತ್ತದೆ. ಆ ಬಗ್ಗೆ ಒಂದು ಚಿತ್ರ ನಮ್ಮ ಮನಸ್ಸಿನಲ್ಲಿ ಬರುತ್ತದೆ. ಹೀಗೆ ಒಬ್ಬ ವ್ಯಕ್ತಿ, ಪ್ರಾಣಿ, ವಸ್ತು, ಸ್ಥಳ ಇವುಗಳನ್ನು ಗುರುತಿಸಲು ನಾವು ಬಳಸುವ ಪದಗಳು ನಾಮಪದಗಳು. ಇಂಥ ಇನ್ನಷ್ಟು ಪದಗಳು ಈ ಕಥೆಯಲ್ಲಿವೆ. ಅವುಗಳಲ್ಲಿ ಕೆಲವನ್ನು ಕೆಳಗೆ ತಿಳಿಸಲಾಗಿದೆ.

ಹಳ್ಳ, ಕಾಡುಕೋಣ, ಆನೆ, ಅಂಗಳ, ಕುತ್ತಿಗೆ, ಗೆಜ್ಜೆ ಇತ್ಯಾದಿ. ಈ ಕಥೆಯಲ್ಲಿರುವ ಉಳಿದ ನಾಮಪದಗಳನ್ನು ಪಟ್ಟಿ ಮಾಡಿ.

೨. ಈ ಕಥೆಯಲ್ಲಿ ಯುವಕ, ಯುವತಿ, ಎಂಬ ಪದಗಳಿವೆ. ಈ ಯುವಕ ಮತ್ತು ಯುವತಿಗೆ ಹೆಸರಿಲ್ಲ. ಅವರಿಗೆ ನೀವೂ ಕೂಡ ಹೆಸರನ್ನು ಇಡಬಹುದು. ಹೀಗೆ ಇಟ್ಟ ಹೆಸರನ್ನು ಅಂಕಿತನಾಮ ಎಂದು ಕರೆಯುತ್ತೇವೆ.

೩. ಕಥೆಯಲ್ಲಿ ಒಬ್ಬ ಕಥೆ ಹೇಳುವ ವ್ಯಕ್ತಿ ಇದ್ದಾರೆ. ಆ ವ್ಯಕ್ತಿ ತನ್ನನ್ನು 'ನಾನು' ಎಂದು ಕರೆದುಕೊಂಡಿದ್ದಾರೆ. ಈ 'ನಾನು' ಯಾರಾಗಿರಬಹುದು? ಇದು ಯುವಕನೂ ಆಗಿರಬಹುದು, ಯುವತಿಯೂ ಆಗಿರಬಹುದು, ಹುಡುಗನೂ ಆಗಿರಬಹುದು, ಹುಡುಗಿಯೂ ಆಗಿರಬಹುದು, ಎಲ್ಲರಿಗೂ ಬಳಸಬಹುದಾದ ನಾಮಪದ. ಇದನ್ನು 'ಸರ್ವನಾಮ' ಎಂದು ಕರೆಯುತ್ತಾರೆ.

**ಕೆಳಗಿನ ವಾಕ್ಯಗಳನ್ನು ಗಮನಿಸಿ:**

ನಾನು ಮನೆಯಲ್ಲಿ ಇದ್ದೇನೆ.
ನೀನು ಪುಸ್ತಕ ಓದುತ್ತಿರುವೆಯಾ?
ಅವನು ಶಾಲೆಗೆ ಹೋದನು.
ಅವಳು ಕೆಲಸಕ್ಕೆ ಹೋದಳು.
ಅದು ರೊಟ್ಟಿಯನ್ನು ಮೂಸಿತು.
ಅದು ಟೇಬಲ್ಲಿನ ಮೇಲಿದೆ.



ಮೇಲಿನ ವಾಕ್ಯಗಳಲ್ಲಿರುವ ನಾನು, ನೀನು ಈ ಪದಗಳನ್ನು ಯಾರು ಯಾರಿಗೂ ಬಳಸಬಹುದು. ಅವನು ಎಂಬುದನ್ನು ಯಾವುದೇ ಗಂಡಸರಿಗೂ ಅವಳು ಎಂಬುದನ್ನು ಯಾವುದೇ ಹೆಂಗಸರಿಗೂ, ಅದು ಎಂಬುದನ್ನು ಯಾವುದೇ ಪ್ರಾಣಿಗೂ ವಸ್ತುವಿಗೂ ಬಳಸಬಹುದು. ಯಾರಿಗಾದರೂ ಬಳಸಬಹುದಾದ ಈ ಪದಗಳು ಸರ್ವನಾಮಗಳು.

**ಕೆಳಗಿನ ವಾಕ್ಯಗಳನ್ನು ಗಮನಿಸಿ:**

ನಾನು ಮನೆಯಲ್ಲಿ ಇದ್ದೇನೆ.
ಪೀಟರ್ ಪುಸ್ತಕ ಓದುತ್ತಿರುವೆಯಾ?
ಹಸೀನಾ ಶಾಲೆಗೆ ಹೋದಳು.
ರಮ್ಯ ಕೆಲಸಕ್ಕೆ ಹೋದಳು.
ನಾಯಿ ರೊಟ್ಟಿಯನ್ನು ಮೂಸಿತು.
ಪೆನ್ನು ಟೇಬಲ್ಲಿನ ಮೇಲಿದೆ.

**ಕೆಳಗಿನ ವಾಕ್ಯಗಳನ್ನು ಗಮನಿಸಿ :**

ನಾವು ಶಾಲೆಗೆ ಹೋಗುತ್ತೇವೆ.

ಅವರು ತಿರುಗಾಡಲು ಹೋದರು.

ಅವು ಆಕಾಶದಲ್ಲಿ ಹಾರುತ್ತಿವೆ.

ಅವು ಹಳ್ಳಿಗಳು.

ಒಬ್ಬನೇ ವ್ಯಕ್ತಿ, ವಸ್ತು, ಸ್ಥಳ, ಪ್ರಾಣಿಗಳನ್ನು ಕುರಿತು ಮಾತನಾಡುವಾಗ ನಾನು, ನೀನು, ಅವನು, ಅವಳು, ಅದು ಎಂಬುದನ್ನು ಬಳಸುತ್ತೇವೆ. ಒಂದಕ್ಕಿಂತ ಹೆಚ್ಚು ವ್ಯಕ್ತಿ, ವಸ್ತು, ಸ್ಥಳ, ಪ್ರಾಣಿಗಳನ್ನು ಕುರಿತು ಹೇಳುವಾಗ ನಾವು, ಅವರು, ಅವು ಎಂಬ ಸರ್ವನಾಮಗಳನ್ನು ಬಳಸುತ್ತೇವೆ.

**ಕೆಳಗಿನ ವಾಕ್ಯಗಳನ್ನು ಗಮನಿಸಿ :**

ನಾನು, ಪೀಟರ್, ಹಸೀನಾ ಶಾಲೆಗೆ ಹೋಗುತ್ತೇವೆ.

ರಾಮು, ಭೀಮು, ಶ್ಯಾಮು ವಾಕಿಂಗ್ ಹೋದರು.

ಹಕ್ಕಿಗಳು ಆಕಾಶದಲ್ಲಿ ಹಾರುತ್ತಿವೆ.

ಹಲ್ಲೂರು, ಬ್ಯಾಡಗಿ, ಕೂಳೂರು ಹಳ್ಳಿಗಳು.



**ಸರ್ವನಾಮದ ಈವರೆಗಿನ ವಿವರಣೆಯ ಹಿನ್ನೆಲೆಯಲ್ಲಿ ಕೆಳಗಿನಂತೆ ಸರ್ವನಾಮಗಳ ಪಟ್ಟಿ ಮಾಡಬಹುದು :**

| ಏಕವಚನ | | | ಬಹುವಚನ | |
|---|---|---|---|---|
| ಪುಲ್ಲಿಂಗ | ಸ್ತ್ರೀಲಿಂಗ | ನಪುಂಸಕ ಲಿಂಗ | ಪುಲ್ಲಿಂಗ, ಸ್ತ್ರೀಲಿಂಗ | ನಪುಂಸಕ ಲಿಂಗ |
| ನಾನು<br>ನೀನು<br>ಅವನು<br>ಇವನು | ನಾನು<br>ನೀನು<br>ಅವಳು<br>ಇವಳು | ಅದು<br>ಇದು | ನಾವು<br>ನೀವು<br>ಅವರು<br>ಇವರು | ಅವು<br>ಇವು |

## ಅಭ್ಯಾಸ

೧. ಕಥೆಯಲ್ಲಿ ಇರುವ ಯುವಕ, ಯುವತಿ, ಕಥೆಗಾರ, ಹಳ್ಳಿ, ನದಿ ಇವುಗಳಿಗೆ ಅಂಕಿತ ನಾಮವನ್ನು ಇಡಿ.

೨. ಅಂಕಣದಲ್ಲಿರುವ ಪದಗಳಲ್ಲಿ ರೂಢನಾಮ ಮತ್ತು ಅಂಕಿತನಾಮಗಳನ್ನು ಗುರುತಿಸಿ ಪ್ರತ್ಯೇಕ ಪಟ್ಟಿಮಾಡಿ.

| | | | | |
|---|---|---|---|---|
| ಅಟ್ಟ | ಅಮರ್ | ಅತ್ತೆ | ಅಕ್ಕಿ | ಅರುಣ್ |
| ಅಜ್ಜಿ | ಆಟ | ಆಡು | ಆರತಿ | ಆಕಾರ |
| ಊಟ | ಊರ್ವಶಿ | ಉಪ್ಪು | ಓತಿಕೇತ | ಕಮಲ |
| ಕಪಿಲ್ | ಕೋತಿ | ಗಂಟೆ | ಗಣೇಶ | ಸಮೀರ್ |
| ಸ್ವರೂಪ್ | ಸಂತೆ | ಫಾತಿಮಾ | ಇಕ್ಬಾಲ್ | ಬೆಂಚು |
| ಶಾಂತಿ | ವಿಜಯ | ಪುಸ್ತಕ | ಕಾವ್ಯ | ಕವಿ |

೩. ಕೆಳಗಿನ ಪದಗಳಲ್ಲಿ ರೂಢನಾಮ ಮತ್ತು ಸರ್ವನಾಮಗಳನ್ನು ಗುರುತಿಸಿ ಪಟ್ಟಿಮಾಡಿ.

| | | | | |
|---|---|---|---|---|
| ನಾನು | ಅಮರ್ | ತಾವು | ಅವಳು | ಅರುಣ್ |
| ಅಜ್ಜ | ನಾವು | ಆಡು | ಆರಿಫ್ | ಅದು |
| ಅವನು | ಡೇವಿಡ್ | ನೀನು | ಮಮ್ತಾಜ್ | ಕಾರ್ತಿಕ್ |
| ಕಪಿಲ್ | ಅವರು | ಬೆಳಗು | ಗಣೇಶ | ಸಮೀರ್ |
| ಸ್ವರೂಪ್ | ಅವಳು | ಫಾತಿಮಾ | ಇಕ್ಬಾಲ್ | ನೀವು |
| ಶಾಂತಿ | ರಾಜೇಶ್ | ಅವನು | ಕಾವ್ಯ | ಅವು |



೪. ಕೆಳಗಿನ ವಾಕ್ಯಗಳಲ್ಲಿ ಕಾಣುವ ಸರ್ವನಾಮಗಳ ಬದಲಿಗೆ ನಿಮಗಿಷ್ಟವಾದ ಹೆಸರಿಟ್ಟು ವಾಕ್ಯವನ್ನು ರಚಿಸಿ.

ನಾನು ಏಳನೆಯ ತರಗತಿಯ ವಿದ್ಯಾರ್ಥಿ.

ನೀನು ಎಂಟನೆಯ ತರಗತಿಯಲ್ಲಿ ಓದುತ್ತಿ.

ನಾವು ಸಂಜೆಯ ವೇಳೆ ಆಡುತ್ತೇವೆ.

ಅವನು ನನ್ನ ಸ್ನೇಹಿತ.

ಅವಳು ನನ್ನ ತಂಗಿ.

ಅವರು ನನ್ನ ತಂದೆ.

ಅದು ಹಣ್ಣನ್ನು ತಿನ್ನುತ್ತದೆ.

ಅವು ಕಾಳನ್ನು ತಿನ್ನುತ್ತವೆ.

**ಚೆನ್ನುಡಿ**

**"ನನ್ನ ಪ್ರೌಢಶಾಲಾ ಶಿಕ್ಷಣ ಮುಗಿಯುವವರೆಗೂ ಕನ್ನಡ ಮಾಧ್ಯಮದಲ್ಲಿಯೇ ಓದಿದ್ದೇನೆ. ನಾನು ಕಾಲೇಜಿಗೆ ಹೋದಾಗ ಎಲ್ಲರಿಗಿಂತ ಉತ್ತಮವಾಗಿ ಇಂಗ್ಲಿಷ್ ಮಾತನಾಡುತ್ತಿದ್ದೆ. ನಾನು ಕನ್ನಡ ಮಾಧ್ಯಮದಲ್ಲಿಯೇ ಓದಬೇಕು, ಉತ್ತಮವಾಗಿ ಇಂಗ್ಲಿಷ್ ಮಾತನಾಡಬೇಕು ಎನ್ನುವುದು ತಂದೆಯ ಆಶಯವಾಗಿತ್ತು. ಆದರೆ ಇಂದು ಅತ್ತಕಡೆ ಇಂಗ್ಲಿಷ್ ಬಾರದೇ ಇತ್ತಕಡೆ ಕನ್ನಡವೂ ತಿಳಿಯದಿರುವ ಕಾಲದಲ್ಲಿ ನಾವಿದ್ದೇವೆ. ಉತ್ತಮ ಇಂಗ್ಲಿಷ್ ಹೇಳಿಕೊಡುವ, ಕನ್ನಡವನ್ನು ಕಲಿಸುವ ಶಿಕ್ಷಣ ನಮಗೆ ಬೇಕಾಗಿದೆ".**

– ಶ್ರೇಷ್ಠ ವಿಜ್ಞಾನಿ, ಕನ್ನಡಿಗ. ಪ್ರೊ. ಸಿ. ಎನ್. ಆರ್. ರಾವ್ ('ಭಾರತರತ್ನ' ಪುರಸ್ಕಾರವನ್ನು ಘೋಷಿಸಿದ ಸಂದರ್ಭದಲ್ಲಿ ಹೇಳಿದ ಮಾತು.)

ಪದ್ಯಪಾಠ ೩

# ಸ್ವಾತಂತ್ರ್ಯ ಸ್ವರ್ಗ

ಡಾ. ಎಂ. ಅಕಬರ ಅಲಿ

**ಪ್ರವೇಶ :** ರಾಜುವಿನ ಮನೆಯಲ್ಲಿ ಒಂದು ಪಂಜರ, ಆ ಪಂಜರದಲ್ಲಿ ಒಂದು ಪುಟ್ಟ ಗಿಳಿ. ಆ ಗಿಳಿ ಮನೆಯವರಿಗೆಲ್ಲ ಅಚ್ಚು ಮೆಚ್ಚು. ಕೆಲವು ದಿನಗಳ ನಂತರ ಗಿಳಿ ಸರಿಯಾಗಿ ಕಾಳು ತಿನ್ನುತ್ತಿಲ್ಲ, ಲವಲವಿಕೆಯಿಂದ ಇಲ್ಲ ಎಂದು ರಾಜುವಿಗೆ ತುಂಬಾ ಬೇಸರವಾಯ್ತು. ಅದನ್ನು ತನ್ನ ಮನೆಯ ಪಕ್ಕದಲ್ಲಿದ್ದ ಪಶು ವೈದ್ಯರಿಗೆ ಹೇಳಿದ. ಅವರು ಬಂದು ಗಿಳಿಯನ್ನು ಪರೀಕ್ಷೆ ಮಾಡಿ ಹೇಳಿದರು " ಇದಕ್ಕೆ ಯಾವ ರೋಗವೂ ಇಲ್ಲ ಬಂಧನವೇ ರೋಗ ಇದನ್ನು ಪಂಜರದಿಂದ ಹೊರಗೆ ಬಿಟ್ಟರೆ ತನ್ನ ಇತರ ಗಿಳಿಗಳನ್ನು ಕೂಡಿಕೊಂಡು ಸಂತೋಷದಿಂದ ಇರುತ್ತದೆ. ಗಿಡಮರಗಳಿರುವ ಜಾಗದಲ್ಲಿ ಇದನ್ನು ಬಿಟ್ಟು ಬನ್ನಿ ಎಂದರು" ರಾಜು ಹಾಗೇ ಮಾಡಿದ. ಬಂಧನದಿಂದ ಬಿಡುಗಡೆಗೊಂಡ ಗಿಳಿ ಪುರ್ರೆಂದು ಹಾರಿ ಹೋಯಿತು. ರಾಜುವಿಗೂ ಅದನ್ನು ನೋಡಿ ಸಂತೋಷವಾಯಿತು. ನನ್ನನ್ನು ನನ್ನ ಮನೆಯಿಂದ ದೂರಮಾಡಿ ಗಿಳಿಯಂತೆ ಬಂಧನದಲ್ಲಿಟ್ಟಿದ್ದರೆ ಏನಾಗಬಹುದಿತ್ತು ಎಂದು ರಾಜು ಯೋಚಿಸತೊಡಗಿದ.





ನಿರ್ಭೀತ ನಿರ್ಮುಕ್ತ ಮನವು ತಾನೆಲ್ಲಿಹುದು;
ಅಭಿಮಾನಧನವೆನಿಪ ಮಸ್ತಕವದು
ಜಗ್ಗದೆಯೆ ಕುಗ್ಗದೆಯೆ ತಗ್ಗದೆಯೆ ಬಗ್ಗದೆಯೆ
ಮೇಲ್ಮೊಗದಿ ನೀಟಾಗಿ ನಿಂದಿರುವುದು;–
ಅಲ್ಲಿ ಆ ಸ್ವಾತಂತ್ರ್ಯ –ಸ್ವರ್ಗದಲಿ, ಓ ತಂದೆ!
ಏಳಲೈ ಬಾಳಲೈ ನಾಡೆಮ್ಮದು!

ಅರಿವು ತಾನ್ ಸರ್ವಸ್ವತಂತ್ರವಾಗಲಿಹುದು;
ಸಂಕುಚಿತತನ ಮನೋವೃತ್ತಿಯಳಿದು
ವಿಶ್ವವೆಂಬುವುದೆಲ್ಲ ಹೋಳು ಹೋಳಾಗದೆಯೆ
ಒಂದಾಗಿ ಚೆಂದಾಗಿ ಬಾಳುತಿಹುದು;–
ಅಲ್ಲಿ ಆ ಸ್ವಾತಂತ್ರ್ಯ – ಸ್ವರ್ಗದಲಿ, ಓ ತಂದೆ!
ಏಳಲೈ ಬಾಳಲೈ ನಾಡೆಮ್ಮದು!

ನನ್ನಿತನದಾಳದಿಂದೆಲ್ಲಿ ನುಡಿ ಹೊರಬಹುದು;
ದುಡಿಮೆಯೆಂಬುವುದೆಲ್ಲಿ ಮುಂದುವರಿದು,
ದಣಿವನ್ನು ಅರಿಯದೆಯೆ ದಣಿವಿಂಗೆ ಮಣಿಯದೆಯೆ,
ಪೂರ್ಣತೆಗೆ ತನ್ನ ಕೈಚಾಚುತಿಹುದು;–
ಅಲ್ಲಿ ಆ ಸ್ವಾತಂತ್ರ್ಯ –ಸ್ವರ್ಗದಲಿ, ಓ ತಂದೆ!
ಏಳಲೈ ಬಾಳಲೈ ನಾಡೆಮ್ಮದು!

ಸಂಪ್ರದಾಯದನಿಷ್ಟ ರೂಢಿ–ನಿಯಮಗಳೆಂಬ
ನಿರ್ಜನದ ಮರುಭೂಮಿ ಹರಹಿನಲ್ಲಿ
ಸುವಿಚಾರವೆಂದೆಂಬ ಪರಿಶುದ್ಧ ವಾಹಿನಿಯು
ಹರಿಗಡಿಯದೆಯೆ ಮುಂದುವರಿಯುವಲ್ಲಿ;–
ಅಲ್ಲಿ ಆ ಸ್ವಾತಂತ್ರ್ಯ –ಸ್ವರ್ಗದಲಿ, ಓ ತಂದೆ!
ಏಳಲೈ ಬಾಳಲೈ ನಾಡೆಮ್ಮದು!

ನಿತ್ಯ ವೈಶಾಲ್ಯವಹ ನಡೆ–ನುಡಿಗಳಿಂದಾಗಿ
ಮನವರಳಿ ತಾನಲ್ಲಿ ಮುಂದರಿವುದು,
ನಿನ್ನೊಲವು, ನಿನ್ನ ದಯೆ, ನಿನ್ನ ಕೃಪೆಯಿಂದಾಗಿ
ನಿನ್ನನ್ನೆ ಧ್ರುವತಾರೆಯೆಂದರಿವುದು;–
ಅಲ್ಲಿ ಆ ಸ್ವಾತಂತ್ರ್ಯ –ಸ್ವರ್ಗದಲಿ, ಓ ತಂದೆ!
ಏಳಲೈ ಬಾಳಲೈ ನಾಡೆಮ್ಮದು!



**ಕ್ಷೇತ್ರ :** ಆಲಿಸುವುದು.

**ಸಾಮರ್ಥ್ಯ : ಕವಿತೆ, ಕಥೆ, ನಾಟಕ, ಪ್ರಬಂಧ, ಪ್ರಹಸನ ಇವುಗಳನ್ನು ಆಲಿಸಿ ಅರ್ಥಮಾಡಿಕೊಳ್ಳುವುದು.**

**ಆಶಯ :** 'ಸ್ವಾತಂತ್ರ್ಯವೇ ಸ್ವರ್ಗ' ಎಂಬ ಮಾತಿದೆ. ಆ ಸ್ವಾತಂತ್ರ್ಯ ಎಂತಹ ಸ್ವರ್ಗವಾಗಬೇಕು ಎಂಬುದು ಪ್ರಶ್ನೆ. ಅದು ಸ್ವೇಚ್ಛೆಯ ಸ್ವರ್ಗವಲ್ಲ. ಅಲ್ಲಿ ಹೆದರಿಕೆ ಇರುವುದಿಲ್ಲ, ನಾವು ನಮ್ಮ ಬಗ್ಗೆ, ನಮ್ಮವರ ಬಗ್ಗೆ, ನಮ್ಮ ನಾಡಿನ ಬಗ್ಗೆ ಹೆಮ್ಮೆಯಿಂದ ತಲೆಯೆತ್ತಿ ನಡೆಯುವಂತಿರಬೇಕು. ಎಲ್ಲರೂ ಒಂದು ಎಂಬ ಭಾವನೆಯಿರಬೇಕು. ಸಂತಸದ ದುಡಿಮೆಯಾಗಬೇಕು. ಒಳ್ಳೆ ವಿಚಾರಗಳು ನಮ್ಮ ಮನಸ್ಸಿಗೆ ಹರಿದು ಬರುವಂತಿರಬೇಕು, ಜೀವಪ್ರೀತಿಗೆ ಅಲ್ಲಿ ಅವಕಾಶವಿರಬೇಕು. ಅಂತಹ ಸ್ವಾತಂತ್ರ್ಯವೇ ಸ್ವರ್ಗ.

## ಕವಿ ಪರಿಚಯ



ಈ ಕವನವನ್ನು ಡಾ. ಎಂ. ಅಕಬರ ಅಲಿ ಅವರ 'ತಮಸಾನದಿ – ಎಡಬಲದಿ' ಎಂಬ ಕವನ ಸಂಕಲನದಿಂದ ಆರಿಸಲಾಗಿದೆ. ಡಾ ಎಂ ಅಕಬರ ಅಲಿ ಅವರು ೧೯೨೫ರ ಮಾರ್ಚ ೩ರಂದು ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಉಳ್ಳಾಗಡ್ಡಿ ಖಾನಾಪುರದಲ್ಲಿ ಜನಿಸಿದರು. ಬೆಳಗಾವಿ, ಸಾಂಗ್ಲಿ ಹಾಗೂ ಪುಣೆಗಳಲ್ಲಿ ತಮ್ಮ ವಿದ್ಯಾಭ್ಯಾಸ ನಡೆಸಿದರು. ಮೈಸೂರಿನ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ (ಇಂದಿನ ಕರ್ನಾಟಕ ಮುಕ್ತ ವಿಶ್ವವಿದ್ಯಾನಿಲಯ)ಯಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತರಾಗಿದ್ದಾರೆ. ಡಾ ಅಕಬರ ಅಲಿಯವರು 'ವಿಷಸಿಂಧು' ಎಂಬ ಅಷ್ಟ ಷಟ್ಪದಿಗಳ ಸಂಗ್ರಹವನ್ನೂ, 'ನವಚೇತನ' 'ಗಂಧಕೇಶರ', ಸುಮನಸೌರಭ' ಎಂಬ ಕವನ ಸಂಗ್ರಹಗಳನ್ನೂ, 'ಅವ್ವ' ಎಂಬ ಚುಟುಕಗಳ ಸಂಗ್ರಹವನ್ನೂ, 'ನಿರೀಕ್ಷೆಯಲ್ಲಿ' ಎಂಬ ಕಾದಂಬರಿಯನ್ನೂ ರಚಿಸಿರುವರು. ೧೯೮೮ರಿಂದ ಕರ್ನಾಟಕ ವಿಧಾನ ಪರಿಷತ್ ಸದಸ್ಯರಾಗಿದ್ದರು.ಇವರಿಗೆ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ಲಭಿಸಿದೆ.

## ಓದಿ–ತಿಳಿಯಿರಿ

ನಿರ್ಭೀತ–ಭಯವಿಲ್ಲದ; ಮಸ್ತಕ–ತಲೆ ; ಹೋಳು–ತುಂಡು ; ಹರಹು–ವಿಸ್ತಾರ ; ವಾಹಿನಿ–ನದಿ ; ಹರಿಗಡಿಯದೆ–ಹರಿಯುವಿಕೆಯು ನಿಲ್ಲದೆ ; ವೈಶಾಲ್ಯ–ವಿಶಾಲತೆ ; ಧ್ರುವತಾರೆ–ಧ್ರುವನಕ್ಷತ್ರ (ಸ್ಥಿರವಾದ ಲಕ್ಷ್ಯ); ನಿರ್ಮುಕ್ತ–ಸರ್ವಸ್ವತಂತ್ರ.



## ಪದ ವಿಂಗಡಣೆ

ನಿರ್+ಮುಕ್ತ, ಹರಿ+ಕಡಿಯದೆ, ನಿನ್ನ+ಒಲವು, ಧ್ರುವತಾರೆ+ಎಂದು+ಅರಿಯುವುದು, ಮನ+ಅರಳಿ.

## ಅಭ್ಯಾಸ

**ಅ) ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಸ್ವಾತಂತ್ರ್ಯಸ್ವರ್ಗದಲಿ ಅಭಿಮಾನಧನವೆನಿಪ ಮಸ್ತಕವು ಹೇಗಿರುತ್ತದೆ?

೨. ಕವಿಯು ಬಾಳು ಹೇಗಿರಬೇಕೆಂದು ಆಶಿಸಿದ್ದಾರೆ?

೩. ಕವಿಯು ಸಂಪ್ರದಾಯದ ಅನಿಷ್ಟ ರೂಢಿ ನಿಯಮಗಳನ್ನು ಏನೆಂದು ಕರೆಯುತ್ತಾರೆ?

೪. ಧ್ರುವತಾರೆ ಎಂದು ಕವಿ ಯಾರನ್ನು ಕರೆಯುತ್ತಾರೆ?

**ಆ) ಕೆಳಗಿನ ಪದಗಳಿಗೆ ಪದ್ಯದಲ್ಲಿರುವ ಸಮಾನಾರ್ಥಕ ಪದಗಳನ್ನು ಬರೆಯಿರಿ.**

ಜಗ, ಸತ್ಯ, ಮರಳುಗಾಡು, ಪ್ರವಾಹ, ಪ್ರೀತಿ, ಅನುಗ್ರಹ.

**ಇ) ಕೆಳಗಿನವುಗಳ ಭಾವನಾಮ ರೂಪವನ್ನು ಬರೆಯಿರಿ.**

ಸ್ವತಂತ್ರ, ವಿಶಾಲ, ನವೀನ, ಕಠಿಣ, ಕರುಣ, ಮಧುರ

**ಈ) ಈ ಪದ್ಯವನ್ನು ಗಟ್ಟಿಯಾಗಿ ಗುಂಪಿನಲ್ಲಿ ಹಾಡಿ.**

## ಭಾಷಾಭ್ಯಾಸ

**ಅ) ಕೆಳಗೆ ನೀಡಿರುವ ವಾಕ್ಯಗಳಲ್ಲಿರುವ ತಪ್ಪನ್ನು ಸರಿಪಡಿಸಿ ಬರೆಯಿರಿ.**

೧. ಅಕ್ಕಿ ಹಕ್ಕಿಯನ್ನು ತಿನ್ನುತ್ತಿದೆ.

೨. ಅನ್ನ ಅಣ್ಣವನ್ನು ಉನ್ನುತ್ತಾನೆ.

೩. ಬಾಲೆಯ ಹಣ್ಣನ್ನು ಬಾಳೆಯು ತಿಂದಳು.

೪. ನಮ್ಮ ಸಾಲೆಯ ಆಸಾ ಹಶುರು ಬನ್ನದ ಪುಸ್ತಕ ತಂದಿದ್ದಾಳೆ.

## ಚಟುವಟಿಕೆ

ನಿಮ್ಮ ಶಾಲೆಯಲ್ಲಿ ಕಳೆದವರ್ಷ ಸ್ವಾತಂತ್ರ್ಯ ದಿನಾಚರಣೆಯನ್ನು ಹೇಗೆ ಆಚರಿಸಿದಿರಿ ಎಂದು ನಿಮ್ಮದೇ ಮಾತುಗಳಲ್ಲಿ ಬರೆಯಿರಿ.



**ಚೆನ್ನುಡಿ**

**'ತನ್ನನ್ನು ತಾನು ಗುರುತಿಸಿಕೊಂಡು,ತನ್ನ ವಿಶೇಷವನ್ನು ಶಕ್ತಿಯ ಪರಿಮಿತಿಯನ್ನು ಅರಿತು, ತನ್ನತನದ ವೈಶಿಷ್ಟ್ಯವನ್ನು ಬೆಳೆಸಿಕೊಳ್ಳುತ್ತಾ ಉಳಿದವರ ಜೊತೆಗೆ ಸಮಭಾವದಿಂದ ಸಹಕರಿಸಲು ಕಲಿಸುವುದೇ ನಿಜವಾದ ಸಂಸ್ಕೃತಿಯ ಲಕ್ಷಣ'**

– ಎಂ. ಗೋಪಾಲಕೃಷ್ಣ ಅಡಿಗ (ಕವಿ, ಕಾದಂಬರಿಕಾರ, ವಿಮರ್ಶಕರು)

# ಸೀನಸೆಟ್ಟರು ನಮ್ಮ ಟೀಚರು

–ವಿ. ಗಾಯತ್ರಿ

**ಪ್ರವೇಶ :** ಪ್ರತಿದಿನ ಮಕ್ಕಳಿಗೆ ಒಂದಲ್ಲ ಒಂದು ರೀತಿಯ ಕಲಿಕೆಯಾಗುತ್ತಿರುತ್ತದೆ. ಮನೆಯಲ್ಲಿ ತಾಯಿ, ತಂದೆ, ಬಂಧುಬಳಗ, ಶಾಲೆಯಲ್ಲಿ ಗುರುಗಳು, ಸಹಪಾಠಿಗಳು, ಹೀಗೆ ಎಲ್ಲರಿಂದಲೂ ಒಂದಲ್ಲ ಒಂದು ಕಲಿಕೆಯಾಗುತ್ತಿರುತ್ತದೆ. ಸೈಕಲ್ ಹೇಳಿಕೊಟ್ಟ ಸ್ನೇಹಿತನೂ ಕೂಡ ಒಂದು ರೀತಿಯಲ್ಲಿ ಟೀಚರೇ ಆಗಿದ್ದಾನೆ. ಹೀಗಾಗಿ ನಮ್ಮ ಜೀವನದಲ್ಲಿ ಹಲವಾರು ಟೀಚರ್‌ಗಳು ಬಂದು ಹೋಗುತ್ತಿರುತ್ತಾರೆ.

ಈಜುವುದು, ಹಾಡುವುದು, ಕಸೂತಿ ಕೆಲಸ ಯಾವುದೇ ಆಗಲಿ ಅಲ್ಲಿ ಒಬ್ಬ ಟೀಚರ್ ಇರುತ್ತಾರೆ. ಅದೇ ರೀತಿ ಯಾರಿಂದ ಏನೇ ಕಲಿತರೂ ಅಲ್ಲಿ ಗುರುವಿನ ಸ್ಥಾನದಲ್ಲಿ ಒಬ್ಬನನ್ನು ಕಾಣಬಹುದು. ಇದೇ ರೀತಿ ನಮಗೆ ಅನೇಕ ವ್ಯಕ್ತಿಗಳಿಂದ ಸಹಾಯ, ಸಹಕಾರ, ಮಾರ್ಗದರ್ಶನ ಸಿಕ್ಕೇ ಸಿಕ್ಕಿರುತ್ತದೆ. ಅವರಲ್ಲೂ ಕೂಡ ಟೀಚರ್‌ರನ್ನು ಕಾಣಬಹುದು. ಅಂತಹ ಒಬ್ಬ ಟೀಚರರ ಕಥೆ ಇಲ್ಲಿದೆ.





"ಇವರು ಇವತ್ತಿನಿಂದ ನಿಮ್ಮ ಟೀಚರು. ಇವರು ನಿಮಗೆ ಏನೆಲ್ಲಾ ಕಲಿಸಿಕೊಡುತ್ತಾರೆ ನೋಡ್ತಾ ಇರಿ" – ಮಳೆಗಾಲ ತೀವ್ರಗೊಳ್ಳುತ್ತಿದ್ದ ಆ ದಿನ ಮಾಂಡವಿ ಹೊಸಾ ಟೀಚರನ್ನು ಮಕ್ಕಳಿಗೆ ಪರಿಚಯಿಸಿದರು. ತುಂಗಾ ಅವರನ್ನು ಸರಿಯಾಗಿ ನೋಡಿದಳು. ಮೊದಲನೆಯದಾಗಿ, ಆತ ವೇಷಭೂಷಣದಿಂದ ಟೀಚರರಂತೆ ಕಾಣುತ್ತಿರಲಿಲ್ಲ. ತುಂಬಾ ಹಳೆಯದಾದ ಒಗೆದ

ಪಂಚೆಯೊಂದನ್ನು ಸೊಂಟಕ್ಕೆ ಸುತ್ತಿ ಮೇಲಕ್ಕೆ ಎತ್ತಿ ಕಟ್ಟಿದ್ದರು. ಒಗೆದ ಚೌಕುಳಿ ಚೌಕುಳಿಯ ಅಂಗಿ, ಹೆಗಲ ಮೇಲೆ ಟವಲೊಂದನ್ನು ಹೊದ್ದಿದ್ದರು. ಅದಕ್ಕಿಂತ ಹಳೆಯ ಟವಲಿನಿಂದ ತಲೆಗೆ ಲಪ್ಪಟೆ ಸುತ್ತಿಕೊಂಡಿದ್ದರು. ಅವರು ಪಂಚೆ ಸುತ್ತಿರುವ ರೀತಿ ಅಭ್ಯಾಸವಿಲ್ಲದ್ದೆಂದು ಎಷ್ಟು ಚೆನ್ನಾಗಿ ಗೊತ್ತಾಗುತ್ತಿತ್ತೆಂದರೆ, ಚಡ್ಡಿಗೆ ದೊರೆತ ಪ್ರಾಮುಖ್ಯ ಪಂಚೆಗೆ ಸಿಗದೆ ಅದು ತುಂಬಾ ಅಮುಖ್ಯನಂತೆ ಮುದುರಿ ಕುಳಿತಿತ್ತು. ಮಕ್ಕಳಿಗೆಲ್ಲಾ "ಇವರೆಂತಾ ಟೀಚರಪ್ಪಾ" ಎಂದು ನಿರಾಸೆಯೂ ಕುತೂಹಲವೂ ಆಗಿತ್ತು.

ಮಾಂಡವಿಯ ಆದೇಶದಂತೆ ಮಕ್ಕಳೆಲ್ಲಾ ಹಳ್ಳದ ದಂಡೆಯಲ್ಲಿ ಕೂಡಿಕೊಂಡರು. ತುಂಗಾಗೆ ತಾನು ಆ ಟೀಚರನ್ನು ಎಲ್ಲೋ ನೋಡಿದ್ದೇನೆ ಅನ್ನಿಸುತ್ತಿತ್ತು. ಎಲ್ಲಿ ಎನ್ನುವುದು ಅಷ್ಟು ಸುಲಭವಾಗಿ ಹೊಳೆಯಲಿಲ್ಲ. ಆತನ ಸ್ನೇಹಮಯ ಮುಖ ಬಿಸಿಲು–ಮಳೆ–ಚಳಿಗಳಿಗೆ ಪಕ್ಕಾಗಿ ಕರ್ರಗೆ ಸುಕ್ಕುಗಟ್ಟಿತ್ತು. ಆತ ತಲೆಗೆ ಸುತ್ತಿದ ಲಪ್ಪಟೆಯಂತೂ ತೀರಾ ಪರಿಚಿತವಾಗಿತ್ತು. "ಹಾಂ, ಹೌದು" ನೆನಪಾಯಿತು. ಪ್ರತಿ ಸಲ ಸಾಮೇರ ಮನೆ ಆಲೆಮನೆಗೆ ಕೋಣ ಹೊಡೆದು ತರುವ ಸೀನಸೆಟ್ಟರು ಇವರು. ತಮ್ಮ ಮೂರೆಕರೆ ಜಮೀನಿನಲ್ಲಿ ತಪ್ಪದೆ ಸಾಸಿವೆ ಬೆಳೆಯುತ್ತಿದ್ದ ಒಬ್ಬರೇ ರೈತ ಇವರು. ತುಂಗಾಳ ದೂರದ ಸಂಬಂಧಿಯಾದ ಸೀನಸೆಟ್ಟರಿಗೂ ಇವಳ ನೆನಪಿತ್ತು. ಪ್ರೀತಿಯಿಂದ ಅವಳ ತಲೆ ಸವರಿ, "ಎಂತಾ, ಮಗಾ, ಆರಾಮಾ? ಅವ್ವ–ಅಪ್ಪಯ್ಯ ಚಂದ ಅದಾರಾ?" ಎಂದು ಕೇಳಿದರು. 'ಓ' ತುಂಗಾ ಸ್ವಲ್ಪ ಜೋರಾಗೇ ಹೇಳಿದಳು. ಹೊಸ ಟೀಚರು ತನ್ನ ಪರಿಚಯಸ್ಥರು ಎಂದು ಇತರ ಮಕ್ಕಳೆದುರಿಗೆ ತೋರಿಸಿಕೊಳ್ಳುವುದು ಅವಳಿಗೆ ಹೆಮ್ಮೆಯೆನಿಸಿತ್ತು.

"ಹಂಗಾರೆ ಸೀನಸೆಟ್ರು ಇನ್ನು ನಮ್ಮ ಟೀಚರು" ಎಂದು ತುಂಗಾ ನಕ್ಕಳು.

"ನಾ ಟೀಚರಲ್ಲ. ಎಂತಾ ಅಲ್ಲ. ನಾನೊಬ್ಬ ಪಡಪೋಶಿ ರೈತ. ನಿಮ್ಮ ಹೆಡ್‌ಮೇಡಮ್ಮ ನಿಮ್ಗೆಲ್ಲಾ ಗದ್ದೆ ಕೆಲ್ಸ ಹೇಳ್ಕೊಡಾಕೆ ನನ್ನ ಕರ್ಸಿದಾರೆ" ಎಂದರು ಸಂಕೋಚ–ತಮಾಷೆಯಿಂದ ಸೀನಸೆಟ್ಟರು. ಮಾಂಡವಿ ಆತನ ಪಕ್ಕಕ್ಕೇ ನಿಂತು, ""ಹೌದು. ಹೌದು, ಇವರು ನಿಮ್ಮ ಬೇಸಾಯದ ಟೀಚರು, ನಿಮಗೆ ಬೇಸಾಯದಲ್ಲಿ ಸಹಾಯ ಮಾಡಲು ಇವರು ಒಪ್ಪಿಕೊಂಡಿರುವುದು ನಮ್ಮ ಪುಣ್ಯ. ಸರಿ ಮೇಷ್ಟ್ರೆ, ಈಗ ನೀವು ಪ್ರಾರಂಭಿಸಬಹುದು"ಎಂದರು.

ಚಿಣ್ಣರ ಲೋಕದ ಬಹುಪಾಲು ಮಕ್ಕಳು ರೈತ ಕುಟುಂಬದವರೇ. ಒಂದಲ್ಲಾ ಒಂದು ರೀತಿಯಲ್ಲಿ ಬೇಸಾಯದಲ್ಲಿ ತೊಡಗಿಕೊಳ್ಳುತ್ತಿದ್ದ ಅವರಿಗೆ ಹೊಸದಾಗಿ ಬೇಸಾಯವನ್ನೇನೂ ಕಲಿಸಬೇಕಾಗಿರಲಿಲ್ಲ. ಆದರೆ ಶಾಲೆಯ ಕಲಿಕೆಯಲ್ಲಿ ಬೇಸಾಯವನ್ನು ಅಳವಡಿಸುವ ಮಾಂಡವಿಯ ಉದ್ದೇಶವೇ ಬೇರೆಯಾಗಿತ್ತು. ಇಂದಿರುವಂತಹ ಶಾಲಾ ಶಿಕ್ಷಣ ಮಕ್ಕಳನ್ನು ಅವರ ನಿಜ ಬದುಕಿನಿಂದ ಪರಕೀಯಗೊಳಿಸುತ್ತಾ ಹೋಗುವುದನ್ನು, ದೊಡ್ಡ ತರಗತಿಗಳಿಗೆ ಹೋದಂತೆ ಕ್ರಮೇಣ ಮಕ್ಕಳು ಶಾಲಾ ಶಿಕ್ಷಣಕ್ಕೂ ತಮ್ಮ ಮಣ್ಣಿನ ಬದುಕಿಗೂ ಏನೇನೂ ಸಂಬಂಧವಿಲ್ಲದಿರುವುದನ್ನು ಕಂಡುಕೊಳ್ಳುತ್ತಲೇ ಎಡಬಿಡಂಗಿಗಳಂತೆ ಆಗಿಬಿಡುವುದನ್ನು ಮಾಂಡವಿ ಗಮನಿಸಿದ್ದರು. ಶಾಲಾ

ಶಿಕ್ಷಣ ನಿಜ ಬದುಕಿನ ಜೊತೆಗೆ ಹಾಸುಹೊಕ್ಕಿನ ಸಂಬಂಧ ಹೊಂದಿರಬೇಕೆಂಬುದೇ ಮಾಂಡವಿಯ ನಂಬಿಕೆಯಾಗಿತ್ತು. ಅದೇ ಅವರ ಶಿಕ್ಷಣ ಮಾದರಿಯ ತಳಹದಿ ಕೂಡಾ. ಶಾಲಾ ಶಿಕ್ಷಣದಲ್ಲಿ ಅವರು ಬೇಸಾಯವನ್ನು ಅಳವಡಿಸಲು ಮುಖ್ಯಕಾರಣ ಇದಾಗಿದ್ದರೂ ಕೂಡ ಅದು ಇನ್ನೂ ಅನೇಕ ವಿಚಾರಗಳಿಗೆ ಸಹಾಯವಾಗಿತ್ತು.

ಮೊದಲನೆಯದಾಗಿ, ಮಣ್ಣಿನ ಕಣ–ಕಣಗಳೊಟ್ಟಿಗೆ ಸಂವಾದಿಸಬಲ್ಲ ಸೀನಸೆಟ್ಟರಂತಹ ರೈತರ ಅನುಭವಜನ್ಯ ವಿವರಣೆ ತರಗತಿಯೊಳಗೆ ನಡೆಯಬೇಕಾದ ಅರ್ಧಪಾಲು ವಿಜ್ಞಾನದ ಪಾಠವನ್ನು ಗದ್ದೆಯಲ್ಲೇ ಕಲಿಸಿಬಿಡುತ್ತಿತ್ತು. ಎರಡನೆಯದಾಗಿ, ಮಕ್ಕಳು ಕುಟುಂಬದೊಂದಿಗೆ ವ್ಯವಸಾಯದಲ್ಲಿ ಪಾಲ್ಗೊಳ್ಳುತ್ತಿದ್ದರೂ ಅವರಿಗೆ ಸಿಗುತ್ತಿದ್ದುದು ಎರಡನೇ ಸ್ಥಾನ, ಸೀಮಿತ ಒಳಗೊಳ್ಳುವಿಕೆ. ಆದರೆ ಇಲ್ಲಿ ಬೇಸಾಯದ ಎಲ್ಲಾ ಹಂತಗಳಲ್ಲೂ ಎಲ್ಲಾ ಕೆಲಸಗಳನ್ನು, ಜವಾಬ್ದಾರಿಗಳನ್ನು ಸ್ವತಃ ತಾವೇ ಮಾಡಬೇಕಾದ್ದರಿಂದ ಅವರಿಗೆ ಇಡಿಯಾದ ಅನುಭವ ಸಿಗುತ್ತಿತ್ತು.

ಹಳ್ಳದ ಬದಿಯ ಎರಡೆಕರೆ ಜಮೀನನ್ನು ಮಾಂಡವಿ ಬೇಸಾಯಕ್ಕೆಂದೇ ಕೊಂಡುಕೊಂಡಿದ್ದರು. ಹಾಗೆಯೇ ಮನೆಯಲ್ಲಿ ಮುಂದುಗಡೆಯ ಒಂದು ರೂಮನ್ನು ಮಕ್ಕಳಿಗೆ ಬೇಸಾಯದ ಸಾಮಗ್ರಿಗಳನ್ನು ಇಟ್ಟುಕೊಳ್ಳಲೆಂದು ತೆರವು ಮಾಡಲಾಗಿತ್ತು. ಈಗಾಗಲೇ ಭತ್ತ ಬಿತ್ತಿದ್ದ ಗದ್ದೆಯದು. ನಿಲ್ಲಲಿ ಎಂದರೂ ಕೇಳದೆ ಜಡಿಮಳೆಯಲ್ಲೇ ಶಾಲೆಯ ಐವತ್ತೂ ಮಕ್ಕಳು ಕಂಬಳಿಗೊಪ್ಪೆ ಹಾಕಿಕೊಂಡು ಸಂಭ್ರಮದಿಂದ ಗದ್ದೆಗಿಳಿದರು ಸೀನಸೆಟ್ಟರ ಜೊತೆ.

“ಮುಂಚೆ ನಾವು ಸಸಿಗಳನ್ನು ಕೀಳಾಣ. ಇವತ್ತೇ ಸಸಿ ಕಿತ್ತು ಮುಗೀತಂದ್ರೆ ನಾಳೆಯಿಂದ ನಾಟಿ ಮಾಡಾಣ” ಸೀನಸೆಟ್ಟರೆಂದರು ಮಕ್ಕಳನ್ನು ಉದ್ದೇಶಿಸಿ. ಮೊದಮೊದಲು ಮಕ್ಕಳಿಗೆ ಹಿಡಿ ತುಂಬಾ ಸಸಿಗಳನ್ನು ಬುಡಸಮೇತ ಕೀಳುವುದು ಸುಲಭವಾಗಲಿಲ್ಲ. ಅನೇಕ ಸಸಿಗಳನ್ನು ಹಾಳು ಮಾಡಿದರು. ಹತ್ತಾರು ಬಾರಿ ಕಿತ್ತು ಕಿತ್ತು ಪ್ರಯತ್ನಿಸಿ ನಂತರ ಅವರಿಗೆ ಕೀಳುವುದು ಅಭ್ಯಾಸವಾಗಿ ವೇಗವೂ ಹಿಡಿಯಿತು. ಅವುಗಳನ್ನು ಸಣ್ಣ ಸಣ್ಣ ಕಟ್ಟುಗಳಲ್ಲಿ ಕಟ್ಟಿ ಕೆಸರು ಗದ್ದೆಯಲ್ಲಿಡುವುದನ್ನು ‘ಟೀಚರು’ ಕಲಿಸಿಕೊಟ್ಟರು.

ಒಂದು ಗಂಟೆಯ ಕೆಲಸದ ನಂತರ ಸೀನಸೆಟ್ಟರು “ಇವತ್ತಿಗೆ ಸಾಕು, ನಾಳೆ ಉಳಿದದ್ದು” ಎಂದರು. ಸಂಭ್ರಮ ಹಿಡಿಸಿಕೊಂಡಿದ್ದ ಮಕ್ಕಳು ಕೇಳಿಯಾರೆ? “ಸೀನ ಸೆಟ್ರೆ, ನಿಮ್ಮ ದಮ್ಮಯ್ಯ, ಇವತ್ತು ಪೂರಾ ಕಿತ್ತೇ ಹೋಗಾಣ” ಎಂದು ಒಕ್ಕೊರಲಿನಿಂದ ಒತ್ತಾಯಪೂರ್ವಕವಾಗಿ ಗೋಗರೆದರು. ಅಷ್ಟರಲ್ಲೇ ಒಂದು ಸಣ್ಣ ಹಾವು ಅವಸರದಿಂದ ಸರಿಯುತ್ತಾ ಹಾಲಪ್ಪ ಎನ್ನುವವನ ಕಾಲನ್ನು ಕಚ್ಚಿಬಿಟ್ಟಿತು. ಅವನು ಹೌಹಾರಿ ಬಿದ್ದ. ತಕ್ಷಣ ಸೀನಸೆಟ್ಟರು ಅವನನ್ನು ಹಿಡಿದುಕೊಂಡರು. “ಹೆದರ್ಬೇಡಾ ಮಗಾ, ಎಂತಾ ಆಗಲ್ಲ. ಅದು ನೀರಾವು. ವಿಷದ ಹಾವಲ್ಲ. ಒಂದು ಮೀನು ಕಚ್ಚಿದ್ರೆ ಹೆಂಗೋ ಅಷ್ಟೇ” ಎಂದು ತಿಳಿ ಹೇಳಿ ಸಮಾಧಾನಿಸಿದರು.

ಮುಂದಿನ ದಿನಗಳಲ್ಲಿ ನಾಟಿ. ಇದು ಸಸಿ ಕೀಳುವುದಕ್ಕಿಂತಲೂ ಕಷ್ಟಕರವಾದ ಕೆಲಸ. ಅನೇಕ ಸಸಿಗಳನ್ನು ಒಟ್ಟಿಗೆ ಹಿಡಿದು ಒಂದೇ ಸಲಕ್ಕೆ ಬೇರು ನಾಟುವಂತೆ ಹೆಬ್ಬೆಟ್ಟಿನಿಂದ ಗಟ್ಟಿಯಾಗಿ ಒತ್ತಿ ಊರಬೇಕು. ಮೊದಮೊದಲಿಗೆ ಕೆಲ ಮಕ್ಕಳಿಗಂತೂ ಇದು ತಮ್ಮಿಂದ ಸಾಧ್ಯವೇ ಇಲ್ಲ ಎನಿಸಿಬಿಟ್ಟಿತು. ಆದರೆ ಸೀನಸೆಟ್ಟರ ಅಪಾರ ತಾಳ್ಮೆ, ಉತ್ತೇಜನಗಳು ಅವರನ್ನು ಕೆಲಸಕ್ಕೆ ಹೊಂದಿಸಿಬಿಟ್ಟವು. 'ಹಾಡು ಹೇಳ್ಕ್ಯಂಡು ಕೆಲಸ ಮಾಡಿ. ಆಗ ಕಷ್ಟಾನೇ ತಿಳಿಯಲ್ಲ' ಎಂದು ಉತ್ತೇಜಿಸಿದರು. ತಕ್ಷಣ ಎಲ್ಲರೂ, 'ಚಂದ್ರಕಾಂತ ಸುರು ಮಾಡೋ' ಎಂದು ಕೂಗಿಕೊಂಡರು. ಅವನ ಧ್ವನಿಗೆ ತಮ್ಮ ಧ್ವನಿಯ ಅಲೆ ಸೇರಿಸಿದರು.

ಮಾರನೆಯ ದಿನ ಯಶೋದ ಹೊಸತನ್ನು ಹುಡುಕಿದ್ದಳು.

"ಕೈ ಎಲ್ಲಿಗ್ ಹೋತು?"

"ಸಂತೆಗೆ"

ಇಬ್ಬರು ಆಡುವ ಈ ಆಟವನ್ನು ಎಲ್ಲರೂ ಭಾಗವಹಿಸುವಂತೆ ಪರಿವರ್ತಿಸಿದ್ದಳು. 'ಕೈ ಎಲ್ಲಿಗ್ ಹೋತು?' ಎಂದು ಒಬ್ಬ ಪ್ರಾರಂಭಿಸಿದರೆ ಪಕ್ಕದಲ್ಲಿರುವವಳು 'ಸಂತೆಗೆ' ಎನ್ನಬೇಕು. ಮತ್ತೆ ಅವಳ ಪಕ್ಕಕ್ಕೆ ನಿಂತವನು 'ಸಂತೆಯಿಂದ ಏನ್ತಂದೆ' ಎಂದರೆ ಮುಂದಿನವಳು 'ಬಾಳೆಹಣ್ಣು' ಎನ್ನುವಳು. ಹೀಗೆ ಆಟ ಸಾಗುವುದು

ಬಾಳೆಹಣ್ಣು ಏನ್ಮಾಡ್ದೆ?
ತಿಂದೆ
ಸಿಪ್ಪೆ ಏನ್ಮಾಡ್ದೆ?
ಕದದ ಮೂಲೆಗೆ ಹಾಕ್ದೆ
ಕದದ ಮೂಲೆ ಏನ್ ಕೊಡ್ತು?
ಚಕ್ಕೆ ಕೊಡ್ತು
ಚಕ್ಕೆ ಏನ್ ಮಾಡ್ದೆ?
ಒಲೆಗೆ ಹಾಕ್ದೆ
ಒಲೆ ಏನ್ ಕೊಡ್ತು?
ಬೂದಿ ಕೊಡ್ತು
ಬೂದಿ ಏನ್ ಮಾಡ್ದೆ?
ಗೊಬ್ಬರದ ಗುಂಡಿಗೆ ಹಾಕ್ದೆ
ಗೊಬ್ಬರದ ಗುಂಡಿ ಏನ್ ಕೊಡ್ತು?
ಗೊಬ್ರ ಕೊಡ್ತು
ಗೊಬ್ರ ಏನ್ ಮಾಡ್ದೆ?
ಬಾಳೆಗಿಡಕ್ಕೆ ಹಾಕ್ದೆ
ಬಾಳೆಗಿಡ ಏನ್ ಕೊಡ್ತು?
ಬಾಳೆಹಣ್ಣು ಕೊಡ್ತು
ಬಾಳೆಹಣ್ಣು ಏನ್ ಮಾಡ್ದೆ?
ಗುಳುಂಗುಳುಂ ತಿಂದೆ.

ಹೀಗೆ ಮತ್ತೆ ಇಡೀ ಪ್ರಶ್ನೆಯುತ್ತರದ ಚಕ್ರ ತಿರುಗುವುದು. ಯಶೋದಳ ಈ ಆಟದಿಂದ ಅಂದು ನಾಟಿ ಮುಗಿಯುವ ವೇಳೆಗೆ ಪ್ರತಿ ಮಕ್ಕಳೂ ನಾಲ್ಕು ಬಾಳೆಹಣ್ಣುಗಳನ್ನಾದರೂ ತಿಂದಿದ್ದರು. ನಾಟಿ ಮುಗಿಯುವವರೆಗೂ ಸೀನಸೆಟ್ರು ಮಕ್ಕಳ ಜೊತೆಗೆ ಇದ್ದು ಅಲ್ಲಿಂದ ಕಾಲಕಾಲಕ್ಕೆ ಅವರು ಗಮನಿಸಿಕೊಳ್ಳಬೇಕಾದ ವಿಷಯಗಳನ್ನೆಲ್ಲಾ ಹೇಳಿಕೊಟ್ಟರು.

ನಾಟಿ ಮುಗಿದ ಮೇಲೆ ಇನ್ನು ಯಾವಾಗ ಹೊಡೆ ಹೊರಟಿತೋ, ಯಾವಾಗ ತೆನೆ ಬಂದಿತೋ ಎಂದು ಮಕ್ಕಳ ಚಡಪಡಿಕೆ. ತುಂಗಾಗಂತೂ ಪ್ರತಿದಿನ ಶಾಲೆಗೆ ಬಂದ ತಕ್ಷಣ ಗದ್ದೆಯನ್ನು ನೋಡುವವರೆಗೆ ಎಂತದೋ ಚಡಪಡಿಕೆ. ಅವಳೂ – ಕಿಟ್ಟನೂ ಸೇರಿ ಮನೆಯ ಅಟ್ಟದ ಮೇಲೆ ಹತ್ತಿ ಕಿಟಕಿ ಕಂಡಿಯಲ್ಲಿ ನೋಡಿದರೆ ಗದ್ದೆ ತುಂಬಾ ಚೆನ್ನಾಗಿ ಕಾಣುತ್ತದೆಂದು ಕಂಡುಕೊಂಡಿದ್ದರು. ಈ ರಹಸ್ಯ ಯಾರಿಗೂ ತಿಳಿಯಬಾರದೆಂದೂ ಗುಟ್ಟಾಗಿಡಲು ಪ್ರಯತ್ನಿಸಿದಷ್ಟೂ ಅದು ಬಯಲಾಗಿಬಿಟ್ಟು ಕೊನೆಗೆ ಅಟ್ಟ, ಗದ್ದೆ ವೀಕ್ಷಣೆಯ ಟವರ್ ಆಗಿ ಪರಿವರ್ತಿತಗೊಂಡಿತ್ತು.

**ಕ್ಷೇತ್ರ :** ಓದುವುದು.

**ಸಾಮರ್ಥ್ಯ : ವಿವಿಧ ಪದಗಳ ಉಚ್ಚಾರಣೆಯಲ್ಲಿರುವ ಧ್ವನಿಸಾಮ್ಯತೆ, ಧ್ವನಿವ್ಯತ್ಯಾಸಗಳನ್ನು ಅರ್ಥಮಾಡಿಕೊಂಡು ಓದುವುದು.**

**ಆಶಯ :** ನಮ್ಮ ಜೀವನದ ಪ್ರತಿ ಹಂತದಲ್ಲೂ ನಾವು ಕಲಿಯುತ್ತಿರುತ್ತೇವೆ. ನಮ್ಮ ವ್ಯಕ್ತಿತ್ವದ ಬೆಳವಣಿಗೆ ಕೇವಲ ಶಾಲೆಯಿಂದಲ್ಲ ಮನೆ, ಇತರರ ಒಡನಾಟ, ಪರಿಸರ, ಮಾಧ್ಯಮಗಳಿಂದ ಜೀವನದ ಪಾಠವನ್ನು ಕಲಿಯುತ್ತ ಬೆಳೆಯುತ್ತೇವೆ. ಶಾಲೆಯಲ್ಲಿ ಗುರುಗಳಿದ್ದಂತೆ ಶಾಲೆಯ ಹೊರಗೂ ಹಲವು ಗುರುಗಳು ನಮಗಿರುತ್ತಾರೆ. ಅವರೆಲ್ಲರ ಕೊಡುಗೆಯಿಂದ ಬೋಧನೆಯಿಂದ ನಾವೆಲ್ಲ ಬೆಳೆಯುತ್ತಾ ಹೋಗುತ್ತೇವೆ. ಈ ವಿಚಾರ ಮನದಲ್ಲಿ ಮೂಡಿದಾಗ ಲೋಕವೇ ನಮ್ಮ ಗುರು ಎಂಬ ಭಾವನೆ ಮೂಡುತ್ತದೆ.



## ಲೇಖಕರ ಪರಿಚಯ



ಶ್ರೀಮತಿ ವಿ. ಗಾಯತ್ರಿ ಲೇಖಕಿ, ಅನುವಾದಕಿ, ಶಿಕ್ಷಣ ಇಲಾಖೆಯ 'ಮಹಿಳಾ ಸಾಮಖ್ಯ' ಮತ್ತು ನೀರಾವರಿ ಇಲಾಖೆಯ 'ಜಲ ಸಂವರ್ಧನೆ ಯೋಜನೆ'ಗಳಲ್ಲಿ ಹಿರಿಯ ಅಧಿಕಾರಿಯಾಗಿ ಅನೇಕ ವರ್ಷಗಳು ಸೇವೆ ಸಲ್ಲಿಸಿದ್ದಾರೆ. ಇವರ ಪ್ರಮುಖ ಪ್ರಕಟಿತ ಕೃತಿಗಳು, **'ತುಂಗಾ'** – ಮಕ್ಕಳ ಸೃಜನಶೀಲ ಕಲಿಕೆಯ ಸುತ್ತ ಹೆಣೆದ ಕಾದಂಬರಿ; **'ತೊತ್ತೋಚಾನ್'** ವಿಶ್ವ ವಿಖ್ಯಾತ ಜಪಾನಿ ಕಾದಂಬರಿಯ ಕನ್ನಡ ಅನುವಾದ. 'ಕರ್ನಾಟಕದಲ್ಲಿ **ಸಾವಯವ ಪರಂಪರೆಯ ಕಥನ ಭಾಗ ೧ ಮತ್ತು ೨'**, 'ಸಹಜ/ಸಾವಯವ ರೈತರ ಕೃಷಿ ಮತ್ತು ಬದುಕುಗಳು', ಕೇಂದ್ರ ಪರಿಸರ ಮಂತ್ರಾಲಯದ ಪರಿಸರ ಶಿಕ್ಷಣ ಕೇಂದ್ರಕ್ಕಾಗಿ **'ಪರಿಸರ ಶಿಕ್ಷಣದಲ್ಲಿ ಆಗತ್ಯ ಕಲಿಕೆಗಳು'**. **'ಎಳೆಯರಿಗಾಗಿ ಪರಿಸರ'** ಮುಂತಾದ ಮಹತ್ವದ ಕೃತಿಗಳ ಅನುವಾದ ಮತ್ತು ಸಂಪಾದನೆ. ಇವು ಶಾಲಾ ಶಿಕ್ಷಕರರಿಗೆ ಓದುವ ಸಾಮಗ್ರಿಗಳಾಗಿವೆ. ಮೇಲಿನ ಪಾಠವನ್ನು ಅವರ 'ತುಂಗಾ'ಕೃತಿಯಿಂದ ಆರಿಸಲಾಗಿದೆ.

## ಓದಿ-ತಿಳಿಯಿರಿ

ತೀವ್ರ-ಹೆಚ್ಚು; ಲಪ್ಪಟೆ-ತಲೆಗೆ ಸುತ್ತಿದ ಬಟ್ಟೆ; ಪಕ್ಕಾಗು-ಒಳಗಾಗು; ಎಂತಾ ಮಗ-ಏನು ಮಗು;ಚಂದ-ಚೆನ್ನಾಗಿ; ಪಡಪೋಶಿ-ಕೆಲಸಕ್ಕೆ ಬಾರದ; ಕರ್ಸಿದಾರೆ-ಕರೆಸಿದ್ದಾರೆ; ತಳಹದಿ-ಬುನಾದಿ; ಸಂವಾದಿಸು-ಮಾತನಾಡು; ಕಂಬಳಿಗೊಪ್ಪೆ-ಮಳೆಯಿಂದ ರಕ್ಷಿಸಿಕೊಳ್ಳಲು ಕಂಬಳಿಯಿಂದ ಮಾಡಿದ ಮುಸುಕು; ಗೊರಬು, ತೆರವು-ಖಾಲಿ; ನಾಟಿ-ಪೈರಿನ ಸಸಿಗಳನ್ನು ನೆಡುವುದು; ನೀರಾವು-ನೀರಿನಲ್ಲಿ ಬದುಕುವ ಹಾವು; ಹೋತು-ಹೋಯಿತು; ಕದ-ಬಾಗಿಲು; ಹೊಡೆ-ಕಾಳು ತುಂಬುವ ಮುನ್ನ ಕಾಣುವ ಪೈರಿನ ತುದಿ; ತೆನೆ- ಕಾಳು ತುಂಬಿದ ಪೈರಿನ ತುದಿ.

## ಅಭ್ಯಾಸ

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಮಾಂಡವಿ ಯಾರನ್ನು ಪರಿಚಯಿಸಿದರು?
೨. ಸೀನಸೆಟ್ಟರು ಜಮೀನಿನಲ್ಲಿ ಏನನ್ನು ಬೆಳೆಯುತ್ತಿದ್ದರು?
೩. ಮಕ್ಕಳು ಏನು ಹಾಕಿಕೊಂಡು ಗದ್ದೆಗೆ ಇಳಿದರು?
೪. ಹಾಲಪ್ಪನ ಕಾಲನ್ನು ಏನು ಕಚ್ಚಿತು?
೫. ಮನೆಯ ಅಟ್ಟ ಮಕ್ಕಳಿಗೆ ಯಾವ ಟವರ್ ಆಗಿ ಪರಿವರ್ತಿತಗೊಂಡಿತ್ತು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯದಲ್ಲಿ ಉತ್ತರಿಸಿರಿ.**

೧. ಸೀನಸೆಟ್ಟರ ವೇಷ ಹೇಗಿತ್ತು?
೨. ದೊಡ್ಡ ತರಗತಿಗಳಿಗೆ ಹೋದಂತೆ ಮಕ್ಕಳು ಏನಾಗುತ್ತಾರೆಂದು ಮಾಂಡವಿಗೆ ಅನಿಸಿತ್ತು?
೩. ಮಕ್ಕಳು ಸಸಿ ಕಿತ್ತ ಬಗೆ ಹೇಗಿತ್ತು?
೪. ಹಾಲಪ್ಪನಿಗೆ ಹಾವು ಕಚ್ಚಿದಾಗ ಸೀನಸೆಟ್ಟರು ಏನು ಹೇಳಿದರು?

**ಇ) ಕೆಳಗಿನ ಮಾತುಗಳನ್ನು ಯಾರು, ಯಾರಿಗೆ, ಹೇಳಿದರು ತಿಳಿಸಿ?**

೧. 'ಹಂಗಾರೆ ಸೀನಸೆಟ್ರು ನಮ್ಮ ಟೀಚರು'
೨. 'ಮುಂಚೆ ಸಸಿಗಳನ್ನು ಕೀಳಾಣ'
೩. 'ಇವತ್ತು ಪೂರಾ ಕಿತ್ತೇ ಹೋಗಾಣ'
೪. 'ಕೈ ಎಲ್ಲಿಗ್ ಹೋತು'

## ಚಟುವಟಿಕೆ

**ಈ) ಶಾಲೆಯಿಂದ ಹೊರಗೆ ನೀವು ಕಲಿಯಬಹುದಾದ ವಿಷಯಗಳನ್ನು ಪಟ್ಟಿಮಾಡಿ.**

ಉ) **ಕೆಳಗೆ ನೀಡಿರುವ ಪದಗಳಲ್ಲಿ ಬೇಸಾಯಕ್ಕೆ ಸಂಬಂಧಿಸಿದ ಪದಗಳನ್ನು ಮತ್ತು ಶಾಲೆಗೆ ಸಂಬಂಧಿಸಿದ ಪದಗಳನ್ನು ಪ್ರತ್ಯೇಕ ಪಟ್ಟಿಮಾಡಿ ಬರೆಯಿರಿ.**

ಗದ್ದೆ, ಬೆಂಚು, ಸಸಿ. ಕಪ್ಪು ಹಲಗೆ, ನಾಟಿ, ಪೈರು, ಪುಸ್ತಕ, ಪೆನ್ನು, ಜಮೀನು, ಮೇಷ್ಟ್ರು, ರೈತ, ಕೆಸರು, ಗಂಟೆ, ತೆನೆ, ಗೊಬ್ಬರ, ಸೀಮೆಸುಣ್ಣ.

## ಪೂರಕ ಮಾಹಿತಿ

### ೧. ಶಿಶುಪ್ರಾಸಗಳು

ಈ ಪಾಠದಲ್ಲಿ ಮಕ್ಕಳ ಹಾಡೊಂದಿದೆ. ಇದನ್ನು ಶಿಶುಪ್ರಾಸ ಎನ್ನಬಹುದು. ಮಕ್ಕಳಿಗಾಗಿ ರಚಿತವಾದ ಹಾಡುವ ಪ್ರಾಸಯುಕ್ತ ಪದಗಳೇ ಶಿಶುಪ್ರಾಸಗಳು ಮಾನವನ ಬದುಕಿನಲ್ಲಿ ಶೈಶವ ಎಷ್ಟು ಸಾಮಾನ್ಯವಾದುದೊ ಶಿಶುಗೀತೆಗಳೂ ಅಷ್ಟೇ ಸಾಮಾನ್ಯವಾದವು. ಮಾತು ಕಲಿಯುವ ಹಂತದಲ್ಲಿ ಮಕ್ಕಳಲ್ಲಿ ಮುಗ್ಧತೆ ಕುತೂಹಲ ತುಂಬಿರುತ್ತದೆ. ದೊಡ್ಡವರು ಕಟ್ಟುವ ಪ್ರಾಸಗಳಿಗಿಂತ ತಮ್ಮ ಓರಗೆಯವರ ಬಾಯಲ್ಲಿ ಬರುವ ಪ್ರಾಸಗಳೇ ಮಕ್ಕಳಿಗೆ ಅಚ್ಚುಮೆಚ್ಚು. ತಮ್ಮ ತಮ್ಮ ಮನೋಧರ್ಮಕ್ಕನುಗುಣವಾದ ಪ್ರಾಸಗಳನ್ನು ಅವರು ಸ್ವೀಕರಿಸುತ್ತಾರೆ. ಹಿಡಿಸದವುಗಳನ್ನು ನಿರಾಕರಿಸುತ್ತಾರೆ. ಮಕ್ಕಳ ಬಹುತೇಕ ಹಾಡುಗಳು ಆಟದ ಅಂಗವಾಗಿ ಬರುತ್ತವೆ. ಆದ್ದರಿಂದ ಇಂಥ ಆಟದ ಹಾಡುಗಳಲ್ಲಿ ಎರಡು ಗುಂಪು ಇರುವುದು ಸಾಮಾನ್ಯ. ಒಬ್ಬ ಒಂದು ಗುಂಪಾಗಿ ಹಾಡಿದರೆ, ಉಳಿದವರು ಮತ್ತೊಂದು ಗುಂಪಾಗಿ ಹಾಡುತ್ತಾರೆ. ಈ ಬಗೆಯ ಕ್ರೀಡಾ ಪ್ರಾಸಗಳಲ್ಲದೆ ಹೆಸರಿನ ಪ್ರಾಸಗಳು, ಸಂಖ್ಯಾಪ್ರಾಸಗಳು, ಒಗಟು ಪ್ರಾಸಗಳು, ಪ್ರಕೃತಿಪ್ರಾಸಗಳು, ದೈನಂದಿನ ವ್ಯವಹಾರಕ್ಕೆ ಸಂಬಂಧಿಸಿದ ಪ್ರಾಸಗಳು, ಕೊಂಡಿಪ್ರಾಸಗಳು ಇತ್ಯಾದಿಯಾಗಿ ವಿಂಗಡಿಸಲು ಸಾಧ್ಯವಿದೆ. ಒಂದೆರಡು ಉದಾಹರಣೆ ಗಮನಿಸಿ.



೧

ಕಣ್ಣಾ ಮುಚ್ಚೆ
ಕಾಡೇಗೂಡೆ
ಉದ್ದಿನ ಮೂಟೆ
ಉರುಳೇ ಹೋಯ್ತು
ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ
ನಿಮ್ಮಯ ಹಕ್ಕಿ ಹಿಡ್ಕೊಳ್ಳಿ

೨

ಗಣೇಶ ಬಂದ
ಕಾಯಿಕಡಬು ತಿಂದ
ದೊಡ್ಕೆರೇಲಿ ಬಿದ್ದ
ಚಿಕ್ಕೆರೇಲಿ ಎದ್ದ

### ೨. ಕೆಳಗೆ ನೀಡಿರುವ ಬಂಡಿ ಆಟದಲ್ಲಿ ಬಿಟ್ಟ ಪದಗಳನ್ನು ತುಂಬಿರಿ:

ಅಚ್ಚಚ್ಚು, ಬೆಲ್ಲದಚ್ಚು, ಅಲ್ಲಿನೋಡು, ಇಲ್ಲಿನೋಡು, ಸಂಪಂಗಿ ಮರದಲಿ ಗುಂಪುನೋಡು,

ಯಾವ ಗುಂಪು? ,__________. ಯಾವ ಕಾಗೆ? ,__________, ಯಾವ ಕಪ್ಪು?__________,

ಯಾವ ಇದ್ದಿಲು?, __________ ಯಾವ ಮರ?__________, ಯಾವ ಮಾವು?__________,

ಯಾವ ಸಿಹಿ? ____________ ಯಾವ ಸಕ್ಕರೆ? ____________ ಯಾವ ಮಂಡ್ಯ, ____________

ಯಾವ ಕರ್ನಾಟಕ ____________

## ವ್ಯಾಕರಣ

### ಕನ್ನಡ ಸಂಧಿಗಳು : ಲೋಪಸಂಧಿ, ಆಗಮಸಂಧಿ, ಆದೇಶ ಸಂಧಿ.

ಒಂದು ಊರಲ್ಲಿ ಒಬ್ಬ ಜಿಪುಣ ವ್ಯಕ್ತಿ ಇದ್ದನು. ಅವನಿಗೆ ಹಣದಾಸೆ ಬಹಳ. ಅವನ ಬಳಿ ಒಂದು ಕೋಳಿ ಇತ್ತು. ಅದು ಚಿನ್ನದ ಮೊಟ್ಟೆಯಿಡುತ್ತಿತ್ತು. ಹಾಗಾಗಿ ಅವನು ಅದನ್ನು ಊರಾಚೆಗಿನ ಬೆಟ್ಟದಾವರೆಯ ಕೊಳದ ಬಳಿ ಬಚ್ಚಿಟ್ಟಿದ್ದನು. ಅದು ದಿನವೊಂದಕ್ಕೆ ಒಂದೊಂದು ಮೊಟ್ಟೆಯಂತೆ ನೂರಾರು ಮೊಟ್ಟೆಗಳನ್ನು ಕೊಟ್ಟಿತ್ತು. ಆದರೂ ಅವನಿಗೆ ಆಸೆ. ಅದನ್ನು ಕೊಂದುಬಿಟ್ಟರೆ ತುಂಬಾ ಚಿನ್ನದ ಮೊಟ್ಟೆ ಸಿಗಬಹುದು ಎಂದುಕೊಂಡು ಒಂದು ದಿನ ಕೊಂದುಬಿಟ್ಟನು. ಮುಂದೇನಾಯಿತು ಯೋಚಿಸಿ.

ಊರಲ್ಲಿ ಮೊಟ್ಟೆಯಿಡು, ಬೆಟ್ಟದಾವರೆ ಮೊದಲಾದ ಪದಗಳನ್ನು ಊರು ಅಲ್ಲಿ ಮೊಟ್ಟೆ ಇಡು, ಬೆಟ್ಟ ತಾವರೆ ಎಂದು ಓದಬಹುದಾದರೂ ನಾವು ಮಾತನಾಡುವಾಗ ಸುಲಭವಾಗಲು ಈ ಪದಗಳನ್ನು ಕೂಡಿಸಿ ಊರಲ್ಲಿ ಮೊಟ್ಟೆಯಿಡು, ಬೆಟ್ಟದಾವರೆ ಇತ್ಯಾದಿಯಾಗಿ ಓದುತ್ತೇವೆ. ಹೀಗೆ ಪದಗಳನ್ನು ಎಡೆಬಿಡದೆ ಒಟ್ಟಿಗೆ ಕೂಡಿಸಿ ಓದುವುದಕ್ಕೆ ಅಥವಾ ಹೇಳುವುದಕ್ಕೆ 'ಸಂಧಿ' ಎಂದು ಹೆಸರು.

ಈ ಪದಗಳನ್ನು ಸೇರಿಸಿ ಹೇಳುವಾಗ ಆ ಪದಗಳಲ್ಲಿ ಇರುವ ಅಕ್ಷರಗಳಲ್ಲಿ ಒಂದು ಅಕ್ಷರ ಬಿಟ್ಟುಹೋಗಬಹುದು (ಉದಾಹರಣೆ ಗಮನಿಸಿ), ಇಲ್ಲವೇ ಇರುವ ಅಕ್ಷರಗಳ ಜೊತೆಗೆ ಒಂದು ಅಕ್ಷರ ಹೊಸದಾಗಿ ಸೇರಿಕೊಳ್ಳಬಹುದು, ಅಥವಾ ಒಂದು ಅಕ್ಷರದ ಬದಲಿಗೆ ಮತ್ತೊಂದು ಅಕ್ಷರ ಬರಬಹುದು. ಹೀಗೆ ಸಂಧಿಯಾಗುವಾಗ ಅಕ್ಷರಗಳು ಲೋಪವಾಗುವುದು, ಅಕ್ಷರ ಬಂದು ಸೇರುವುದು ಅಥವಾ ಒಂದು ಅಕ್ಷರದ ಬದಲಿಗೆ ಮತ್ತೊಂದು ಅಕ್ಷರ ಬಂದು ಸೇರುವುದಕ್ಕೆ 'ಸಂಧಿಕಾರ್ಯ' ಎನ್ನುವರು.

ಸಂಧಿಯಾಗುವಾಗ ಅಕ್ಷರ ಲೋಪವಾದರೆ ಅದನ್ನು 'ಲೋಪಸಂಧಿ' ಎನ್ನುವರು. ಉದಾ: ಊರಲ್ಲಿ–ಊರು+ಅಲ್ಲಿ

ಸಂಧಿಯಾಗುವಾಗ ಒಂದು ಅಕ್ಷರ ಹೊಸದಾಗಿ ಬಂದರೆ ಅದನ್ನು 'ಆಗಮ ಸಂಧಿ' ಎನ್ನುವರು. ಉದಾ: ಮೊಟ್ಟೆ+ಇಡು–ಮೊಟ್ಟೆಯಿಡು.

ಸಂಧಿಯಾಗುವಾಗ ಒಂದು ಅಕ್ಷರದ ಬದಲಿಗೆ ಮತ್ತೊಂದು ಅಕ್ಷರ ಬಂದರೆ ಅದನ್ನು 'ಆದೇಶ ಸಂಧಿ' ಎನ್ನುವರು. ಉದಾ: ಬೆಟ್ಟ+ತಾವರೆ –ಬೆಟ್ಟದಾವರೆ

## ಅಭ್ಯಾಸ

**ಕೆಳಗಿನ ವಾಕ್ಯಗಳಲ್ಲಿ ಸಂಧಿಯಾಗಿರುವ ಪದಗಳನ್ನು ಗುರುತಿಸಿ ಸಂಧಿಯ ಹೆಸರು ತಿಳಿಸಿ.**

ಉದಾ: ನೀನೇಕೆ ನಮ್ಮೊಡನೆ ಊರಿಗೆ ಬರುವುದಿಲ್ಲ?

ನೀನೇಕೆ, ನಮ್ಮೊಡನೆ, ಊರಿಗೆ – ಲೋಪಸಂಧಿ

೧ ಹಾಸಿಗೆಯಿದ್ದಷ್ಟು ಕಾಲನ್ನು ಚಾಚು.

೨ ದೇವನೊಲಿದಾತನೇ ಜಾತ ಸರ್ವಜ್ಞ.

೩ ಬಾಯಿದ್ದವರು ಬರದಲ್ಲೂ ಬದುಕಿದರು.

### ಸಂಸ್ಕೃತ ಸಂಧಿಗಳು

**ಕೆಳಗಿನ ವಾಕ್ಯವೃಂದವನ್ನು ಗಮನಿಸಿ.**

*ಮಕ್ಕಳು ಚೆನ್ನಾಗಿ **ವಿದ್ಯಾಭ್ಯಾಸ** ಮಾಡಬೇಕು. **ಸೂರ್ಯೋದಯಕ್ಕೆ** ಮುನ್ನ ಎದ್ದು ಅಭ್ಯಾಸ ಮಾಡುವುದು ಒಳ್ಳೆಯದು. ಸೂರ್ಯೋದಯವನ್ನು **ಅರುಣೋದಯ** ಎಂದೂ ಕರೆಯಬಹುದು. ಸೂರ್ಯ ನಮಗೆ ಹತ್ತಿರದ **ಏಕೈಕ** ನಕ್ಷತ್ರ. ಸೂರ್ಯನಿಂದ **ಅತ್ಯಂತ** ಪ್ರಖರವಾದ ಬೆಳಕು ಭೂಮಿಗೆ ದೊರೆಯುತ್ತದೆ.ಸೂರ್ಯ **ದಿಗಂತದಲ್ಲಿ**ದ್ದಂತೆ ಕಾಣುತ್ತಾನೆ. ಸೂರ್ಯನೇ **ಜಗಜ್ಜ್ಯೋತಿ**, ಸೂರ್ಯನೇ **ಚಿನ್ಮಯ**.*

ಮೇಲಿನ ವಾಕ್ಯವೃಂದದಲ್ಲಿ ಹಲವು ಸಂಸ್ಕೃತ ಪದಗಳಿವೆ. ಈ ಪದಗಳು ಕನ್ನಡ ಭಾಷೆಯಲ್ಲಿ ಹಾಸುಹೊಕ್ಕಾಗಿ ಸೇರಿವೆ. ಕೆಲವು ಪದಗಳು ಸಂಧಿಯಾಗಿ ಪ್ರಯೋಗವಾಗಿವೆ. ಇಲ್ಲಿಯ ಸಂಧಿಕಾರ್ಯ ಸಂಸ್ಕೃತ ಭಾಷೆಯ ನಿಯಮಗಳ ಪ್ರಕಾರ ನಡೆದಿದೆ. ಇಂಥ ಪದಗಳ ಸೇರಿಕೆಯನ್ನು ಸಂಸ್ಕೃತ ಸಂಧಿಗಳು ಎಂದು ಕರೆಯುತ್ತೇವೆ. ಅಂದರೆ, ಸಂಸ್ಕೃತ–ಸಂಸ್ಕೃತ ಪದಗಳು ಸೇರಿ ಸಂಧಿಯಾದರೆ ಅಂತಹ ಸಂಧಿಗಳನ್ನು ಸಂಸ್ಕೃತ ಸಂಧಿ ಎಂದು ಕರೆಯುತ್ತೇವೆ. ಕನ್ನಡದಂತೆಯೇ ಸಂಸ್ಕೃತದಲ್ಲೂ ಸ್ವರಸಂಧಿಗಳೂ ವ್ಯಂಜನಸಂಧಿಗಳೂ ಇವೆ. ಅವುಗಳ ಬಗ್ಗೆ ತಿಳಿಯೋಣ.



### ಸವರ್ಣದೀರ್ಘ ಸಂಧಿ

೧. ನನ್ನ ಗೆಳೆಯ ರವೀಂದ್ರ.

೨. ಕರ್ನಾಟಕದಲ್ಲಿ ಹಲವು ದೇವಾಲಯಗಳಿವೆ.

೩. ಗುರೂಪದೇಶವನ್ನು ಪಡೆಯುವುದು ಒಳ್ಳೆಯದು.

೪. ಗಾಂಧೀಜಿಯವರನ್ನು ಮಹಾತ್ಮ ಎಂದು ಕರೆಯಲಾಗುತ್ತದೆ.

ಮೇಲಿನ ವಾಕ್ಯಗಳಲ್ಲಿರುವ ರವೀಂದ್ರ, ದೇವಾಲಯ, ಗುರೂಪದೇಶ, ಮಹಾತ್ಮ ಈ ಶಬ್ದಗಳಲ್ಲಿ ಆಗಿರುವ ಸಂಧಿಕಾರ್ಯವನ್ನು ಗಮನಿಸಿ.

**ಪೂರ್ವಪದ+ಉತ್ತರಪದ = ಸಂಧಿಪದ**

೧. ರವಿ+ಇಂದ್ರ–ರವೀಂದ್ರ(ಇ+ಇ=ಈ)

೨. ದೇವ+ಆಲಯ–ದೇವಾಲಯ(ಅ+ಆ=ಆ)

೩. ಗುರು+ಉಪದೇಶ–ಗುರೂಪದೇಶ(ಉ+ಉ=ಊ)

೪. ಮಹಾ+ಆತ್ಮ–ಮಹಾತ್ಮ(ಆ+ಆ=ಆ)

ಮೇಲಿನ ಪದಗಳಲ್ಲಿರುವಂತೆ ಪೂರ್ವಪದದ ಅಂತ್ಯಸ್ವರ ಮತ್ತು ಉತ್ತರ ಪದದ ಆರಂಭದ ಸ್ವರ ಒಂದೇ ರೀತಿಯ ವರ್ಣವಾಗಿದ್ದರೆ, ಸಂಧಿಕಾರ್ಯ ನಡೆಯುವಾಗ ಅದೇ ಸ್ವರದ ದೀರ್ಘಸ್ವರವು ಆದೇಶವಾಗಿರುವುದು ಕಂಡುಬರುತ್ತದೆ. ಸಂಧಿಕಾರ್ಯ ನಡೆಯುವಾಗ ಒಂದೇ ರೀತಿಯ ಸ್ವರಾಕ್ಷರಗಳು ಪರಸ್ಪರ ಸೇರಿ ದೀರ್ಘಸ್ವರ ಆದೇಶವಾದರೆ ಅಂತಹ ಸಂಧಿಯನ್ನು **'ಸವರ್ಣದೀರ್ಘಸಂಧಿ'** ಎಂದು ಕರೆಯುತ್ತೇವೆ.

## ಗುಣ ಸಂಧಿ

**ಪೂರ್ವಪದ + ಉತ್ತರಪದ = ಸಂಧಿಪದ**

೧. ದೇವ+ಇಂದ್ರ=ದೇವೇಂದ್ರ (ಅ+ಇ=ಏ)

೨. ಮಹಾ+ಈಶ=ಮಹೇಶ (ಆ+ಈ=ಏ)

೩. ಅರುಣ+ಉದಯ=ಅರುಣೋದಯ (ಅ+ಉ=ಓ)

೪. ಮಹ+ಋಷಿ=ಮಹರ್ಷಿ(ಅ+ಋ=ಅರ್)

'ಅ' ಅಥವಾ 'ಆ' ಎಂಬ ಸ್ವರಗಳಿಗೆ 'ಇ'ಅಥವಾ 'ಈ' ಎಂಬ ಸ್ವರ ಸೇರಿದಾಗ 'ಏ'ಕಾರವೂ 'ಉ' ಅಥವಾ 'ಊ' ಸ್ವರಗಳು ಸೇರಿದಾಗ 'ಓ'ಕಾರವೂ 'ಋ' ಎಂಬ ಸ್ವರವು ಸೇರಿದಾಗ 'ಅರ್' ಕಾರವೂ ಆದೇಶವಾಗಿ ಬರುವುದನ್ನು **'ಗುಣಸಂಧಿ'** ಎಂದು ಕರೆಯುತ್ತೇವೆ.

## ವೃದ್ಧಿಸಂಧಿ

**ಪೂರ್ವಪದ + ಉತ್ತರಪದ=ಸಂಧಿಪದ**

೧. ಏಕ+ಏಕ=ಏಕೈಕ(ಅ+ಏ=ಐ)

೨. ಶಿವ+ಐಕ್ಯ=ಶಿವೈಕ್ಯ(ಅ+ಐ=ಐ)

೩. ಮಹಾ+ಔದಾರ್ಯ=ಮಹೌದಾರ್ಯ(ಆ+ಔ=ಔ)

೪. ವನ+ಔಷಧಿ=ವನೌಷಧಿ(ಅ+ಓ=ಔ)

'ಅ' 'ಆ'ಕಾರಗಳ ಮುಂದೆ ಏ, ಐ ಕಾರಗಳು ಬಂದರೆ ಅವೆರಡರ ಸ್ಥಾನದಲ್ಲಿ 'ಐ'ಕಾರವೂ ಓ, ಔ ಕಾರಗಳು ಬಂದರೆ ಅವೆರಡರ ಸ್ಥಾನದಲ್ಲಿ 'ಔ'ಕಾರವೂ ಆದೇಶವಾಗಿ ಬರುವುದು. ಇದಕ್ಕೆ **'ವೃದ್ಧಿಸಂಧಿ'** ಎಂದು ಹೆಸರು.

## ಯಣ್ ಸಂಧಿ

**ಪೂರ್ವಪದ+ಉತ್ತರಪದ=ಸಂಧಿಪದ**

೧. ಇತಿ+ಆದಿ=ಇತ್ಯಾದಿ (ಇ+ಆ=ಯ್)

೨. ಗುರು+ಆಜ್ಞೆ=ಗುರ್ವಾಜ್ಞೆ (ಉ+ಆ=ವ್)

೩. ಪಿತೃ+ಆರ್ಜಿತ=ಪಿತ್ರಾರ್ಜಿತ(ಋ+ಆ=ರ್)

೪. ಪ್ರತಿ+ಉಪಕಾರ=ಪ್ರತ್ಯುಪಕಾರ(ಇ+ಉ=ಯ್)

೫. ಜಾತಿ+ಅತೀತ=ಜಾತ್ಯತೀತ(ಇ+ಅ=ಯ್)

ಇ, ಈ , ಉ, ಊ,ಋ ಕಾರಗಳಿಗೆ ಸವರ್ಣವಲ್ಲದ ಸ್ವರ ಪರವಾದರೆ, 'ಇ' 'ಈ' ಕಾರಗಳಿಗೆ 'ಯ'ಕಾರವೂ ಉ, ಊ ಕಾರಗಳಿಗೆ 'ವ' ಕಾರವೂ ಋ ಕಾರಕ್ಕೆ 'ರ' ಕಾರವೂ ಆದೇಶವಾಗಿ ಬರುವುದನ್ನು **'ಯಣ್ ಸಂಧಿ'** ಎಂದು ಹೆಸರು. (ಮುಂದುವರೆದಿದೆ..)

**ಚೆನ್ನುಡಿ**

**'ಲೋಕದಲ್ಲಿ ಎಷ್ಟು ಜನರಿದ್ದಾರೋ ಅಷ್ಟು ಅನುಭವಗಳಿವೆ. ಅವುಗಳಲ್ಲಿ ಕೆಲವು ಗ್ರಾಹ್ಯವಾದುವು, ಕೆಲವು ತ್ಯಾಜ್ಯವಾದುವು. ಯಾವುದು ತ್ಯಾಜ್ಯ ಎಂದು ನಿರ್ಧಾರ ಮಾಡುವ ಒರೆಗಲ್ಲು ಯಾವುದು? ಅವರವರ ಸ್ವಂತ ಅನುಭವವೆ!'**

–ಜಿ.ಪಿ.ರಾಜರತ್ನಂ (ಕವಿ ಹಾಗೂ ಚಿಂತಕರು)

# ಭಾಗ್ಯದ ಬಳೆಗಾರ

ಜನಪದಗೀತೆ

**ಪ್ರವೇಶ :** ಶಾಲೆಯಲ್ಲಿ ನಾಡ ಹಬ್ಬದ ಸಂಭ್ರಮ. ಯಾವ ಯಾವ ಮನೋರಂಜನಾ ಕಾರ್ಯಕ್ರಮ ನೀಡಬೇಕೆಂದು ಮಕ್ಕಳಲ್ಲಿ ಚರ್ಚೆ ಪ್ರಾರಂಭವಾಯಿತು. ಹಾಡು, ನಾಟಕ, ನೃತ್ಯ, ಪ್ರಹಸನ ಹೀಗೆ ಪಟ್ಟಿ ಬೆಳೆಯಿತು. ಪೂರ್ಣಿಮಾಳ ಗುಂಪಿಗೆ ನೃತ್ಯಮಾಡುವ ಜವಾಬ್ದಾರಿ ನೀಡಲಾಯಿತು. ಯಾವ ನೃತ್ಯ ಎಂದಾಗ ಜನಪದ ನೃತ್ಯ ಎಂದು ಶ್ರುತಿ ಹೇಳಿದಳು. ಅರವಿಂದ ಸಿನೆಮಾ ಹಾಡಿಗೆ ನೃತ್ಯ ಮಾಡೋಣ ಎಂದ. ಆದರೆ ಉಳಿದವರು ಒಪ್ಪಲಿಲ್ಲ. ನಮ್ಮಲ್ಲಿ ಬಗೆಬಗೆಯ ಹಾಡುಗಳಿವೆ, ಹಳ್ಳಿಯ ಜನ ಪ್ರೀತಿಯಿಂದ ಅದನ್ನು ರಚಿಸಿದ್ದಾರೆ. ಅದರಲ್ಲಿ ಸೊಗಸಾದ ಭಾಷೆ ಇದೆ. ತುಂಬಾ ಅರ್ಥವೂ ಇರುತ್ತದೆ. ರಾಗ ಹಾಕಲೂ ಚೆಂದ ಎಂಬ ಮಾತುಗಳು ಕೇಳಿಬಂದವು. ಮಕ್ಕಳು ಅಭ್ಯಾಸಮಾಡಿ ಒಂದು ಜನಪದ ನೃತ್ಯವನ್ನು ಪ್ರದರ್ಶನ ಮಾಡಿದರು. ಎಲ್ಲರೂ ಅದರ ಸೊಗಸನ್ನು ಮೆಚ್ಚಿದರು. ಹಲವು ದಿನಗಳು ಹಲವರ ಬಾಯಲ್ಲಿ ಆ ನೃತ್ಯದ ಹಾಡುಗಳು ಗುನುಗುಡುತ್ತಿದ್ದವು.





ಭಾಗ್ಯದ ಬಳೆಗಾರ ಹೋಗಿ ಬಾ ನನ್ತವರಿಗೆ ॥
ನಿನ್ನ ತವರೂರ ನಾನೇನು ಬಲ್ಲೆನು
ಗೊತ್ತಿಲ್ಲ ಎನಗೆ ಗುರಿಯಿಲ್ಲ ಎಲೆ ಬಾಲೆ
ತೋರಿಸು ಬಾರೇ ತವರೂರ ॥೧॥

ಬಾಳೆ ಬಲಕ್ಕೆ ಬಿಡೊ ಸೀಬೆ ಎಡಕ್ಕೆ ಬಿಡೊ
ನಟ್ಟ ನಡುವೇಲಿ ನೀ ಹೋಗೋ ಬಳೆಗಾರ
ಅಲ್ಲಿಹುದೇ ನನ್ನ ತವರೂರು।
ಮುತ್ತೈದೆ ಎಲೆ ಹೆಣ್ಣೆ ತೋರುಬಾರೆ ತವರೂರ ॥೨॥

ಆಲೆ ಆಡುತಾವೆ ಗಾಣ ತಿರುಗುತಾವೆ
ನವಿಲು ಸಾರಂಗ ನಲಿತಾವೆ ಬಳೆಗಾರ
ಅದೇ ಕಾಣೋ ನನ್ನ ತವರೂರು।
ಮುತ್ತೈದೆ ಎಲೆ ಹೆಣ್ಣೆ ತೋರುಬಾರೆ ತವರೂರ ॥೩॥

ಹಂಚಿನ ಮನೆ ಕಾಣೋ ಕಂಚಿನ ಕದ ಕಾಣೊ
ಮಿಂಚಾಡೊವೆರಡು ಗಿಣಿ ಕಾಣೊ ಬಳೆಗಾರ
ಅಲ್ಲಿಹುದೇ ನನ್ನ ತವರೂರು।
ಮುತ್ತೈದೆ ಎಲೆ ಹೆಣ್ಣೆ ತೋರುಬಾರೆ ತವರೂರ ॥೪॥

ಮುತ್ತೈದೆ ಹಟ್ಟೀಲಿ ಮುತ್ತೀನ ಚಪ್ಪರ ಹಾಕಿ
ನಟ್ಟ ನಡುವೇಲಿ ಪಗಡೆಯ ಆಡುತಾಳೆ
ಅವಳೆ ಕಾಣೊ ಎನ್ನ ಹಡೆದವ್ವಾ।
ಮುತ್ತೈದೆ ಎಲೆ ಹೆಣ್ಣೆ ತೋರುಬಾರೆ ತವರೂರ ॥೫॥

ಅಚ್ಚ ಕೆಂಪಿನ ಬಳೆ ಹಸಿರು ಗೀರಿನ ಬಳೆ
ಎನ್ನ ಹಡೆದವ್ವಗೆ ಬಲು ಆಸೆ ಬಳೆಗಾರ
ಕೊಂಡ್ಹೋಗೊ ಎನ್ನ ತವರೀಗೆ।
ಭಾಗ್ಯದ ಬಳೆಗಾರ ಹೋಗಿ ಬಾ ನನ್ತವರೀಗೆ ॥೬॥



**ಕ್ಷೇತ್ರ :** ಮಾತನಾಡುವುದು,

**ಸಾಮರ್ಥ್ಯ : ನಾಣ್ಣುಡಿ, ನುಡಿಗಟ್ಟು, ಗಾದೆಗಳನ್ನು ಬಳಸಿ ಮಾತನಾಡುವುದು.**

**ಆಶಯ :** ಬಳೆಗಾರ ಊರಿಂದೂರು ತಿರುಗಿ ಬಳೆಗಳನ್ನು ಮಾರುತ್ತಾನೆ. ಹತ್ತಾರು ಊರುಗಳ, ಹಲವು ಜನರ ಪರಿಚಯ ಅವನಿಗಿರುತ್ತದೆ. ಈ ಗೀತೆಯಲ್ಲಿ ತನ್ನ ತಾಯಿಗೆ ಬಳೆಗಳೆಂದರೆ ಇಷ್ಟ. ಅದನ್ನು ಕೊಂಡುಹೋಗಲು ಬಳೆಗಾರನಿಗೆ ಹೇಳುವ ಹೆಣ್ಣಿನ ಮತ್ತು ಪ್ರಶ್ನೆ ಕೇಳುವ ಬಳೆಗಾರನ ಸಂಭಾಷಣೆ ಈ ಗೀತೆಯಲ್ಲಿದೆ. ತಾಯಿಯ ಮನೆಯ ದಾರಿಯನ್ನು ಹೆಣ್ಣುಮಗಳು ತಿಳಿಸುವ ರೀತಿಯಲ್ಲಿ ಸೊಗಸಿದೆ. ಹಳ್ಳಿಯ ಮನೆಯ ಮತ್ತು ಪರಿಸರದ ಸುಂದರವಾದ ಚಿತ್ರಣವಿದೆ. ತನ್ನ ತವರಿನ ಬಗೆಗೆ ಮಗಳಿಗೆ ಅಪಾರ ಪ್ರೀತಿಯಿದೆ. ಹಳ್ಳಿಗಳಲ್ಲೂ ಇಂದು ಅಪರೂಪವಾಗಿರುವ ಈ ಪರಿಸರವನ್ನು, ಅರಿಯಲು ಈ ಹಾಡು ಅವಕಾಶಮಾಡಿಕೊಡುತ್ತದೆ. ಬರಿಯ ಮರಗಿಡ ಪಕ್ಷಿಗಳ ಮೂಲಕವೇ ತವರಿನ ಗುರುತು ಮಾಡಿಕೊಡುವ ಹೆಣ್ಣುಮಗಳ ಜಾಣ್ಮೆಯನ್ನು ಇಲ್ಲಿ ಕಾಣಬಹುದಾಗಿದೆ.

## ಓದಿ–ತಿಳಿಯಿರಿ

ತವರು–ತಾಯಿಯ ಮನೆ, ಹುಟ್ಟಿದ ಮನೆ ; ಬಾಳೆ–ಬಾಳೆಯಗಿಡ ; ಸೀಬೆ–ಪೇರಳೆ; ಮುತ್ತೈದೆ–ಮದುವೆಯಾದ ಹೆಣ್ಣು ; ಕಂಚು–ಒಂದು ಲೋಹ; ಮಿಂಚಾಡು–ಹೊಳೆಯುವುದು; ಗಿಣಿ–ಗಿಳಿ; ಆಲೆ–ಕಬ್ಬಿನ ರಸ ತೆಗೆಯುವ ಯಂತ್ರ, ಗಾಣ; ಸಾರಂಗ–ಮೈಮೇಲೆ ಚುಕ್ಕೆಗಳಿರುವ ಜಿಂಕೆ; ಪಗಡೆ– ಒಂದು ರೀತಿಯ ಆಟ; ನಟ್ಟ ನಡುವೆ– ಮಧ್ಯೆ; ಹಟ್ಟಿ–ಮನೆ; ಹಡೆದವ್ವ– ಹೆತ್ತ ತಾಯಿ; ಕೊಂಡ್ಹೋಗು–ತೆಗೆದುಕೊಂಡುಹೋಗು.

## ವಿವರಣೆ

ಜಾನಪದ – ಜನಪದಕ್ಕೆ ಸಂಬಂಧಿಸಿದ ಅಧ್ಯಯನ, ಜನಪದ – ಜನ ಸಾಮಾನ್ಯರಿಗೆ ಸಂಬಂಧಿಸಿದ್ದು, ಪಗಡೆ – ಹಾಸು (ಪಟ್ಟ), ಕಾಯಿ, ದಾಳ ಬಳಸಿ ಆಡುವ ಒಂದು ರೀತಿಯ ಆಟ.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಬಳೆಗಾರ ಎಲ್ಲಿಗೆ ಹೋಗಿ ಬರಬೇಕೆಂದು ಹೆಣ್ಣು ಹೇಳುತ್ತಾಳೆ?

೨. ತಾಯಿಯ ಮನೆ ಯಾವರೀತಿ ಇದೆ?

೩. ಚಪ್ಪರದ ನಡುವೆ ತಾಯಿ ಯಾವ ಆಟ ಆಡುತ್ತಾಳೆ?

೪. ಹಡೆದವ್ವನಿಗೆ ಯಾವ ಬಣ್ಣದ ಬಳೆ ಎಂದರೆ ಆಸೆ?



**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ತವರು ಮನೆಗೆ ಹೋಗಲು ಗುರುತುಗಳೇನು?

೨. ತವರ ಮನೆ ನೋಡಲು ಹೇಗಿದೆ?

**ಇ. ಈ ಪದ್ಯವನ್ನು ಗಟ್ಟಿಯಾಗಿ ಗುಂಪಿನಲ್ಲಿ ಹಾಡಿ.**

**ಈ. ಬಳೆಗಾರ ಮತ್ತು ಹೆಣ್ಣು ಮಗಳ ಪಾತ್ರವನ್ನು ಹಂಚಿಕೊಂಡು ಇಬ್ಬಿಬ್ಬರು ರಾಗವಾಗಿ ಹಾಡಿ.**

**ಉ. ಕೆಳಗಿನ ಅರ್ಥಕೊಡುವ ಸಾಲುಗಳನ್ನು ಪದ್ಯದಲ್ಲಿ ಗುರುತಿಸಿ.**

೧. ನಿನ್ನ ತವರೂರು ನನಗೇನು ಗೊತ್ತು?

೨. ಅಲ್ಲಿದೆ ನನ್ನ ತವರೂರು.

೩. ನನ್ನ ತವರು ಮನೆಯ ಮಾಡು ಹಂಚಿನದು; ನನ್ನ ತವರು ಮನೆಯ ಬಾಗಿಲು ಕಂಚಿನದು.

೪. ಎಲ್ಲೈ ಬಳೆಗಾರನೇ, ನವಿಲು ಸಾರಂಗ ಅಲ್ಲಿ ಕುಣಿಯುತ್ತವೆ.

೫. ಬಳೆಗಾರ! ನನ್ನ ತಾಯಿ ಅವಳೇ.

೬. ಬಳೆಗಳನ್ನು ನನ್ನ ತವರುಮನೆಗೆ ತೆಗೆದುಕೊಂಡು ಹೋಗು.

೭. ನನ್ನ ತಾಯಿಗೆ ಅಚ್ಚ ಕೆಂಪಿನ ಹಸಿರು ಗೀರಿನ ಬಳೆ ಎಂದರೆ ತುಂಬಾ ಇಷ್ಟ.

**ಊ. ಈ ಪದ್ಯದಲ್ಲಿ ಮತ್ತೆ ಮತ್ತೆ ಬರುವ ಸಾಲುಗಳನ್ನು ಗುರುತಿಸಿ ಅವು ಪದ್ಯದ ಅರ್ಥಕ್ಕೆ ಹೇಗೆ ಶಕ್ತಿ ಕೊಟ್ಟಿವೆ ಎಂದು ಗಮನಿಸಿ.**

**ಋ. ನಮ್ಮ ಮನೆಯ ಗುರುತನ್ನು ಇನ್ನೊಬ್ಬರಿಗೆ ತಿಳಿಸಲು ನಾವು ಸೂಚಿಸುವ ಸ್ಥಳಗಳನ್ನು ಈ ಪದ್ಯದ ಹೆಣ್ಣಿನ ಗುರುತಿನ ಮಾತುಗಳಿಗೆ ಹೋಲಿಸಿ.**

## ಭಾಷಾಭ್ಯಾಸ

### ನುಡಿಗಟ್ಟು



ಒಂದು ಭಾಷೆಯನ್ನಾಡುವ ಜನ ತಮ್ಮ ನಿತ್ಯೋಪಯೋಗದಲ್ಲಿ ಇರುವ ಮೂಲಸಾಮಗ್ರಿಯನ್ನೇ ಉಪಯೋಗಿಸಿ–ಒಂದು ಹೊಸ ರೂಪವನ್ನು ಸೃಷ್ಟಿ ಮಾಡಲು ಅಥವಾ ಇರುವ ರೂಪಕ್ಕೆ ಹೊಸ ಅರ್ಥವನ್ನು ತಾತ್ಕಾಲಿಕವಾಗಿ ಹೊಂದಿಸಿ ಪ್ರಯೋಗಿಸಲು ಶಕ್ತರಾಗುತ್ತಾರೆ. ಅಂಥ ಪ್ರಯೋಗಗಳನ್ನು ನುಡಿಗಟ್ಟುಗಳೆಂದು (ಈಡಿಯಮ್ಸ್) ಗುರುತಿಸುವುದು ವಾಡಿಕೆ. ಅವರಿಬ್ಬರಿಗೆ ಎಣ್ಣೆ ಸೀಗೆ ಎಂದಾಗ, ಪರಸ್ಪರ ವಿರೋಧಿಗಳು ಎಂದರ್ಥ. ಇವನ್ನು ಎಣ್ಣೆ–ತುಪ್ಪ, ಸೀಗೆ–ತುಪ್ಪ ಎಂದಿತ್ಯಾದಿಯಾಗಿ ಉಪಯೋಗಿಸಲು ಬರುವುದಿಲ್ಲ. ಹಣ್ಣು ತಿನ್ನು, ರೊಟ್ಟಿ ತಿನ್ನು ಎಂಬಿತ್ಯಾದಿ ರಚನೆಗಳನ್ನನುಸರಿಸಿ, **ಪೆಟ್ಟು ತಿನ್ನು** ಎಂಬುದೂ ಮೊದಲು ಚಮತ್ಕಾರಕ್ಕೋ ಹಾಸ್ಯಕ್ಕೋ ಆರಂಭವಾಗಿ ಆಕರ್ಷಕವಾಗಿದ್ದುದರಿಂದ ಸ್ಥಿರವಾಗಿ ಬಳಕೆಯಾಗುತ್ತಿದೆ, ಕಣ್ಣಿಗೆ ಬೀಳು, ಕಣ್ಣು ಬಂತು, ಬಾಲಬಿಚ್ಚು, ಮೂಗುತೂರಿಸು, ಹೊಟ್ಟೆಕುಟ್ಟು, ತೋಟದೂರ, ಮೀಸೆ ಮಣ್ಣಾಗು, ಬೇಳೆಬೇಯೊಲ್ಲ, ಕಿವಿಕಚ್ಚು, ಹರಟೆಕೊಚ್ಚು, ಬೆಟ್ಟುಮಡಿಸು, ಟೋಪಿ ಹಾಕು, ಹುಬ್ಬು ಹಾರಿಸು, ತಾರಮ್ಮಯ್ಯ ಆಡು– ಮೊದಲಾದವು ಹೊಸಗನ್ನಡದಲ್ಲಿ ಬೆಳಕಿಗೆ ಬಂದಿರುವ ನುಡಿಗಟ್ಟುಗಳು.

ನುಡಿಗಟ್ಟುಗಳು ವ್ಯಾಕರಣ ನಿಯಮದ ಕಟ್ಟಿಗೆ ಒಳಗಾಗದೆ, ಒಂದು ಭಾಷೆಯನ್ನಾಡುವ ಜನರ ಅನುಭವ, ಅಗತ್ಯ ಹಾಗೂ ಸಂದರ್ಭಕ್ಕೆ ಸರಿಯಾಗಿ, ರೂಪುಗೊಳ್ಳುತ್ತವೆ. ಆಕರ್ಷಕವಾಗಿ, ಸಶಕ್ತವಾಗಿದ್ದಲ್ಲಿ ಬಹುಕಾಲ ನೆಲೆ ನಿಲ್ಲುತ್ತವೆ. ಇಲ್ಲದಿದ್ದರೆ ಅಳಿಸಿ ಹೋಗುತ್ತ, ಮರು ಹುಟ್ಟು–ಪಡೆಯುತ್ತವೆ.

**ಕೆಳಕಂಡ ನುಡಿಗಟ್ಟುಗಳನ್ನು ಗಮನಿಸಿ :**

೧. **ಕಿಡಿಕಾರು**(ಸಿಟ್ಟಿಗೇಳು): ದುರ್ಯೋಧನನನ್ನು ಕಾಣುತ್ತಲೇ ಭೀಮನು ಕಿಡಿಕಾರಿದನು.

೨. **ತಲೆದೂಗು**(ಒಪ್ಪು): ಯಕ್ಷಗಾನ ಪಾತ್ರಧಾರಿಯ ಕುಣಿತ ಕಂಡು ಪ್ರೇಕ್ಷಕರು ತಲೆದೂಗಿದರು.

೩. **ಮುಖ ಅರಳು**(ಸಂತೋಷವಾಗು): ತಾಯಿಯನ್ನು ಕಾಣುತ್ತಲೇ ಮಗುವಿನ ಮುಖ ಅರಳಿತು.

೪. **ಮೇಲುಗೈ**(ಗೆಲುವಿನ ಲಕ್ಷಣ): ಹಾಕಿ ಆಟದಲ್ಲಿ ಭಾರತದ ಮಹಿಳೆಯರು ಜಪಾನ್ ವಿರುದ್ಧ ಮೇಲುಗೈ ಸಾಧಿಸಿದ್ದಾರೆ.

**ಕೆಳಗೆ ನೀಡಿರುವ ನುಡಿಗಟ್ಟುಗಳನ್ನು ಬಳಸಿ ವಾಕ್ಯ ರಚಿಸಿ :**

೧. **ಅಡ್ಡದಾರಿಹಿಡಿ**(ತಪ್ಪು ಕೆಲಸ ಮಾಡು)

೨. **ಎತ್ತಿದ ಕೈ** (ಪ್ರವೀಣ)

೩. **ನೀರಿಗೆ ಹಾಕು** (ವ್ಯರ್ಥಮಾಡು)

೪. **ಬೇರೂರು** (ಸ್ಥಿರವಾಗಿರು)

೫. **ಮೈ ಬಗ್ಗಿಸು** (ಶ್ರಮಪಡು)



**ಚೆನ್ನುಡಿ**

**'ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ ।**
**ಪೆಣ್ಣಲ್ಲವೆ ಪೊರೆದವಳು।**
**ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು।**
**ಕಣ್ಣು ಕಾಣದ ಗಾವಿಲರು।'**

–ಸಂಚಿಯ ಹೊನ್ನಮ್ಮ ('ಹದಿಬದೆಯ ಧರ್ಮ' ಎಂಬ ಸಾಂಗತ್ಯ ಕೃತಿಯನ್ನು ರಚಿಸಿದವರು)

## ಗದ್ಯಪಾಠ – ೬

# ಅನ್ನದ ಹಂಗು, ಅನ್ಯರ ಸ್ವತ್ತು

–ಜೋಗಿ

**ಪ್ರವೇಶ :** ಒಮ್ಮೊಮ್ಮೆ ಗೊತ್ತಿಲ್ಲದಂತೆ ನಾವು ಯಾರದೋ ದಾಕ್ಷಿಣ್ಯಕ್ಕೆ ಯಾರದೋ ಮರ್ಜಿಗೆ ಸಿಲುಕುತ್ತೇವೆ. ಮಾಡುತ್ತಿರುವುದು ತಪ್ಪೆಂದು ಗೊತ್ತಿದ್ದೂ ತಪ್ಪಿಸಿಕೊಳ್ಳಲಾಗದ ಸ್ಥಿತಿಯಲ್ಲಿರುತ್ತೇವೆ. ಯಾವುದೋ ಕೃತಜ್ಞತೆ, ಇನ್ನಾವುದೋ ಒಂದು ಧನ್ಯತೆ, ಮನಸ್ಸಾಕ್ಷಿಯ ಪಿಸುಮಾತು ನಮ್ಮನ್ನು ಎಡಹುವಂತೆ ಮಾಡುತ್ತವೆ. ಇದಕ್ಕೆ ಉದಾಹರಣೆಯಾಗಿ ಮಹಾಭಾರತದ ಶಲ್ಯನ ಪಾತ್ರವನ್ನು ನೋಡಬಹುದು. ಶಲ್ಯ ರಾಜ, ಶೂರ, ಧೀರ. ತನ್ನ ಮನಸ್ಸಿನಂತೆ ನಡೆಯುವವನು. ಆದರೆ ಅಂತಹವನ ಜೀವನದಲ್ಲಿ ದಾಕ್ಷಿಣ್ಯ ಎಂಬುದು ಹೇಗೆ ಆಟ ಆಡಿಸಿತು?

ಈ ದಾಕ್ಷಿಣ್ಯ ಶಲ್ಯನನ್ನೇ ಒಂದು ಕ್ಷಣ ಅವಾಕ್ಕಾಗಿಸಿತು. ಅಂಥವನನ್ನೇ ದಾರಿತಪ್ಪಿಸಿತು. ಸಿಟ್ಟಿನ ಮಾತುಗಾರನಾಗಿದ್ದ ಶಲ್ಯ ಒಂದು ಕ್ಷಣದ ತಪ್ಪಿಗಾಗಿ ಸಾಕಷ್ಟು ಅವಮಾನ ಪಶ್ಚಾತ್ತಾಪ ಅನುಭವಿಸಬೇಕಾಗಿ ಬಂತು. ಅಂಥದ್ದೊಂದು ಪ್ರಸಂಗ ಇಲ್ಲಿದೆ.

ಶಲ್ಯ ಮದ್ರದೇಶದ ರಾಜನಾಗಿದ್ದ. ಆ ದೇಶದ ಪದ್ಧತಿಯಂತೆ ಆತನ ತಂಗಿಗೆ ಮಾದ್ರಿ ಅನ್ನುವ ಹೆಸರು ಬಂತು. ಮಾದ್ರಿಯನ್ನು ಪಾಂಡು ಮದುವೆಯಾದ. ಹೀಗಾಗಿ ಶಲ್ಯ, ನಕುಲ–ಸಹದೇವರಿಗೆ ಸೋದರಮಾವ. ಉಳಿದ ಪಾಂಡವರಿಗೂ ಮಾವ.





ಕುರುಕ್ಷೇತ್ರ ಯುದ್ಧ ಶುರುವಾದಾಗ ಶಲ್ಯ ಪಾಂಡವರಿಗೆ ನೆರವಾಗುವುದಕ್ಕೆ ತನ್ನ ಅಗಾಧವಾದ ಸೇನೆಯನ್ನು ತೆಗೆದುಕೊಂಡು ಉಪಪ್ಲವ್ಯ ಎಂಬ ಪಟ್ಟಣದತ್ತ ಹೊರಡುತ್ತಾನೆ.

ಶಲ್ಯ ಪಾಂಡವರಿಗೆ ಸಹಾಯ ಮಾಡುವುದಕ್ಕೆ ಹೊರಟು ನಿಂತ ಸಂಗತಿ ದುರ್ಯೋಧನನಿಗೆ ತಿಳಿಯುತ್ತದೆ. ಆತ ಕೂಡಲೇ ಒಂದು ಉಪಾಯ ಮಾಡುತ್ತಾನೆ. ಸಾವಿರಾರು ಸೇವಕರನ್ನು ಕಳುಹಿಸಿ ಶಲ್ಯನ ಸೇನೆ ಹಾದುಬರುವ ದಾರಿಯುದ್ದಕ್ಕೂ ಊಟೋಪಚಾರದ, ವಸತಿಯ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡುವಂತೆ ಹೇಳುತ್ತಾನೆ. ಅವರು ದಾರಿಯುದ್ದಕ್ಕೂ ಅಲ್ಲಲ್ಲಿ ಸುಂದರವಾದ ವಸತಿಗೃಹಗಳನ್ನು ಕಟ್ಟಿ ರುಚಿಯಾದ ಅಡುಗೆಗಳನ್ನೂ ನೀರನ್ನೂ ವೈದ್ಯಕೀಯ ಶುಶ್ರೂಷೆಯ ವ್ಯವಸ್ಥೆಯನ್ನೂ ಮಾಡುತ್ತಾರೆ. ಈ ಸೇವೆಯೆಲ್ಲವನ್ನೂ ಪಾಂಡವರೇ ಮಾಡಿದ್ದಾರೆ ಎಂದುಕೊಂಡು ಶಲ್ಯ ಅದನ್ನೆಲ್ಲ ಮೆಚ್ಚಿಕೊಳ್ಳುತ್ತಾ ಸ್ವೀಕರಿಸುತ್ತಾನೆ.

ಇನ್ನೇನು ಉಪಪ್ಲವ್ಯ ನಗರ ಹತ್ತಿರವಾಗುತ್ತಿದ್ದಂತೆ ಶಲ್ಯ ತನ್ನ ಸೇವೆಯಲ್ಲಿದ್ದ ಸೇವಕರಲ್ಲಿ ಒಬ್ಬನನ್ನು ಕರೆದುಹೇಳುತ್ತಾನೆ. "ಬಹಳ ಅದ್ಭುತವಾದ ಸೇವೆ ಮಾಡಿದ್ದೀರಿ. ನಿಮಗೆ ನಾನೊಂದಷ್ಟು ಬಹುಮಾನ ಕೊಡಬೇಕು ಅಂದುಕೊಂಡಿದ್ದೇನೆ. ಇನ್ನೊಬ್ಬರ ಸೇವೆಯಲ್ಲಿರುವ ನೀವು ಅವರ ಅನುಮತಿಯಿಲ್ಲದೆ ಕಾಣಿಕೆ ಸ್ವೀಕರಿಸುವುದು ತಪ್ಪು. ನಾನು ಹೀಗೆ ಹೇಳಿದೆನೆಂದು ಹೇಳಿ ನಿಮ್ಮ ದೊರೆಯ ಅನುಮತಿ ಪಡೆದುಕೊಂಡು ಬನ್ನಿ."

ಸೇವಕರು ಇದನ್ನೇ ದುರ್ಯೋಧನನ ಹತ್ತಿರ ಹೇಳುತ್ತಾರೆ. ದುರ್ಯೋಧನನಿಗೆ ಶಲ್ಯನ ಮುಂದೆ ಹಾಜರಾಗುವುದಕ್ಕೆ ಇದೇ ಸಕಾಲ ಅನ್ನುವುದು ಮನವರಿಕೆಯಾಗುತ್ತದೆ. ಕೌರವರ ಆತಿಥ್ಯವನ್ನು ಸ್ವೀಕರಿಸಿದ್ದಕ್ಕೆ ತನ್ನ ಕೃತಜ್ಞತೆಯನ್ನು ಅರ್ಪಿಸುತ್ತಾನೆ.

ಶಲ್ಯನಿಗೆ ತಾವು ಇದುವರೆಗೆ ಅನುಭವಿಸಿದ ಆದರಾತಿಥ್ಯವೆಲ್ಲ ಕೌರವನ ಏರ್ಪಾಡು ಎಂದು ತಿಳಿದು ಅಚ್ಚರಿಯಾಗುತ್ತದೆ. ಅಲ್ಲದೆ ಪಾಂಡವರ ಜೊತೆ ಸೇರಲು ಹೋಗುತ್ತಿರುವ ತನಗೆ ದುರ್ಯೋಧನ ಸೇವೆ ಮಾಡಿದ್ದನ್ನು ನೋಡಿ ಅವನ ಮೇಲೆ ಅಪಾರ ಗೌರವ ಮೂಡುತ್ತದೆ.

'ಹೇಳು ದುರ್ಯೋಧನ, ನಿನ್ನ ಹೃದಯವೈಶಾಲ್ಯಕ್ಕೆ ಬೆರಗಾಗಿದ್ದೇನೆ. ಬೇಕಾದ್ದು ಕೇಳು.... ಕೊಡುತ್ತೇನೆ' ಅನ್ನುತ್ತಾನೆ ಶಲ್ಯ.

'ಹಾಗಿದ್ದರೆ ನೀವು ಮತ್ತು ನಿಮ್ಮ ಸೇನೆ ನಮ್ಮ ಪರವಾಗಿ ಹೋರಾಡಬೇಕು' ಅನ್ನುತ್ತಾನೆ ದುರ್ಯೋಧನ.

ಶಲ್ಯ ದಿಗ್ಭ್ರಾಂತನಾಗುತ್ತಾನೆ. ಒಪ್ಪಿಕೊಳ್ಳಲಾಗದ ಸ್ಥಿತಿಯಲ್ಲಿರುತ್ತಾನೆ.

ಹೀಗೆ ಶಲ್ಯನನ್ನು ದುರ್ಯೋಧನ ತನ್ನ ಕಡೆಗೆ ಸೆಳೆದುಕೊಳ್ಳುತ್ತಾನೆ. ಅದನ್ನು ಮೋಸ ಎಂದು ಕರೆಯುವುದೂ ತಪ್ಪು. ಆದರೆ ದುರ್ಯೋಧನನ ಆತಿಥ್ಯವನ್ನು ಸ್ವೀಕರಿಸಿದ ತಪ್ಪಿಗಾಗಿ ಶಲ್ಯ ತನ್ನವರನ್ನೇ ಬಿಟ್ಟುಕೊಡಬೇಕಾಗಿ ಬರುತ್ತದೆ.

ಆದರೆ ಇಲ್ಲಿ ಇನ್ನೊಂದು ತಿರುವೂ ಇದೆ. ಶಲ್ಯ ಇಷ್ಟಾಗಿಯೂ ತನ್ನ ತಂಗಿಯ ಮಕ್ಕಳನ್ನು ನೋಡುವುದಕ್ಕೆ ಹೋಗುತ್ತಾನೆ.

ಈ ಪ್ರಸಂಗವನ್ನು ರಾಜಾತಿಥ್ಯವನ್ನು ಸ್ವೀಕರಿಸುವುದು ಮತ್ತು ತಾನು ಉಣ್ಣುತ್ತಿರುವುದು ಯಾರ ಅನ್ನ ಎಂದು ತಿಳಿಯದೇ ಉಣ್ಣುವುದು ಅಪಾಯಕಾರಿ ಅನ್ನುವುದನ್ನು ತಿಳಿ ಹೇಳುವುದಕ್ಕೆ ಬಳಸುತ್ತಾರೆ.

ದುರ್ಯೋಧನನ ಪರವಾಗಿ ಹೋರಾಡುವುದು ಎಂದು ನಿಶ್ಚಯಿಸಿದ ನಂತರವೂ ಶಲ್ಯ ಪಾಂಡವರ ಬಳಿಗೆ ಹೋಗುತ್ತಾನೆ. ಆಗ ಧರ್ಮರಾಯ ಆತನನ್ನು ಒಂದು ಪ್ರಶ್ನೆ ಕೇಳುತ್ತಾನೆ.

'ನೀನೂ ಕೃಷ್ಣನಷ್ಟೇ ಒಳ್ಳೆಯ ಸಾರಥಿ. ಒಂದು ವೇಳೆ ನೀನು ಕರ್ಣನಿಗೆ ಸಾರಥಿಯಾಗಿ ಅರ್ಜುನನನ್ನು ಕೊಲ್ಲುವುದಕ್ಕೆ ನೆರವಾಗಬೇಕಾಗಿ ಬಂದರೆ ಏನು ಮಾಡುತ್ತೀಯಾ?'

'ನಾನು ದುರ್ಯೋಧನನ ಪರವಾಗಿ ಹೋರಾಡಲೇಬೇಕು. ಕರ್ಣ ಅರ್ಜುನನ ಮೇಲೆ ಯುದ್ಧಕ್ಕೆ ಬಂದಾಗ ನಾನೇನಾದರೂ ಆತನ ಸಾರಥಿಯಾಗಿದ್ದರೆ ಅವನನ್ನು ನಾನು ಚುಚ್ಚು ಮಾತುಗಳಿಂದ ನೋಯಿಸುತ್ತೇನೆ. ನೊಂದ ಹೃದಯದಿಂದ ಆತ ಖಂಡಿತ ಯುದ್ಧವನ್ನು ಗೆಲ್ಲಲಾರ. ಅರ್ಜುನನೇ ಖಂಡಿತ ಗೆಲ್ಲುತ್ತಾನೆ.'

ಈಗ ಹೇಳಿ, ದುರ್ಯೋಧನನ ಪರವಾಗಿ ನಿಂತ ಶಲ್ಯ ನಿಜಕ್ಕೂ ಯಾರ ಪರವಾಗಿ ಯುದ್ಧ ಮಾಡಿದ ಹಾಗಾಯಿತು?



**ಕ್ಷೇತ್ರ :** ಆಲಿಸುವುದು.

**ಸಾಮರ್ಥ್ಯ : ಗುಂಪು ಚಟುವಟಿಕೆಗಳ ನಿರ್ದೇಶನಗಳನ್ನು ಆಲಿಸಿ, ಅರ್ಥಮಾಡಿಕೊಂಡು ಆಂಗಿಕವಾಗಿ ಪ್ರತಿಕ್ರಿಯಿಸುವುದು.**

**ಆಶಯ :** 'ಅಕ್ಕಿಯ ಮೇಲೆ ಆಸೆ, ನೆಂಟರಮೇಲೆ ಪ್ರೀತಿ' ಎಂಬ ಗಾದೆಯಿದೆ. ಅಕ್ಕಿ ಖರ್ಚಾಗಬಾರದು ನೆಂಟರೂ ಊಟಮಾಡಿ ಸಂತೋಷದಿಂದಿರಬೇಕು ಎಂದರೆ ಹೇಗೆ ಸಾಧ್ಯ? ನಮ್ಮ ಬದುಕಿನಲ್ಲೂ ಹಾಗೆಯೇ. ನಮ್ಮ ನಿಷ್ಠೆ ಎರಡು ಕಡೆಗೆ ಇರಬಾರದು. ಹೇಳುವುದು ಒಂದು ಮಾಡುವುದು ಮತ್ತೊಂದು ಎಂಬ ರೀತಿಯಲ್ಲಿ ಬದುಕಬಾರದು. ನಂಬಿಕೆ ಯಾವಾಗಲೂ ಒಂದು ಕಡೆಗೆ ಇರಬೇಕು. ಜೇಡರದಾಸಿಮಯ್ಯ 'ನಿಮ್ಮ ದಾನವನುಂಡು ಅನ್ಯರನೆ ಹೊಗಳುವ ಕುನ್ನಿಗಳನೇನೆಂಬೆ ಹೇಳಾ ರಾಮನಾಥ' ಎನ್ನುತ್ತಾನೆ. ನಾವು ಇನ್ನೊಬ್ಬರ ಹಂಗಿಗೆ ಒಳಗಾಗುವ ಮುನ್ನ ಯೋಚಿಸಬೇಕು. ಇಬ್ಬರಿಗೂ ಆಶ್ವಾಸನೆ ನೀಡಿ, ನೀಡಿದ ಆಶ್ವಾಸನೆಯನ್ನು ನೆರವೇರಿಸಲಾಗದ ಶಲ್ಯನಂತಾಗಬಾರದು.

## ಲೇಖಕರ ಪರಿಚಯ



ಜೋಗಿ ಎಂಬುದು ಗಿರೀಶರಾವ್ ಹತ್ವಾರ್ ಇವರ ಕಾವ್ಯನಾಮ ನವೆಂಬರ್ ೧೯೬೫ರಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಹೊಸಬೆಟ್ಟಿನಲ್ಲಿ ಜನಿಸಿದರು. ಇದೇ ಜಿಲ್ಲೆಯ ಗುರುವಾಯನಕೆರೆ ಮತ್ತು ಉಪ್ಪಿನಂಗಡಿಗಳಲ್ಲಿ ವಿದ್ಯಾಭ್ಯಾಸ ಮಾಡಿ ಪತ್ರಿಕೋದ್ಯಮಿಯಾದರು. ಸಣ್ಣ ಕತೆಗಾರ, ಅಂಕಣಕಾರರಾಗಿ ಜನಪ್ರಿಯರಾಗಿದ್ದಾರೆ, ಸಿನೆಮಾ ಮತ್ತು ದೂರದರ್ಶನಗಳಿಗೆ ಚಿತ್ರಕಥೆ, ಸಂಭಾಷಣೆ ಬರೆದಿದ್ದಾರೆ. ಅವರ **'ಕಥಾಸಮಯ'** ಎಂಬ ಕೃತಿಯಿಂದ ಸದರಿ ಪಾಠವನ್ನು ಆಯ್ಕೆಮಾಡಲಾಗಿದೆ.

## ಓದಿ ತಿಳಿಯಿರಿ

ದಾಕ್ಷಿಣ್ಯ–ಸಂಕೋಚ, ಹಿಂಜರಿಕೆ; ಇನ್ನೊಬ್ಬರಿಗೆ ನೋವಾಗದಂತೆ ಅವರ ಮನಸ್ಸನ್ನು ಅನುಸರಿಸಿ ನಡೆದುಕೊಳ್ಳುವುದು; ಮರ್ಜಿ– ಇಷ್ಟ, ಧೋರಣೆ; ಅಧಿಪತ್ಯ–ಪ್ರಭುತ್ವ, ಒಡೆತನ; ಶುಶ್ರೂಷೆ–ಉಪಚಾರ, ಸೇವೆ ; ಸಾರಥಿ – ರಥವನ್ನು ನಡೆಸುವ ಚಾಲಕ.

## ವಿವರಣೆ

ಪಾಂಡು – ಮಹಾಭಾರತದಲ್ಲಿ ಬರುವ ಪಾತ್ರ. ಪಾಂಡು, ಧೃತರಾಷ್ಟ್ರ ಮತ್ತು ವಿದುರ ಈ ಮೂವರು ಸೋದರರು. ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ ಪಾಂಡುವಿನ ಮಕ್ಕಳು. ಅದರಿಂದ ಈ ಐವರೂ ಪಾಂಡವರು. ಇವರನ್ನು ಕೌಂತೇಯರು ಎಂದೂ ಕರೆಯುವರು; ಕುರುಕ್ಷೇತ್ರ – ಭಾರತದ ಹರಿಯಾಣ ರಾಜ್ಯದಲ್ಲಿ ಈಗಲೂ ಇರುವ ಸ್ಥಳ. ಮಹಾಭಾರತ ಯುದ್ಧ ಈ ಸ್ಥಳದಲ್ಲಿ ನಡೆಯಿತು. ಹೀಗಾಗಿ ಕುರುಕ್ಷೇತ್ರ ಯುದ್ಧ ಪ್ರಸಿದ್ಧವಾಗಿದೆ; ದುರ್ಯೋಧನ – ಕೌರವರಲ್ಲಿ ಹಿರಿಯ, ಧೃತರಾಷ್ಟ್ರ ಮತ್ತು ಗಾಂಧಾರಿಯರ ಹಿರಿಮಗ; ಕರ್ಣ – ದುರ್ಯೋಧನನ ಗೆಳೆಯ, ಕುಂತಿಯ ಮಗ ; ಉಪಪ್ಲವ್ಯ–ವಿರಾಟ ರಾಜ್ಯದ ಒಂದು ಉಪ ನಗರ, ಪಾಂಡವರು ಅಜ್ಞಾತವಾಸದ ಬಳಿಕ ಇಲ್ಲಿ ವಾಸವಾಗಿದ್ದರು.



## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಶಲ್ಯನ ತಂಗಿ ಯಾರು ?

೨. ಶಲ್ಯ ಸೇನೆಯ ಜೊತೆಯಲ್ಲಿ ಯಾರ ಪಟ್ಟಣಕ್ಕೆ ಹೊರಟನು?

೩. ಶಲ್ಯನಿಗೆ ಆದರಾತಿಥ್ಯದ ಏರ್ಪಾಡು ಮಾಡಿದವರು ಯಾರು?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಶಲ್ಯನಿಗೆ ದಾರಿಯುದ್ದಕ್ಕೂ ದುರ್ಯೋಧನ ಮಾಡಿದ ವ್ಯವಸ್ಥೆಗಳೇನು?

೨. ಶಲ್ಯ ದುರ್ಯೋಧನನಿಗೆ ನೀಡಿದ ಭರವಸೆಗಳೇನು?

**ಇ. ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಶಲ್ಯ ತನ್ನ ಆದರಾತಿಥ್ಯ ಮಾಡಿದವರಿಗೆ ಹೇಳಿ ಕಳುಹಿಸುವ ಮಾತುಗಳೇನು?

೨. ದುರ್ಯೋಧನ ಶಲ್ಯನನ್ನು ಸೆಳೆದುಕೊಂಡದ್ದು ಹೇಗೆ ?

೩. ಶಲ್ಯ ಮತ್ತು ಧರ್ಮರಾಯರ ನಡುವೆ ನಡೆದ ಮಾತುಗಳೇನು?

**ಈ. ಕೆಳಗೆ ನೀಡಿರುವ ಸಾಲುಗಳನ್ನು ಯಾರು ಯಾರಿಗೆ ಹೇಳಿದರು ತಿಳಿಸಿ.**

೧. "ಬಹಳ ಅದ್ಭುತವಾದ ಸೇವೆ ಮಾಡಿದ್ದೀರಿ"

೨. "ನೀವು ಮತ್ತು ನಿಮ್ಮ ಸೇನೆ ನಮ್ಮ ಪರವಾಗಿ ಹೋರಾಡಬೇಕು"

೩. "ನೀನೂ ಕೃಷ್ಣನಷ್ಟೇ ಒಳ್ಳೆಯ ಸಾರಥಿ"

**ಉ. ಕೆಳಗೆ ನೀಡಿರುವ ಪದಗಳನ್ನು ಬಳಸಿ ನಿಮ್ಮದೇ ಆದ ವಾಕ್ಯ ರಚಿಸಿ.**

೧. ಊಟೋಪಚಾರ : ______________________

೨. ಸಕಾಲ : ______________________

೩. ಆತಿಥ್ಯ : ______________________

೪. ಬೆರಗಾಗು : ______________________

೫. ಚುಚ್ಚುಮಾತು : ______________________



## ಚಟುವಟಿಕೆ

**ಅ. ಗುಂಪಿಗೆ ಸೇರದ ಪದವನ್ನು ಗುರುತಿಸಿ ಮತ್ತು ಕಾರಣ ತಿಳಿಸಿ.**

| | | | | |
|---|---|---|---|---|
| ೧. | ಭೀಮ | ಅರ್ಜುನ | ನಕುಲ | ದುಶ್ಶಾಸನ |
| ೨. | ಕುಂತಿ | ದ್ರೌಪದಿ | ಗಾಂಧಾರಿ | ಮಾದ್ರಿ |
| ೩. | ಮದ್ರದೇಶ | ಗಾಂಧಾರ | ಹಸ್ತಿನಾವತಿ | ಕೌಶಾಂಬಿ |
| ೪. | ಸಾಂತ್ವನ | ಸಮಾಧಾನ | ದಾಕ್ಷಿಣ್ಯ | ಸಂತೈಸು |

**ಆ. ಪುರಾಣದ ಪಾತ್ರಗಳನ್ನು ಕೆಳಗೆ ನೀಡಲಾಗಿದೆ. ಈ ಹೆಸರುಗಳನ್ನು ಅಕಾರಾದಿಯಾಗಿ ಬರೆಯಿರಿ.**

| | | | |
|---|---|---|---|
| ಶಕುನಿ | ಅರ್ಜುನ | ಭೀಮ | ಸಹದೇವ |
| ನಕುಲ | ಕುಂತಿ | ಉತ್ತರೆ | ಏಕಲವ್ಯ |
| ಗಾಂಧಾರಿ | ಧರ್ಮರಾಯ | ಯಯಾತಿ | ಚವನ |

| | | | |
|---|---|---|---|
| ವಾತಾಪಿ | ಬಕಾಸುರ | ಕೀಚಕ | ವಿರಾಟ |
| ದುರ್ಯೋಧನ | ಭೀಷ್ಮ | ಶಂತನು | ಮಾದ್ರಿ |
| ಶಲ್ಯ | ಕರ್ಣ | ಕೃಷ್ಣ | ದ್ರೌಪದಿ |
| ಭಾನುಮತಿ | ದ್ರೋಣ | ಅಶ್ವತ್ಥಾಮ | ಬಲರಾಮ |
| ದುಶ್ಶಾಸನ | ಅಭಿಮನ್ಯು | ಸಂಜಯ | ಜರಾಸಂಧ |

**೩. ನಿಮ್ಮ ಮನಸ್ಸಿಗೆ ಒಪ್ಪದ ಬೇರೊಬ್ಬರ ಮುಲಾಜಿಗೆ ಕೆಲಸ ಮಾಡುವ ಸಂದರ್ಭವನ್ನು ನೀವು ಅನುಭವಿಸಿದ್ದೀರಾ ?**

**ನಿಮ್ಮ ಅನುಭವವನ್ನು ಬರೆಯಿರಿ. ಇಲ್ಲದಿದ್ದರೆ ಅಂಥ ಸಂದರ್ಭ ಊಹಿಸಿ ಅದರ ಪರಿಣಾಮಗಳನ್ನು ಸೇರಿಸಿ ಬರೆಯಿರಿ.**

**೪. ಪುರಾಣ, ಹಳೆಯ ಕಾವ್ಯಗಳ ಹೆಸರುಗಳನ್ನು ವರ್ತಮಾನದ ಬದುಕಿನಲ್ಲೂ ಬಳಸುತ್ತೇವೆ.**
ಉದಾ : ಭೀಮಸಾಹಸ, ಕುಂಭಕರ್ಣನಿದ್ರೆ ಇತ್ಯಾದಿ ಇಂಥ ಇನ್ನಿತರ ಹೆಸರುಗಳನ್ನು ಪಟ್ಟಿಮಾಡಿ.

## ಭಾಗ–೨ ಸಂಸ್ಕೃತ ಸಂಧಿಗಳು



### ಜಶ್ತ್ವ ಸಂಧಿ

**ಪೂರ್ವಪದ + ಉತ್ತರ ಪದ = ಸಂಧಿಪದ**

೧. ವಾಕ್+ಈಶ=ವಾಗೀಶ

೨. ವಾಕ್+ದಾನ=ವಾಗ್ದಾನ

೩. ದಿಕ್+ಅಂತ=ದಿಗಂತ

೪. ಬೃಹತ್+ಆಕಾಶ=ಬೃಹದಾಕಾಶ

೫. ಷಟ್+ಆನನ=ಷಡಾನನ

ಸಂಧಿಕಾರ್ಯ ನಡೆಯುವಾಗ ಪೂರ್ವ ಪದದ ಅಂತ್ಯದಲ್ಲಿರುವ ಕ, ಚ, ಟ, ತ, ಪ ಗಳಿಗೆ ಗ, ಜ, ಡ, ದ, ಬ ಗಳು ಆದೇಶವಾಗಿ ಬರುವುದನ್ನು **'ಜಶ್ತ್ವ ಸಂಧಿ'** ಎಂದು ಕರೆಯುತ್ತೇವೆ.

### ಶ್ಚುತ್ವ ಸಂಧಿ

**ಪೂರ್ವಪದ+ಉತ್ತರ ಪದ– ಸಂಧಿಪದ**

೧. ಮನಸ್+ಶುದ್ಧಿ=ಮನಶ್ಶುದ್ಧಿ

೨. ಯಶಸ್+ಚಂದ್ರಿಕೆ=ಯಶಶ್ಚಂದ್ರಿಕೆ

೩. ಸತ್+ಚಿತ್ರ=ಸಚ್ಚಿತ್ರ

'ಶ್ಚು' ಎಂದರೆ ಶಕಾರ ಮತ್ತು ಚವರ್ಗಾಕ್ಷರಗಳು.ಈ ಅಕ್ಷರಗಳು ಆದೇಶವಾಗಿ ಬಂದರೆ ಶ್ಚುತ್ವ ಸಂಧಿ. ಸಂಧಿಕಾರ್ಯ ನಡೆಯುವಾಗ ಪೂರ್ವ ಪದದ ಅಂತ್ಯದಲ್ಲಿರುವ ಸಕಾರ ಅಥವಾ ತವರ್ಗದ ಐದು ಅಕ್ಷರಗಳಿರುತ್ತವೆ ಉತ್ತರಪದ ಶಕಾರ ಅಥವಾ ಚವರ್ಗದ ಅಕ್ಷರಗಳಿಂದ ಆರಂಭವಾಗುತ್ತದೆ. 'ಸ'ಕಾರವಿದ್ದ ಕಡೆ ಶಕಾರವೂ ತವರ್ಗದ ಅಕ್ಷರಗಳಿದ್ದಕಡೆ ಚವರ್ಗದ ಅಕ್ಷರಗಳೂ ಆದೇಶವಾಗಿ ಬರುವುದನ್ನು **'ಶ್ಚುತ್ವ ಸಂಧಿ'** ಎಂದು ಕರೆಯುತ್ತೇವೆ.

## ಅನುನಾಸಿಕ ಸಂಧಿ

**ಪೂರ್ವಪದ + ಉತ್ತರಪದ = ಸಂಧಿಪದ**

೧. ವಾಕ್+ಮಯ=ವಾಙ್ಮಯ  ೨. ಷಟ್+ಮುಖ=ಷಣ್ಮುಖ  ೩. ಸತ್+ಮಾನ=ಸನ್ಮಾನ

ಙ,ಞ,ಣ,ನ,ಮ ಇವು ಅನುನಾಸಿಕ ಅಕ್ಷರಗಳು. ಈ ಅಕ್ಷರಗಳು ಆದೇಶವಾಗಿ ಬಂದರೆ ಅನುನಾಸಿಕ ಸಂಧಿ. ಸಂಧಿಕಾರ್ಯ ನಡೆಯುವಾಗ ಪೂರ್ವ ಪದದ ಅಂತ್ಯದಲ್ಲಿರುವ ಕ್,ಚ್,ಟ್,ತ್,ಪ್ ಅಕ್ಷರಗಳಿರುತ್ತವೆ ಉತ್ತರಪದ ಅನುನಾಸಿಕ ಅಕ್ಷರಗಳಿಂದ ಆರಂಭವಾಗುತ್ತದೆ. ವರ್ಗದ ಕ,ಚ,ಟ,ತ,ಪ ವ್ಯಂಜನಗಳಿಗೆ ಅದೇ ವರ್ಗದ 'ಅನುನಾಸಿಕ ಅಕ್ಷರಗಳೂ ಆದೇಶವಾಗಿ ಬರುವುದನ್ನು **'ಅನುನಾಸಿಕ ಸಂಧಿ'** ಎಂದು ಕರೆಯುತ್ತೇವೆ.






### ಚೆನ್ನುಡಿ

**'ಆಡದೇ ಮಾಡುವವ ರೂಢಿಯೊಳಗುತ್ತಮನು, ಆಡಿ ಮಾಡುವವ ಮಧ್ಯಮನು, ಆಡಿಯೂ ಮಾಡದವ ಅಧಮನು।'**

'ಸರ್ವಜ್ಞ (ತ್ರಿಪದಿಯಲ್ಲಿ ವಚನಗಳನ್ನು ರಚಿಸಿದವ, ಕಾಲ ಸುಮಾರು ಕ್ರಿ.ಶ. ೧೭೦೦)

## ಗದ್ಯ ಪಾಠ – ೭

# ಮೈಲಾರ ಮಹಾದೇವ

–ಸಮಿತಿ

**ಪ್ರವೇಶ :** ನಾವೀಗ ಸ್ವತಂತ್ರ ಭಾರತದಲ್ಲಿದ್ದೇವೆ. ೧೯೪೭ಕ್ಕಿಂತ ಹಿಂದೆ ಭಾರತದ ಆಡಳಿತ ಬ್ರಿಟಿಷರ ಕೈಯಲ್ಲಿತ್ತು. ಬ್ರಿಟಿಷರಿಂದ ಭಾರತವನ್ನು ಬಿಡಿಸಿಕೊಳ್ಳಲು ಹಲವಾರು ಮಂದಿ ಹೋರಾಡಿದರು. ಮೋಹನದಾಸ ಕರಮಚಂದ ಗಾಂಧಿ ಅವರ ನೇತೃತ್ವದಲ್ಲಿ ಅಹಿಂಸಾತ್ಮಕ ಹೋರಾಟವೇ ನಡೆಯಿತು. ಭಾರತದಾದ್ಯಂತ ಹಲವರು ಈ ಚಳುವಳಿಯಲ್ಲಿ ಭಾಗವಹಿಸಿದ್ದರು. ಕರ್ನಾಟಕದಿಂದಲೂ ಹಲವಾರು ಜನ ಗಾಂಧೀಜಿಯವರ ಕರೆಗೆ ಓಗೊಟ್ಟು ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿಯಲ್ಲಿ ಭಾಗವಹಿಸಿದರು. ಕೆಲವರು ಈ ಹೋರಾಟದಲ್ಲಿ ಹುತಾತ್ಮರೂ ಆದರು. ಹೀಗೆ ಹೋರಾಟಮಾಡಿ ಹುತಾತ್ಮರಾದವರಲ್ಲಿ ಒಬ್ಬರು ಮೈಲಾರ ಮಹಾದೇವ. ಅವರ ಜೀವನ ಚರಿತ್ರೆಯನ್ನು ನೀವಿಲ್ಲಿ ಕಾಣಬಹುದು. ಇವರೆಲ್ಲರ ಹೋರಾಟ ಮತ್ತು ತ್ಯಾಗದ ಫಲವಾಗಿ ನಮಗೆ ೧೯೪೭ರ ಆಗಸ್ಟ್ ೧೫ರಂದು ಸ್ವಾತಂತ್ರ್ಯ ಲಭಿಸಿತು. ನಮಗೆ ಸ್ವಾತಂತ್ರ್ಯವನ್ನು ತಂದುಕೊಟ್ಟ ಹಿರಿಯರನ್ನು ಸ್ಮರಿಸುವುದು ನಮ್ಮ ಕರ್ತವ್ಯ.





ಭಾರತ ಬ್ರಿಟಿಷರ ಆಡಳಿತಕ್ಕೆ ಸೇರಿದ್ದ ಕಾಲ. ಅವರ ಆಡಳಿತದಿಂದ ಬಿಡಿಸಿಕೊಂಡು ಭಾರತವನ್ನು ಸ್ವತಂತ್ರವಾದ ದೇಶವನ್ನಾಗಿ ಮಾಡಲು ಹಲವಾರು ಭಾರತೀಯರು ಹೋರಾಟ ಮಾಡುತ್ತಿದ್ದರು.

ಹಾವೇರಿ ಜಿಲ್ಲೆಯ ಮೋಟೆಬೆನ್ನೂರು ಎಂಬುದೊಂದು ಹಳ್ಳಿ. ಆ ಹಳ್ಳಿಯಲ್ಲಿ ದೇಶಭಕ್ತರೊಬ್ಬರು ಭಾಷಣ ಮಾಡುತ್ತಿದ್ದರು. ಅವರ ಭಾಷಣದಲ್ಲಿ "ವಿದೇಶೀ ವಸ್ತ್ರಗಳನ್ನು ತ್ಯಜಿಸಿ ನಮ್ಮ ದೇಶದಲ್ಲೇ ತಯಾರು ಮಾಡಿದ ಬಟ್ಟೆಗಳನ್ನು ತೊಡಬೇಕು" ಎಂದೆಲ್ಲ ಹೇಳುತ್ತಿದ್ದರು. ಆ ಮಾತು ಕೇಳುತ್ತಿದ್ದ ೮–೧೦ ವರ್ಷದ ಒಬ್ಬ ಬಾಲಕ ತನ್ನ ತಲೆ ಮುಟ್ಟಿ ನೋಡಿದ. ಅವನ ತಲೆಯ ಮೇಲೆ ವಿದೇಶಿ ಟೊಪ್ಪಿಗೆ ಇತ್ತು. ಕೂಡಲೆ ಟೊಪ್ಪಿಗೆಯನ್ನು ತೆಗೆದು ನೆಲಕ್ಕೆಸೆದ.

ಹೀಗೆ ಟೊಪ್ಪಿಗೆ ನೆಲಕ್ಕೆಸೆದ ಹುಡುಗನ ಹೆಸರು ಮೈಲಾರ ಮಹಾದೇವ. ೮ನೇ ಜೂನ್ ೧೯೧೧ರಂದು ಮೋಟೆಬೆನ್ನೂರಿನಲ್ಲಿ ಜನಿಸಿದ್ದು. ತಂದೆ ಮಾರ್ತಂಡಪ್ಪ, ಮಹಾದೇವನ ತಾಯಿ ಬಸಮ್ಮ ದೇಶಪ್ರೇಮಿ. ಆ ಹೊತ್ತಿಗೆ ಬ್ರಿಟಿಷರ ವಿರುದ್ಧ ಹೋರಾಡಿದ್ದ ಆ ತಾಯಿ ಜೈಲುವಾಸವನ್ನು ಅನುಭವಿಸಿದವರು. ಆ ತಾಯಿಗೆ ತಕ್ಕ ಮಗ ಮಹಾದೇವ. ಪ್ರಾಥಮಿಕ ವಿದ್ಯಾಭ್ಯಾಸವನ್ನು ಮೋಟೆಬೆನ್ನೂರಿನಲ್ಲಿ ಮುಗಿಸಿದ. ಮುಂದಿನ ವಿದ್ಯಾಭ್ಯಾಸಕ್ಕಾಗಿ ಹತ್ತಿರವಿದ್ದ ಹಂಸಭಾವಿಯ



ಶಾಲೆಗೆ ಹೋದ. ಆದರೆ ಆತನಿಗೆ ಓದು ರುಚಿಸಲಿಲ್ಲ. ಸ್ವದೇಶೀ ಬಟ್ಟೆಗಳ ವಿಚಾರ ಯಾವಾಗಲೂ ಮನಸ್ಸಿನಲ್ಲಿ ಗುನುಗುಡುತ್ತಿತ್ತು. ಮಹಾತ್ಮಾ ಗಾಂಧೀಜಿ ಖಾದಿ ಬಟ್ಟೆಯ ಬಗೆಗೆ ಒಲವು ಹೊಂದಿದ್ದು, ಎಲ್ಲ ಕಡೆಯಲ್ಲೂ ಆ ವಿಚಾರ ಪ್ರಚಾರ ಮಾಡುತ್ತಿದ್ದರು. ಬಾಲಕ ಮಹಾದೇವನಿಗೆ ಖಾದಿ ಬಟ್ಟೆಯನ್ನು ಕುರಿತು ಪ್ರಚಾರಮಾಡಬೇಕೆಂಬ ಆಸೆ ಹೆಚ್ಚಾಯಿತು.

ಮಹಾದೇವನಿಗೆ ಹನ್ನೆರಡು–ಹದಿಮೂರರ ಹರಯ. ವಿಜಾಪುರ ಜಿಲ್ಲೆಯಲ್ಲಿ ಕಲಾದಗಿ ಎಂಬ ಒಂದು ಗ್ರಾಮವಿದೆ. ಅಲ್ಲಿ ಆ ಕಾಲದಲ್ಲಿ ಖಾದಿ ಬಟ್ಟೆಗಳನ್ನು ತಯಾರು ಮಾಡುತ್ತಿದ್ದರು. ಮಹಾದೇವ ಅಲ್ಲಿಗೆ ಹೋದ. ಅಲ್ಲಿ ಖಾದಿಯನ್ನು ತಯಾರಿಸುವುದು ಹೇಗೆ ಎಂದು ತಿಳಿದುಕೊಂಡ. ಖಾದಿಯನ್ನು ಹೊತ್ತು ಊರೂರು ತಿರುಗಿ ಮಾರಾಟ ಮಾಡಿದ. ಖಾದಿ ಬಳಕೆಯನ್ನು ಕುರಿತು ಪ್ರಚಾರವನ್ನೂ ನಡೆಸಿದ.



ಮಹಾದೇವ ಅವರಿಗೆ ಸಬರಮತಿ ಆಶ್ರಮದಿಂದ ಕರೆ ಬಂದಿತು. ಮಹಾದೇವ ಅಲ್ಲಿಗೆ ಹೋದರು. ಆ ವೇಳೆಗೆ ಪ್ರಸಿದ್ಧ ದಂಡಿ ಸತ್ಯಾಗ್ರಹ ನಡೆಯುತ್ತಿತ್ತು. ಗಾಂಧೀಜಿಯವರೊಡನೆ ದಂಡಿಯಾತ್ರೆಯಲ್ಲಿ ಹೆಜ್ಜೆ ಹಾಕಿದರು. ದಂಡಿ ಸತ್ಯಾಗ್ರಹದಲ್ಲಿ ಭಾಗವಹಿಸಿದವರಿಗೆ ಸೆರೆಮನೆ ವಾಸದ ಶಿಕ್ಷೆಯಾಯಿತು. ಮಹಾದೇವ ಆರು ತಿಂಗಳು ಸೆರೆಮನೆಯಲ್ಲಿ ಕಳೆದರು.

ದಂಡಿಯಾತ್ರೆ ಮುಗಿದು ಮಹಾದೇವ ಹುಟ್ಟೂರಿಗೆ ವಾಪಸ್ಸು ಬಂದರು. ಆ ಹೊತ್ತಿಗಾಗಲೇ ದಂಡಿಯಾತ್ರೆಯಲ್ಲಿ ಭಾಗವಹಿಸಿದ್ದ ಕರ್ನಾಟಕದ ಸ್ವಾತಂತ್ರ್ಯ ಸೇನಾನಿ ಎಂಬುದಾಗಿ ಅವರಿಗೆ ಹೆಸರು ಬಂದಿತ್ತು. ಊರಿನಲ್ಲಿ ಮಹಾದೇವ ಅವರಿಗೆ ಅದ್ದೂರಿಯ ಸ್ವಾಗತ ಸಿಕ್ಕಿತು.

ಮಹಾದೇವ ತಮ್ಮ ಹೆಂಡತಿ ಸಿದ್ದಮ್ಮ ಅವರನ್ನು ಸಿದ್ಧಮತಿ ಎಂದು ಕರೆಯುತ್ತಿದ್ದರು. ಸಬರಮತಿಯ ಸುಖವಾಸ ತನಗಷ್ಟೇ ಅಲ್ಲದೆ ಹೆಂಡತಿಗೂ ಆಗಬೇಕೆಂದು ಅವರನ್ನೂ ಸಬರಮತಿಗೆ ಕರೆದುಕೊಂಡು ಹೋದನು. ಅಲ್ಲಿ ಸಿದ್ದಮ್ಮ ಬ್ರಿಟಿಷ್ ಸರಕಾರಕ್ಕೆ ಅಸಹಕಾರ ನೀಡುವ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದರು. ಊರಿಗೆ ಬಂದಿದ್ದ ಮಹಾದೇವ ಇಲ್ಲಿ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದರು. ಹಿಂಡಲಗಾ ಜೈಲಿನಲ್ಲಿದ್ದಾಗ ಗಾಂಧೀಜಿಯವರು ಅಲ್ಲಿಗೆ ಭೇಟಿ ನೀಡಿ ಮಹಾದೇವರನ್ನು ಕಂಡು ಅವರನ್ನು ಪ್ರೋತ್ಸಾಹಿಸಿದರು.

ಮಹಾದೇವರಿಗೆ ಜೈಲಿನಿಂದ ಬಿಡುಗಡೆಯಾಯಿತು. ಹಲವಾರು ಬಾರಿ ಜೈಲಿಗೆ ಹೋಗಿದ್ದರಿಂದ ದೇಹದ ಆರೋಗ್ಯದ ಬಗೆಗೆ ಅವರಿಗೆ ಕಾಳಜಿ ಉಂಟಾಯಿತು. ಶಿಸ್ತುಬದ್ಧವಾದ ವ್ಯಾಯಾಮವನ್ನು ಕಲಿಯಬೇಕೆನಿಸಿತು. ವ್ಯಾಯಾಮವನ್ನು ಕಲಿತರು. ವ್ಯಾಯಾಮ ಕಲಿಯುವಾಗಲೇ ಔಷಧಗಳ

ಶಾಸ್ತ್ರವನ್ನು ಅಭ್ಯಾಸ ಮಾಡಿದರು. ಹಳ್ಳಿಗರ ಸೇವೆ ಮಾಡುವ ಉದ್ದೇಶದಿಂದ ಒಂದು ಸೇವಾಶ್ರಮವನ್ನು ಪ್ರಾರಂಭಿಸಿದರು. ಗಂಡ–ಹೆಂಡತಿ ಇಬ್ಬರೂ ಸೇವಾಶ್ರಮದ ಸಂಚಾಲಕರಾಗಿ ಚರಕದಿಂದ ನೂಲು ತೆಗೆಯುವುದು, ಪ್ರಕೃತಿ ಚಿಕಿತ್ಸೆ, ವ್ಯಾಯಾಮ, ಹಳ್ಳಿಯ ಜನರಿಗೆ ಅಭ್ಯಾಸ ಮಾಡಿಸಿದರು. ಸೇವಾಶ್ರಮದಲ್ಲಿ ತಯಾರಿಯಾಗುತ್ತಿದ್ದ ಖಾದಿಯನ್ನು ಊರೂರಿಗೆ ಕೊಂಡು ಹೋಗಿ ಮಾರಾಟ ಮಾಡಿದರು. **'ಮಹಾದೇವನ ಖಾದಿ'** ಎಂದೇ ಇದು ಪ್ರಸಿದ್ಧಿಯಾಯಿತು. ಇದರ ಜೊತೆಯಲ್ಲಿ ಪತಿ–ಪತ್ನಿಯರ ಸ್ವಾತಂತ್ರ್ಯದ ತುಡಿತ, ಹೋರಾಟ ಜನಪ್ರಿಯವಾಯಿತು. ಊರಿನ ಜನರು ಇವರ ಗುಣಗಾನ ಮಾಡಿದರು.

ಚಿಕ್ಕವಯಸಿದ್ರು ಒಳ್ಳೇ ಚೊಕ್ಕ ಮಾತನಾಡತಾನಾ।
ಹಕ್ಕಿ ತನ್ನ ಮರಿಗೆ ಮುದ್ದುಕೊಟ್ಟಾಂಗ।
ನಕ್ಕರೊಂದು ಚಂದ ಅವನು।
ನುಡಿದರೊಂದು ಚಂದ ನಮಗೆ।
ಸಿಕ್ಕೊದಿಲ್ಲೊ ಇಂಥಾ ಚೊಕ್ಕಬಂಗಾರದಂಥವಾ॥

ಸ್ವಾತಂತ್ರ್ಯ ಹೋರಾಟ ದಿನ ದಿನ ಬೆಳೆಯುತ್ತ ಹೋಯಿತು. ೧೯೪೨ರಲ್ಲಿ ಗಾಂಧೀಜಿಯವರು 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಎಂಬ ಘೋಷಣೆ ಮಾಡಿದರು. ದೇಶದೆಲ್ಲೆಡೆ ಗಾಂಧೀಜಿಯವರ ಘೋಷಣೆಗೆ ಭಾರತೀಯರ ಬೆಂಬಲ ದೊರೆಯಿತು. ದಕ್ಷಿಣ ಭಾಗದ ಈ ಚಳುವಳಿಗೆ ಮೈಲಾರ ಮಹಾದೇವ ನೇತೃತ್ವ ವಹಿಸಿದರು. ಹಳ್ಳಿ ಹಳ್ಳಿಗಳಲ್ಲಿ ತಿರುಗಿ ಗಾಂಧೀಜಿಯವರ ಘೋಷಣೆಯನ್ನು ಪ್ರಚಾರ ಮಾಡಿದರು. ಅವರ ಮಾತುಗಳು ದೇಶಭಕ್ತಿಯನ್ನು ಬಡಿದೆಬ್ಬಿಸಿದವು.



ಬ್ರಿಟಿಷರು ಭಾರತ ಬಿಟ್ಟು ತೊಲಗಬೇಕಾದರೆ ಅವರು ನಡೆಸುತ್ತಿರುವ ಆಡಳಿತಕ್ಕೆ ಧಕ್ಕೆ ಉಂಟುಮಾಡಿ ಅವರಿಗೆ ಆಡಳಿತ ನಡೆಸುವುದು ಸಾಧ್ಯವಿಲ್ಲ ಎನಿಸಬೇಕಿತ್ತು. ಮಹಾದೇವ ತಮ್ಮ ಸಂಗಡಿಗರೊಂದಿಗೆ ಇಂಥ ಸಾಹಸಕ್ಕೆ ಅಣಿಯಾದರು. ರೈಲು ಓಡಾಟದ ಮೇಲೆ ಇವರು ಗಮನವಿಟ್ಟರು. ಸವಣೂರು ಎಂಬಲ್ಲಿ ರೈಲು ನಿಲ್ದಾಣವನ್ನು ಬ್ರಿಟಿಷ್ ಪೋಲೀಸರಿಗೆ ಗೊತ್ತಾಗದಂತೆ ಸುಟ್ಟುಹಾಕಿದರು. ಹೊನ್ನತ್ತಿ ಎಂಬಲ್ಲಿ ಪೋಲೀಸರ ಬಂದೂಕು ಅಪಹರಿಸಿದರು. ಬಾಳೆಹೊಸೂರಿನ ಪೋಲೀಸ್ ಕೇಂದ್ರವನ್ನು ಸುಟ್ಟರು.

ಮಹಾದೇವ ಮತ್ತು ಸಂಗಡಿಗರ ಈ ಕೃತ್ಯಗಳಿಂದ ಬ್ರಿಟಿಷ್ ಸರ್ಕಾರ ನಡುಗಿತು. ಮಹಾದೇವಪ್ಪನವರನ್ನು ಹಿಡಿದುಕೊಟ್ಟವರಿಗೆ ಬಹುಮಾನ ಘೋಷಿಸಿತು. ಹಗಲಿರುಳೆನ್ನದೆ ಬ್ರಿಟಿಷ್ ಪೋಲೀಸರು ಮಹಾದೇವ ಹಾಗೂ ಅವರ ತಂಡದವರಿಗಾಗಿ ಶೋಧ ನಡೆಸಿದರು.

ಹಾವೇರಿ ಜಿಲ್ಲೆಯ ಹೊಸರಿತ್ತಿಯಲ್ಲಿ ಕಂದಾಯವನ್ನು ಬಲವಂತವಾಗಿ ವಸೂಲಿ ಮಾಡಿ ಜನರನ್ನು ಹಿಂಸಿಸುತ್ತಿದ್ದ ಸರಕಾರದ ಕೇಂದ್ರವಿತ್ತು. ಅದನ್ನು ಆಕ್ರಮಿಸಿಕೊಳ್ಳಬೇಕೆಂದು ನಿರ್ಧಾರವಾಯಿತು. ತಮ್ಮೊಟ್ಟಿಗೇ ಇದ್ದ ಪತ್ನಿ ಸಿದ್ದಮ್ಮನನ್ನು ಹಾಗೂ ಮಗಳಾದ ಕಸ್ತೂರಿದೇವಿಯನ್ನು ಹುಬ್ಬಳ್ಳಿಗೆ ಕಳುಹಿಸಿದರು. ೧ನೇ ಏಪ್ರಿಲ್ ೧೯೪೩ರ ಬೆಳಗಿನ ಸಮಯ. ಹೊಸರಿತ್ತಿಯ ಸಮೀಪದ

ವೀರಭದ್ರ ದೇವಾಲಯದಲ್ಲಿ ಪೊಲೀಸರ ತುಕಡಿಯಿತ್ತು. ಅದರ ಪಕ್ಕದಲ್ಲೇ ಖಜಾನೆ. ಮಹಾದೇವ ತನ್ನ ಸಂಗಡಿಗರೊಂದಿಗೆ ಮುತ್ತಿಗೆ ಹಾಕಿದರು. ಮಹಾದೇವ ಅವರ ಧೈರ್ಯಕ್ಕೆ ಹೆದರಿ ಹಲವು ಪೊಲೀಸರು ಓಟ ಕಿತ್ತರು. ಮಹಾದೇವ ಖಜಾನೆಯ ಬೀಗ ಮುರಿಯುವುದರಲ್ಲಿ ನಿರತರಾಗಿದ್ದರು. ಅಡಗಿ ಕುಳಿತಿದ್ದ ಒಬ್ಬ ಪೊಲೀಸ್ ಮಹಾದೇವನ ಎದೆಗೆ ಗುಂಡು ಹೊಡೆದ. ಮಹಾದೇವ ರಕ್ತದ ಮಡುವಿನಲ್ಲಿ ಬಿದ್ದರು. ಅವರ ಸಂಗಡಿಗರು ಗುಂಡು ಹೊಡೆದ ಪೊಲೀಸನನ್ನು ಹೊಡೆಯಲು ಹೋದರು. ನಮ್ಮದು ಅಹಿಂಸಾತ್ಮಕ ಹೋರಾಟ, ಪೊಲೀಸರನ್ನು ಕೊಲ್ಲದಿರಿ, ಹಿಂಸೆ ಮಾಡದಿರಿ ಎಂದು ಮಹಾದೇವ ಸಂಗಡಿಗರನ್ನು ತಡೆದರು. ಮಹಾದೇವನ ಉಸಿರಾಟ ನಿಂತಿತು. ದೇಶದೆಲ್ಲೆಡೆ ಈ ಸುದ್ದಿ ಹರಡಿತು. ಪತ್ನಿ ಸಿದ್ಧಮ್ಮ ಗಂಡನ ಬಲಿದಾನದ ತ್ಯಾಗವನ್ನು ಧೈರ್ಯವಾಗಿ ಎದುರಿಸಿದರು. ಮಹಾದೇವರಿಗಾಗಿ ದೇಶ ಮರುಗಿತು. ಈ ಮರುಕ ಹಾಡಾಗಿ ಹರಿಯಿತು.

> ಭಾರತ ದೇಶದ ಬಂಧ ವಿಮೋಚನೆಗೆ ಭಾರೀ ಕಷ್ಟವ ಸೋಸಿದರು
> ತಾರುಣ್ಯವೆಲ್ಲವ ತುರಂಗದಲಿ ಕಳೆದು ಮಡಿದ ಮಹಾಶೂರ ಮೈಲಾರರು
> ತುಂಟರ ತುಂಟನು, ಭಂಟರ ಭಂಟನು, ಸಾತ್ವಿಕರೊಳಗೆ ಸರದಾರ!
> ದಿಟ್ಟನ ಹೆಸರನು ಹುಟ್ಟಿದ ಕೂಸಿಗೆ ಇಟ್ಟರೂ ತೀರದು ಉಪಕಾರ!



**ಕ್ಷೇತ್ರ :** ಮಾತನಾಡುವುದು

**ಸಾಮರ್ಥ್ಯ : ಸಮಾರಂಭದ ಕಾರ್ಯಕ್ರಮಗಳನ್ನು ನಿರೂಪಣೆ ಮಾಡುವುದು.**

**ಆಶಯ :** ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದವರನ್ನು ಸ್ವಾತಂತ್ರ್ಯಯೋಧರು ಎಂದು ಕರೆಯುತ್ತಾರೆ. ಒಂದು ಉದ್ದೇಶಕ್ಕಾಗಿ ತಮ್ಮ ಬದುಕನ್ನೇ ಮೀಸಲಾಗಿಟ್ಟ ಇಂಥ ಯೋಧರು ಭಾರತದಲ್ಲಿ ಹಲವಾರು ಮಂದಿ ಇದ್ದಾರೆ. ದೇಶವೇ ಮುಖ್ಯ ಅದರ ಮುಂದೆ ಉಳಿದೆಲ್ಲವೂ ಗೌಣ. ದೇಶದ ಉಳಿವಿಗಾಗಿ ಎಂಥ ತ್ಯಾಗಕ್ಕೂ ಸಿದ್ಧರಾಗಿದ್ದವರು ಈ ಹಿರಿಯರು. ಸ್ವಾರ್ಥವನ್ನು ಮರೆತು ದೇಶದ ಪ್ರಗತಿಯನ್ನೇ ಮುಖ್ಯ ಗುರಿಯಾಗಿರಿಸಿಕೊಂಡರು ಇಂಥ ಅಸಂಖ್ಯಾತ ಯೋಧರನ್ನು ನಾವು ಕೃತಜ್ಞತೆಯಿಂದ ಸ್ಮರಿಸಬೇಕು. ಸ್ವಾತಂತ್ರ್ಯಯೋಧರ ಹೋರಾಟದಿಂದ ಸ್ವಾತಂತ್ರ್ಯ ಪಡೆದೆವು. ಸೈನಿಕರ, ಪೋಲೀಸರ ಸೇವಾನಿಷ್ಠೆಯಿಂದ ನಾವು ನಾಡಿನೊಳಗೆ ನೆಮ್ಮದಿಯಿಂದ ಬದುಕುತ್ತಿದ್ದೇವೆ. ನಮ್ಮ ಮೇಲೆ ಎಷ್ಟು ಜನರ ಋಣವಿದೆಯಲ್ಲವೆ?

## ಓದಿ ತಿಳಿಯಿರಿ

ಟೊಪ್ಪಿಗೆ–ಟೋಪಿ; ಕಿತ್ತಿ ಬರತಾರ–ಕಿತ್ತು ಬರುತ್ತಾರೆ; ಉತ್ಸಾಹದಿಂದ ಬರುತ್ತಾರೆ; ಚಿಕ್ಕವಯಸಿದ್ರು –ಚಿಕ್ಕ ವಯಸ್ಸಿದ್ದರೂ, ಚೊಕ್ಕ–ಚೆನ್ನಾಗಿ, ಅಚ್ಚುಕಟ್ಟಾಗಿ; ಚಂದ–ಚೆನ್ನ; ಚೊಕ್ಕಬಂಗಾರ–ಅಪ್ಪಟ ಬಂಗಾರ,ಅಪರಂಜಿ; ಧಕ್ಕೆ–ತೊಂದರೆ; ಅಣಿಯಾಗು–ಸಿದ್ಧವಾಗು; ಶೋಧ–ಹುಡುಕಾಟ; ತುಕಡಿ–ಸೈನ್ಯ; ಕಾಳಗ–ಯುದ್ಧ, ಹೋರಾಟ; ಮಡು–ಕೊಳ್ಳ ; ಕಾಲ್ಕೆಗೆ–ಓಡಿಹೋಗು; ದಿಟ್ಟತನ–ಧೈರ್ಯ;

ಖಜಾನೆ–ಬೊಕ್ಕಸ; ಖಾದಿ–ಕೈನೂಲಿನಿಂದ ನೆಯ್ದುಬಟ್ಟೆ ; ಓಟಕೀಳು – ಓಡಿಹೋಗು ; ಗುನುಗು–ಸತತವಾಗಿ ಧ್ವನಿಮಾಡು ; ಜೈಲು–ಸೆರೆಮನೆ , ಬಂಧೀಖಾನೆ. ಬಲಿದಾನ – ಪ್ರಾಣತ್ಯಾಗ ಸೋಸಿದರು–ಅನುಭವಿಸಿದರು.

## ವಿವರಣೆ

**ಸವಣೂರು** – ಹಾವೇರಿ ಜಿಲ್ಲೆಯ ಒಂದು ತಾಲ್ಲೂಕು ; **ಹೊನ್ನತ್ತಿ** – ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ಗ್ರಾಮ ; **ಬಾಳೆಹೊಸೂರು** – ಗದಗ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಒಂದು ಗ್ರಾಮ.

## ಪಾಠದ ಪೂರಕ ವಿವರಣೆ :

**ಅಸಹಕಾರ ಚಳುವಳಿ :** ಸರ್ಕಾರದ ವಿರುದ್ಧ ಜನತೆ ತನ್ನ ಅಸಮ್ಮತಿ, ವಿರೋಧ ಮತ್ತು ಪ್ರತಿಭಟನೆಯನ್ನು ವ್ಯಕ್ತಪಡಿಸುವ ಒಂದು ಮಾರ್ಗ. ಬ್ರಿಟನ್ ಸರಕಾರ ಭಾರತದ ಮೇಲೆ ವಿಧಿಸಿದ್ದ ಎಲ್ಲ ಕಾನೂನುಗಳಿಗೆ ಸಹಕರಿಸಬಾರದೆಂದು ನಡೆಸಿದ ಹೋರಾಟ.

**ಸತ್ಯಾಗ್ರಹ :** ಮಹಾತ್ಮಾಗಾಂಧಿಯವರು ತಮ್ಮ ಜೀವನದಲ್ಲಿ ಕಂಡುಕೊಂಡ ಸಿದ್ಧಾಂತ ಹಾಗೂ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಪಡೆಯುವುದಕ್ಕಾಗಿ ನಡೆಸಿದ ಚಳವಳಿ. ಮಹಾತ್ಮಾಗಾಂಧಿಯವರು ಭಾರತವನ್ನು ಬ್ರಿಟಿಷ್ ಸಾಮ್ರಾಜ್ಯಶಾಹಿಯಿಂದ ವಿಮೋಚನೆಗೊಳಿಸಲು ಸತ್ಯಾಗ್ರಹ ಮಾರ್ಗವನ್ನು ರೂಪಿಸಿದರು. ಮೊದಲು 'ಸದಾಗ್ರಹ' ಎಂದೂ ಅನಂತರ 'ಸತ್ಯಾಗ್ರಹ' ಎಂದೂ ಅದಕ್ಕೆ ಹೆಸರಿಟ್ಟರು.

**ಸಬರಮತಿ ಆಶ್ರಮ :** ಗಾಂಧೀಜಿ ಸ್ಥಾಪಿಸಿದ ಪ್ರಪಂಚ ಪ್ರಸಿದ್ಧ ಆಶ್ರಮ. ಗುಜರಾತ್ ಹತ್ತಿರವಿರುವ ಕೋಚಾಟ್ ಎಂಬಲ್ಲಿ ಗೆಳೆಯ ಜೀವನ್‌ಲಾಲ್ ದೇಸಾಯಿಯವರ ಬಂಗಲೆಯನ್ನು ಬಾಡಿಗೆಗೆ ತೆಗೆದುಕೊಂಡು ೧೯೧೫ ಮೇ ೨೫ ರಂದು ಈ ಆಶ್ರಮವನ್ನು ಇವರು ಆರಂಭಿಸಿದರು. ಈ ಆಶ್ರಮಕ್ಕೆ ಸತ್ಯಾಗ್ರಹ ಆಶ್ರಮವೆಂದು ಹೆಸರಿಡಲಾಗಿತ್ತು. ೧೯೧೭ರಲ್ಲಿ ಅಹಮದ್ ನಗರದಿಂದ ಉತ್ತರಕ್ಕೆ ೬ ಕಿ.ಮೀ. ದೂರದಲ್ಲಿರುವ ಸಬರಮತಿ ನದಿ ದಂಡೆಯಮೇಲೆ ಈ ಆಶ್ರಮವನ್ನು ಸ್ಥಳಾಂತರಿಸಲಾಯಿತು. ಇದರಿಂದ ಸಬರಮತಿ ಆಶ್ರಮವೆಂದು ಹೆಸರಾಯಿತು

**ದಂಡಿ ಸತ್ಯಾಗ್ರಹ :** ೧೯೩೦ರ ಮಾರ್ಚ್ ೧೨ರಂದು ಗಾಂಧಿಯವರು ತಮ್ಮ ಸುಪ್ರಸಿದ್ಧ ಉಪ್ಪಿನ ಸತ್ಯಾಗ್ರಹವನ್ನಾರಂಭಿಸಿದರು. ೭೮ ಮಂದಿ ಅನುಯಾಯಿಗಳೊಂದಿಗೆ ಗಾಂಧಿಯವರು ಅಹಮದಾಬಾದಿನಿಂದ ೨೪೦ ಮೈಲಿ ದೂರದಲ್ಲಿ ಸಮುದ್ರ ದಂಡೆಯಲ್ಲಿರುವ ದಂಡಿಗೆ ಹೊರಟರು. ಅವರಲ್ಲಿ ಮಹಾದೇವ ಕರ್ನಾಟಕದಿಂದ ಏಕೈಕ ಪ್ರತಿನಿಧಿಯಾಗಿ ಉಪ್ಪಿನ ಸತ್ಯಾಗ್ರಹದಲ್ಲಿ ಮಹಾತ್ಮ ಗಾಂಧೀಜಿಯವರೊಂದಿಗೆ ಭಾಗವಹಿಸಿದರು. ಉಪ್ಪಿನ ತಯಾರಿಕೆಯಲ್ಲಿ ಸರ್ಕಾರ ಹೊಂದಿದ್ದ ಏಕಸ್ವಾಮ್ಯವನ್ನು ವಿರೋಧಿಸಿ ಕಾನೂನು ಭಂಗ ಮಾಡುವುದು ಅವರ ಉದ್ದೇಶ. ಏಪ್ರಿಲ್ ೬ರಂದು ಅವರು ದಂಡಿಯನ್ನು ತಲುಪಿ, ಸಮುದ್ರಸ್ನಾನ ಮಾಡಿ ನೈಸರ್ಗಿಕ ಉಪ್ಪನ್ನು ಕೈಯಲ್ಲಿ ಹಿಡಿದರು. ನಾಡಿನಾದ್ಯಂತ ಜನರು ಗಾಂಧಿಯವರ ಕರೆಯಂತೆ ಸತ್ಯಾಗ್ರಹವನ್ನಾಚರಿಸಿದರು.

ಸುಮಾರು ಒಂದು ಲಕ್ಷ ಜನ ದಸ್ತಗಿರಿಯಾದರು. ಗಾಂಧಿಯವರ ದಸ್ತಗಿರಿ ಆಯಿತು. ಸರ್ಕಾರ ಅವರನ್ನು ಸೆರೆಯಲ್ಲಿಟ್ಟಿತ್ತು. ಸತ್ಯಾಗ್ರಹವನ್ನು ಅಂತ್ಯಗೊಳಿಸುವ ಬಗ್ಗೆ ಗಾಂಧಿ–ಇರ್ವಿನ್ ಒಪ್ಪಂದಕ್ಕೆ ಸಹಿಯಾಯಿತು. ಸತ್ಯಾಗ್ರಹಿಗಳು ಬಿಡುಗಡೆಯಾದರು. ಕೆಲವೊಂದು ಮಿತಿಗಳೊಳಗೆ, ಸ್ವಂತ ಉಪಯೋಗಕ್ಕಾಗಿ ಉಪ್ಪನ್ನು ತಯಾರಿಸಲು ಅವಕಾಶ ಲಭ್ಯವಾಯಿತು.

## ಅಭ್ಯಾಸ

### ಅ) ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

೧. ಮೋಟೆಬೆನ್ನೂರು ಎಂಬ ಹಳ್ಳಿ ಯಾವ ಜಿಲ್ಲೆಯಲ್ಲಿದೆ?

೨. ಯಾವ ಬಟ್ಟೆಗಳ ವಿಚಾರ ಯಾವಾಗಲೂ ಮೈಲಾರರ ಮನಸ್ಸಿನಲ್ಲಿ ಗುನುಗುಡುತ್ತಿತ್ತು?

೩. ಮಹಾದೇವನಿಗೆ ಗಾಂಧಿಯವರೊಡನೆ ಯಾವ ಆಶ್ರಮದಲ್ಲಿ ಇರಬೇಕೆಂದು ಆಸೆಯಾಯಿತು?

೪. ವಿಜಾಪುರ ಜಿಲ್ಲೆಯಲ್ಲಿ ಯಾವ ಗ್ರಾಮದಲ್ಲಿ ಖಾದಿ ಬಟ್ಟೆಗಳನ್ನು ತಯಾರು ಮಾಡುತ್ತಿದ್ದರು?

೫. ೧೯೪೨ರಲ್ಲಿ ಗಾಂಧೀಜಿಯವರು ಯಾವ ಘೋಷಣೆ ಮಾಡಿದರು?

೬. ಮಹದೇವ ಅವರು ಎಲ್ಲಿ ಪೋಲಿಸರ ಬಂದೂಕು ಅಪಹರಿಸಿದರು?

### ಆ) ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಮಹಾದೇವ, ಕಲಾದಗಿ ಎಂಬ ಒಂದು ಗ್ರಾಮಕ್ಕೆ ಹೋಗಿ ಏನು ತಿಳಿದುಕೊಂಡರು?

೨. ದಂಡಿಯಾತ್ರೆಯಲ್ಲಿ ಹೆಜ್ಜೆ ಹಾಕಿದ ಮಹಾದೇವರಿಗೆ ಆದ ಶಿಕ್ಷೆ ಏನು?

೩. ಮಹಾದೇವ ಮತ್ತು ಸಿದ್ಧಮತಿ ಇಬ್ಬರೂ ಸೇವಾಶ್ರಮದ ಸಂಚಾಲಕರಾಗಿ ಮಾಡಿದ ಕೆಲಸಗಳೇನು?

೪. ಮಹಾದೇವ ರಕ್ತದ ಮಡುವಿನಲ್ಲಿ ಬಿದ್ದದ್ದು ಏಕೆ?

### ಇ) ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಮಹಾದೇವ ಅವರು ಜೈಲಿನಿಂದ ಬಿಡುಗಡೆಯಾದ ಮೇಲೆ ಮಾಡಿದ ಕಾರ್ಯಗಳಾವುವು?

೨. ಬ್ರಿಟಿಷರು ಭಾರತ ಬಿಟ್ಟು ತೊಲಗಬೇಕಾದರೆ ಏನು ಮಾಡಬೇಕೆಂದು ಮಹಾದೇವ ಯೋಚಿಸಿದರು ?

೩. ಹೊಸರಿತ್ತಿಯಲ್ಲಿ ನಡೆದ ಘಟನೆಗಳಾವುವು?

**ಈ) ಖಾಲಿ ಜಾಗವನ್ನು ಸೂಕ್ತ ಪದಗಳಿಂದ ಭರ್ತಿ ಮಾಡಿ.**

೧. ಪ್ರಾಥಮಿಕ ನಂತರದ ವಿದ್ಯಾಭ್ಯಾಸಕ್ಕಾಗಿ ಮಹದೇವ ______________ ಶಾಲೆಗೆ ಹೋದರು.

೨. ಮಹಾದೇವ ______________ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದರು.

೩. ಹಾವೇರಿ ಜಿಲ್ಲಾ ಹೊಸರಿತ್ತಿಯಲ್ಲಿದ್ದ ಸರಕಾರದ ಕೇಂದ್ರ ______________ ವಸೂಲಿ ಮಾಡುತ್ತಿತ್ತು.

೪. ______________ ಬಾಳು ಮೀಸಲಾಗಿಸಬೇಕು

**ಉ) ಸ್ವಾತಂತ್ರ್ಯ ಚಳುವಳಿಗೆ ಸಂಬಂಧಪಟ್ಟ ಹತ್ತು ಪದಗಳನ್ನು ಬರೆಯಿರಿ.**

**ಊ) ಕೆಳಗೆ ಸೂಚಿಸಿರುವ ಊರುಗಳು ಯಾವ ಜಿಲ್ಲೆಯಲ್ಲಿವೆ ಎಂಬುದನ್ನು ಬರೆಯಿರಿ.**

೧. ಮೋಟೆಬೆನ್ನೂರು    ೨. ಹೊಸರಿತ್ತಿ    ೩. ಕಲಾದಗಿ

**ಋ) ಕೆಳಗೆ ಸೂಚಿಸಿರುವ ಪದಗಳನ್ನು ಬಳಸಿ ವಾಕ್ಯಗಳನ್ನು ರಚಿಸಿ.**

೧. ಸ್ವತಂತ್ರ    ೨. ಆಡಳಿತ    ೩.ದೇಶಭಕ್ತ    ೪. ಅಸಹಕಾರ    ೫. ಚಳುವಳಿ



## ಪೂರಕ ಪಾಠ

## ಯೋಧಗೀತೆ

ಜನ್ಮ ಭೂಮಿಗೆ ವಚನ ಕೊಟ್ಟು
ಹೋರಾಡುವ ಪಣವ ತೊಟ್ಟು
ದೇಶಕಾಗಿ ಪ್ರಾಣಬಿಟ್ಟ ವೀರರೇ
ನಿಮ್ಮ ಜೀವವನ್ನೆ ಬಲಿಕೊಟ್ಟ ಶೂರರೇ
ವಂದನೆ ವಂದನೆ ವಂದನೆ-ಭಾರತಾಂಬೆ ಯೋಧರಿಗೆ ವಂದನೆ

ಹಗಲು ಇರುಳು ಎನ್ನದೆ
ಗುಡುಗು ಸಿಡಿಲಿಗಂಜದೆ
ಭಯ ಭೀತಿ ಅರಿಯದ ಯುವಕರೇ
ಧೈರ್ಯದಿಂದ ಹೋರಾಡುವ ಧೀರರೇ
ವಂದನೆ ವಂದನೆ ವಂದನೆ-ಭಾರತಾಂಬೆ ಕುವರರಿಗೆ ವಂದನೆ

ಮಡದಿ ಮಕ್ಕಳ ಮನೆಯಲಿಟ್ಟು
ತಂದೆತಾಯ ಮನದಲಿಟ್ಟು
ಬಂಧು ಬಳಗ ಮರೆತು ಬಿಟ್ಟು
ನಮ್ಮ ನಾಡಿಗಾಗಿ ದುಡಿಯುತಿರುವ ಯೋಧರೇ
ವಂದನೆ ವಂದನೆ ವಂದನೆ–ಭಾರತಾಂಬೆ ಶೂರರಿಗೆ ವಂದನೆ

ಬಿಸಿಲು ಮಳೆಗೆ ಜಗ್ಗದ
ಚಳಿಗಾಳಿಗೆ ಕುಗ್ಗದ
ಬೆದರಿಕೆಗೆ ಬಗ್ಗದ ಧೀರರೇ
ಸ್ಥೈರ್ಯದಿಂದ ಮುನ್ನುಗ್ಗುವ ವೀರರೇ
ನಮ್ಮ ದೇಶವನ್ನು ಕಾಯುತಿರುವ ತರುಣರೇ
ವಂದನೆ ವಂದನೆ ವಂದನೆ–ಭಾರತಾಂಬೆ ಯೋಧರಿಗೆ ವಂದನೆ

– ಟಿ. ವಿಜಯಕುಮಾರ್



## ಕವಿ ಪರಿಚಯ



೧೯೫೬ರಲ್ಲಿ ಜನಿಸಿರುವ ಟಿ.ವಿಜಯಕುಮಾರ್ ಇವರು ಆಂಗ್ಲ ಭಾಷೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಮೈಸೂರಿನಲ್ಲಿ ನೆಲೆಸಿರುವ ಇವರು ರಚಿಸಿರುವ **ಯೋಧಗೀತೆ** ಜನಪ್ರಿಯವಾಗಿದೆ. ಸೈನಿಕಕಲ್ಯಾಣ ಮತ್ತು ಪುನರ್‌ವಸತಿ ಇಲಾಖೆ ತನ್ನ ೨೦೧೨ರ ಸ್ಮರಣ ಸಂಚಿಕೆಯಲ್ಲಿ ಈ ಗೀತೆಯನ್ನು ಪ್ರಕಟಿಸಿದೆ. ದಿನಪತ್ರಿಕೆಗಳಲ್ಲಿಯೂ ಈ ಗೀತೆ ಪ್ರಕಟಗೊಂಡಿದೆ.

## ವ್ಯಾಕರಣ

### ಸರ್ವನಾಮ

**ಕೆಳಗಿನ ವಾಕ್ಯಗುಚ್ಛವನ್ನು ಗಮನಿಸಿ :**

ಹಸೀನಾಳು ತಾಯಿತಂದೆಯರು ಹೇಳಿದ ಹಾಗೆ ಕೇಳುತ್ತಾಳೆ. ಹಸೀನಾಳ ತಾಯಿತಂದೆಯರು ಹಸೀನಾಳನ್ನು ಪ್ರೀತಿಸುತ್ತಾರೆ. ಹಸೀನಾಳಿಗೆ ಹಣ್ಣನ್ನು ಕೊಡುತ್ತಾರೆ. ಹಸೀನಾಳಿಂದ ಪುಸ್ತಕವನ್ನು ಓದಿಸುತ್ತಾರೆ. ಹಸೀನಾಳಲ್ಲಿ ಕೆಟ್ಟ ಗುಣಗಳಿಲ್ಲ.

ಮೇಲಿನ ವಾಕ್ಯಗಳಲ್ಲಿ 'ಹಸೀನಾ' ಎಂಬ ಪದವು ಮತ್ತೆ ಮತ್ತೆ ಬಂದಿದೆ. ಅದನ್ನು ಹಾಗೆಯೇ ಹೇಳಿದರೆ ಕೇಳಲು ಹಿತವೆನಿಸುವುದಿಲ್ಲ. ಹಾಗಾಗಿ ಅಂತಹ ಕಡೆಗಳಲ್ಲಿ ಅವಳು, ಅವಳ, ಅವಳಿಗೆ, ಅವಳಿಂದ, ಅವಳಲ್ಲಿ ಮುಂತಾದ ಪದಗಳನ್ನು ಬಳಸುತ್ತೇವೆ. ಹಾಗೆ ಬಳಸುವುದರಿಂದ ವಾಕ್ಯಗಳ ಅರ್ಥ ಕೆಡುವುದಿಲ್ಲ. ಹೀಗೆ ನಾಮಪದಗಳ ಬದಲಾಗಿ ಬಳಸುವ ಪದಗಳನ್ನು 'ಸರ್ವನಾಮ' ಎನ್ನುತ್ತೇವೆ.

ಈ ರೀತಿಯಲ್ಲಿ ನಾವು ಅನೇಕ ಸರ್ವನಾಮಗಳನ್ನು ಬಳಸುತ್ತೇವೆ. ಈ ಸರ್ವನಾಮಗಳು ಲಿಂಗ, ವಚನ, ವಿಭಕ್ತಿಗಳಿಗೆ ಅನುಗುಣವಾಗಿ ಬೇರೆ ಬೇರೆಯಾಗಿರುತ್ತವೆ. ನಾನು, ನಾವು, ಅವನು, ಅವಳು, ಅವರು, ಅದು, ಇದು, ಅವುಗಳು, ಇವುಗಳು, ಆತನು, ಈತನು, ಆಕೆ, ಈಕೆ, ತಾನು, ತಾವು, ಮೊದಲಾದ ಸರ್ವನಾಮಗಳನ್ನು ಗಮನಿಸಬಹುದು.

**ಈ ವಾಕ್ಯವೃಂದದಲ್ಲಿ ಕಾಣುವ ಸರ್ವನಾಮಗಳನ್ನು ಗುರುತಿಸಿ.**

ಜಾನ್ ನಡೆದುಕೊಂಡು ಹೋಗುತ್ತಿದ್ದ. ಅವನು ದಾರಿಯಲ್ಲಿ ಒಂದು ನಾಯಿಯನ್ನು ಕಂಡ. ಅದು ಬೌಬೌ ಎಂದು ಬೊಗಳುತ್ತಿತ್ತು. ಅದನ್ನು ಕಂಡು ಅವನಿಗೆ ಹೆದರಿಕೆಯಾಯಿತು. ಇದನ್ನು ನೋಡಿದ ಮೇರಿ ಅಲ್ಲಿಗೆ ಬಂದಳು. ಅದರ ಬೊಗಳುವಿಕೆ ಕೇಳಿ ಅವಳಿಗೂ ಹೆದರಿಕೆಯಾಯಿತು. ಇವರ ಹೆದರಿಕೆ ನೋಡಿ ಮನೆಯ ಮಾಲೀಕರಾದ ರಾಮರಾಯರು ಹೊರಗೆ ಬಂದರು. ಅವರು ನಾಯಿಯನ್ನು ಗದರಿಸಿದರು. ಅದು ಬಾಲ ಮಡಚಿಕೊಂಡು ಕುಂಯ್ ಕುಂಯ್ ಎನ್ನುತ್ತಾ ಸುಮ್ಮನಾಯಿತು.



ಮಾತನಾಡುವ ವ್ಯಕ್ತಿಗೆ/ವ್ಯಕ್ತಿಗಳಿಗೆ ಸಂಬಂಧಿಸಿದ ಪದಗಳು 'ಉತ್ತಮ ಪುರುಷ'ದ ಪದಗಳು. ಉದಾಹರಣೆಗೆ, ನಾನು, ನನ್ನನ್ನು, ನನ್ನಿಂದ, ನಮ್ಮ, ನಮ್ಮಲ್ಲಿ ಇತ್ಯಾದಿ. ಇವುಗಳು ಸರ್ವನಾಮಗಳಾದುದರಿಂದ ಇವುಗಳನ್ನು 'ಉತ್ತಮಪುರುಷ ಸರ್ವನಾಮ'ಗಳೆಂದು ಕರೆಯುತ್ತಾರೆ

ಮತ್ತೊಬ್ಬರೊಡನೆ ಮಾತನಾಡುವಾಗ ಅವರನ್ನು ಸಂಬೋಧಿಸಿ/ ಅವರನ್ನು ಕುರಿತು ಹೇಳುವುದನ್ನು ಸೂಚಿಸುವ ಪದಗಳು 'ಮಧ್ಯಮ ಪುರುಷ'ದ ಪದಗಳು. ಉದಾಹರಣೆಗೆ, ನೀವು, ನಿಮ್ಮನ್ನು, ನಿಮ್ಮಿಂದ, ನಿಮ್ಮ, ನಿಮ್ಮಲ್ಲಿ ಇತ್ಯಾದಿ. ಇವುಗಳು ಸರ್ವನಾಮಗಳಾದುದರಿಂದ ಇವುಗಳನ್ನು 'ಮಧ್ಯಮಪುರುಷ ಸರ್ವನಾಮ'ಗಳೆಂದು ಕರೆಯುತ್ತಾರೆ.

ನಮ್ಮನ್ನು ಕುರಿತು ಅಥವಾ ಯಾರೊಡನೆ ಮಾತನಾಡುತ್ತೇವೆಯೋ ಅವರನ್ನು ಕುರಿತು ಹೇಳದೆ ಬೇರೆ ಯಾರನ್ನೋ ಕುರಿತೂ ನಾವು ಮಾತನಾಡುತ್ತೇವೆ. ಇದನ್ನು ಸೂಚಿಸುವ ಪದಗಳು 'ಪ್ರಥಮಪುರುಷ' ಪದಗಳು. ಉದಾಹರಣೆಗೆ ಅವನು, ಅವಳು, ಅವರು ಇತ್ಯಾದಿ. ಇವುಗಳು ಸರ್ವನಾಮಗಳಾದುದರಿಂದ ಇವುಗಳನ್ನು 'ಉತ್ತಮ ಪುರುಷ ಸರ್ವನಾಮ'ಗಳೆಂದು ಕರೆಯುತ್ತಾರೆ.

## ಆತ್ಮಾರ್ಥಕ ಸರ್ವನಾಮ

ಸೃಜನಾ ತನ್ನ ಪುಸ್ತಕವನ್ನು ಕಳೆದುಬಿಟ್ಟಳು.

ಶೇಖರನು ತನಗೆ ಪುಸ್ತಕವು ಬೇಕೆಂದು ಕೇಳಿದನು.

ಸೃಜನಾಳು ಸೃಜನಾಳ ಪುಸ್ತಕವನ್ನು ಕಳೆದುಬಿಟ್ಟಳು ಎಂದು ಹೇಳಿದರೆ ಸರಿಯಾಗದು. ಹಾಗಾಗಿ 'ಸೃಜನಾ ತನ್ನ ಪುಸ್ತಕವನ್ನು ಕಳೆದುಬಿಟ್ಟಳು' ಎಂದು ಹೇಳುತ್ತೇವೆ. ಹೀಗೆಯೇ ಶೇಖರನು ಶೇಖರನಿಗೆ ಪುಸ್ತಕವು ಬೇಕೆಂದು ಕೇಳಿದನು ಎಂದು ಹೇಳುವ ಬದಲಿಗೆ 'ಶೇಖರನು ತನಗೆ ಪುಸ್ತಕವು ಬೇಕೆಂದು ಕೇಳಿದನು' ಎಂದು ಹೇಳುತ್ತೇವೆ. ಹೀಗೆ ಪ್ರಥಮ ಪುರುಷದಲ್ಲಿ ಬಳಸಲಾಗುವ ಸರ್ವನಾಮಗಳು 'ಆತ್ಮಾರ್ಥಕ ಸರ್ವನಾಮ'ಗಳೆನಿಸಿಕೊಳ್ಳುತ್ತವೆ.

ತಾನು, ತಾವು, ತಮ್ಮನ್ನು, ತಮಗೆ, ತಮ್ಮ, ತನ್ನ – ಇವೆಲ್ಲವೂ ಆತ್ಮಾರ್ಥಕ ಸರ್ವನಾಮಗಳೇ.

## ಪ್ರಶ್ನಾರ್ಥಕ ಸರ್ವನಾಮ

ಯಾರು ಬಂದರು? ಯಾವನು ಬಂದನು? ನೀನು ಏನು ಮಾಡಿದೆ? ನೀನು ಏಕೆ ಬಂದೆ?
ಈ ಮೇಲಿನ ವಾಕ್ಯಗಳಲ್ಲಿ ಪ್ರಶ್ನೆ ಕೇಳುವ ಸಂದರ್ಭದಲ್ಲಿ ಸರ್ವನಾಮಗಳನ್ನು ಬಳಸಲಾಗಿದೆ. ಇವುಗಳನ್ನು ಪ್ರಶ್ನಾರ್ಥಕ ಸರ್ವನಾಮ ಎನ್ನುವರು.

ಯಾರು, ಎಂಥವನು, ಎಂಥವಳು – ಇವೆಲ್ಲ ಪ್ರಶ್ನಾರ್ಥಕ ಸರ್ವನಾಮಗಳೇ.



### ಅಭ್ಯಾಸ

**ಉದಾಹರಣೆಯಲ್ಲಿ ನೀಡಿದಂತೆ ಕೆಳಗಿನ ವಾಕ್ಯಗಳಲ್ಲಿ ಸರ್ವನಾಮಗಳನ್ನು ಗುರುತಿಸಿ ಅವು ಯಾವ ರೀತಿಯ ಸರ್ವನಾಮಗಳೆಂದು ತಿಳಿಸಿ.**

| ಕ್ರಮ ಸಂಖ್ಯೆ | ವಾಕ್ಯಗಳು | ಸರ್ವನಾಮ ಪದಗಳು | ಸರ್ವನಾಮದ ವಿಧ |
|---|---|---|---|
| ಉದಾ: | ಕಷ್ಟ ಬಂದಾಗ ನಾವು ಯಾರಿಗೂ ಸಹಾಯ ಮಾಡದಿದ್ದರೆ ನಮಗೆ ಯಾರೂ ಸಹಾಯ ಮಾಡಲಾರರು. | ನಾವು,ನಮಗೆ | ಉತ್ತಮ ಪುರುಷ ಸರ್ವನಾಮ |
| ೧ | ನೀನು ಸುಳ್ಳುಗಾರನೆಂದು ಗೊತ್ತಾದ ಮೇಲೆ ನೀನು ನಿಜ ಹೇಳಿದರೂ ನಿನ್ನನ್ನು ಯಾರೂ ನಂಬುವುದಿಲ್ಲ. | | |
| ೨ | ಅವನಿಗೆ ಅವನ ಅಕ್ಕ ಒಂದು ಪುಸ್ತಕ ಕೊಟ್ಟಳು. | | |

| ೪ | ಅವನು ತನ್ನ ಪುಸ್ತಕವನ್ನು ಬಹಳ ಮೆಚ್ಚಿಕೊಂಡನು. | | |
|---|---|---|---|
| ೫ | ನಮ್ಮ ನಮ್ಮ ಕೆಲಸಗಳನ್ನು ನಾವೇ ಮಾಡಿಕೊಳ್ಳಬೇಕು | | |
| ೬ | ನಾವು ಊರಿಗೆ ಹೋಗಿ ನಿಮ್ಮ ಸಾಮಾನುಗಳನ್ನೂ ಅವುಗಳನ್ನಿಟ್ಟಿರುವ ಪೆಟ್ಟಿಗೆಗಳನ್ನೂ ತರುತ್ತೇವೆ. | | |

## ಚೆನ್ನುಡಿ

**'ಇತಿಹಾಸವೆಂಬುದು ಕೇವಲ ರಾಜರಾಣಿಯರ ಕಥೆಯಲ್ಲ, ಕಾಲಕಾಲಕ್ಕೆ ಬದಲಾಗುತ್ತಾ ಬಂದ ಬದುಕು. ಅದರ ಕಾಲಧರ್ಮ, ಅದರಿಂದ ಪ್ರಭಾವಿತರಾದ ಜನರ ರೀತಿನೀತಿಗಳು, ಆ ಸಾಮಾಜಿಕ ವ್ಯವಸ್ಥೆಯ ಪ್ರಮುಖ ಶಕ್ತಿಗಳು–ಇವೆಲ್ಲ ಇತಿಹಾಸವನ್ನು ಬಿಂಬಿಸುವ ಮುಖ್ಯ ಅಂಶಗಳಾಗಿವೆ. ಸಾಮ್ರಾಜ್ಯಗಳು ಎದ್ದು ಬಿದ್ದ ಉತ್ಕರ್ಷ–ಅಧಃಪತನಗಳಿಗೆ ಯಾವನೋ ರಾಜ,ಒಬ್ಬಳು ರಾಣಿ ಕಾರಣವೆನ್ನುವುದು ಸರಿಯಾಗದು. ಆ ಸೃಷ್ಟಿ, ಲಯದ ಹಿಂದೆ ಆಯಾ ಜನಾಂಗಗಳ ಕಥೆಯಿದೆ. ಈ ಘಟನೆಗಳ ಹಿಂದೆ ಜನಜೀವನ, ಕಲೆ, ಸಂಸ್ಕೃತಿಗಳ ಪ್ರೇರಕ ಶಕ್ತಿಗಳಿವೆ.'**

–ನಿರಂಜನ (ಮೂಲ ಹೆಸರು: ಕುಳಕುಂದ ಶಿವರಾಯ. ಪತ್ರಕರ್ತರಾಗಿ, ಕಾದಂಬರಿಕಾರರಾಗಿ, ಕಥೆಗಾರರಾಗಿ, ಸಾಮಾಜಿಕ ಹೋರಾಟಗಾರರಾಗಿ ಪ್ರಸಿದ್ಧರು)





## ಪದ್ಯ ಪಾಠ – ೮

# ವಚನಗಳು

– ಜೇಡರ ದಾಸಿಮಯ್ಯ

**ಪ್ರವೇಶ :** ವಚನ ಎಂಬುದು ಒಂದು ಕಾವ್ಯಪ್ರಕಾರ. ಮಾತಿಗೆ ಸಮೀಪವಾದ ಭಾಷೆಯಲ್ಲಿ ವಚನಗಳು ಸೃಷ್ಟಿಯಾಗಿವೆ. ಹನ್ನೆರಡನೆಯ ಶತಮಾನದಲ್ಲಿ ಜಾತಿ ಭೇದಗಳಿಲ್ಲದೆ, ಹಿರಿಯರು ಕಿರಿಯರು ಎಂಬ ತಾರತಮ್ಯವಿಲ್ಲದೆ, ಗಂಡು–ಹೆಣ್ಣು ಎಂಬ ಭೇದವಿಲ್ಲದೆ ಹಲವಾರು ಮಂದಿ ವಚನಗಳನ್ನು ರಚಿಸಿದ್ದಾರೆ. ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ, ಮಾದರ ಚನ್ನಯ್ಯ, ಅಂಬಿಗರ ಚೌಡಯ್ಯ ಮುಂತಾದ ಅನೇಕ ವಚನಕಾರರ ವಚನಗಳು ಕನ್ನಡ ಸಾಹಿತ್ಯದಲ್ಲಿ ಹೇರಳವಾಗಿವೆ. ಇವರಲ್ಲಿ ಮೊದಲು ವಚನಗಳನ್ನು ರಚಿಸಿ ಆದ್ಯ ವಚನಕಾರ ಎನಿಸಿಕೊಂಡವನು ಜೇಡರ ದಾಸಿಮಯ್ಯ. ಈತನ ಕೆಲವು ವಚನಗಳನ್ನು ನಾವಿಲ್ಲಿ ಕಾಣಬಹುದು.





### ದಾನ

ನೀನೀಶನೀಯದೆ ಮಾನಿಸನೀವನೆ?
ನೀನೀಸುವ ಕಾರಣ ಮಾನಿಸನೀವನು
ಮಾನಿಸನ ಹೃದಯದೊಳು ಹೊಕ್ಕು
ನೀನೀಸುವ ಕಾರಣದಿಂದ
ನೀನೇ ಶರಣೆಂಬೆ ಕಾಣಾ ರಾಮನಾಥ ೧

ಎತ್ತು ನಿಮ್ಮದಾನ;
ಬಿತ್ತು ನಿಮ್ಮದಾನ
ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ
ನಿಮ್ಮದಾನವನುಂಡು ಅನ್ಯರನೆ ಹೊಗಳುವ
ಕುನ್ನಿಗಳನೇನೆಂಬೆ ಹೇಳಾ ರಾಮನಾಥ ೨

### ಭಕ್ತ–ಭಕ್ತಿ

ಬರುಸಟೆಗನ ಭಕ್ತಿ
ದಿಟವೆಂದು ನಚ್ಚಲುಬೇಡ
ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟನೆಗೆದಂತಾಯಿತ್ತು ಕಾಣಾ ರಾಮನಾಥ ೩



ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ
ಇರುಳೆಲ್ಲ ನಡೆದನಾ ಸುಂಕಕಂಜಿ
ಕಳವೆಯೆಲ್ಲಾ ಹೋಗಿ ಬರಿಗೋಣಿ ಉಳಿದಿತ್ತು
ಅಳಿಮನದವನ ಭಕ್ತಿ ಇಂತಾಯಿತ್ತು ಕಾಣಾ ರಾಮನಾಥ ೪

ಕಡೆಗೀಲಿಲ್ಲದ ಬಂಡಿ
ಹೊಡೆಗೆಡೆಯದೆ ಮಾಣ್ಬುದೇ?
ಕಡೆಗೀಲು ಬಂಡಿಗಾಧಾರ
ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಭಕ್ತರ ನುಡಿಗಡಣವೇ
ಕಡೆಗೀಲು ಕಾಣಾ ರಾಮನಾಥ ೫

### ಭಕ್ತನ ಪರೀಕ್ಷೆ

ಹರ ತನ್ನ ಭಕ್ತರ ತಿರಿವಂತೆ ಮಾಡುವ,
ಒರೆದು ನೋಡುವ ಸುವರ್ಣದ ಚಿನ್ನದಂತೆ,
ಅರೆದು ನೋಡುವ ಚಂದನದಂತೆ,
ಅರಿದು ನೋಡುವ ಕಬ್ಬಿನ ಕೋಲಿನಂತೆ,
ಬೆದರದೆ ಬೆಚ್ಚದೆ ಇದ್ದಡೆ,
ಕರವಿಡಿದೆತ್ತಿಕೊಂಬ, ನಮ್ಮ ರಾಮನಾಥ ೬



**ಕ್ಷೇತ್ರ :** ಓದುವುದು.

**ಸಾಮರ್ಥ್ಯ : ಓದಿದ ವಿಷಯಗಳ ಬಗ್ಗೆ ಆಲೋಚಿಸಿ ತಾರ್ಕಿಕವಾಗಿ ತೀರ್ಮಾನಿಸುವುದು.**

**ಆಶಯ :** ಭಕ್ತಿಯನ್ನು ಕೆಲವರು ಪ್ರದರ್ಶನಕ್ಕಾಗಿ ಮಾಡುತ್ತಾರೆ ಅದು ಸಲ್ಲದು. ಒಳ್ಳೆಯ ಮಾತುಗಳು ನಮ್ಮ ಜೀವನವನ್ನು ಒಳ್ಳೆಯ ನೆಲೆಗೆ ತಲುಪಿಸುತ್ತವೆ.ಇಂಥ ಹಲವು ನೀತಿ ನಮ್ಮ ವಚನಗಳಲ್ಲಿವೆ. ಅದನ್ನು ಹೇಳುವಲ್ಲಿ ಅವರು ಬಳಸುವ ಭಾಷೆ, ಉಪಮೆ ಇವುಗಳು ಗಮನಾರ್ಹ. ಶಬ್ದ ಚಿತ್ರಗಳ ಮೂಲಕ ತಾವು ಹೇಳಬೇಕಾದ್ದನ್ನು ಹೇಳುವ, ಭಾಷೆಗೆ ಮೀರಿದ ಭಾವನೆಗಳನ್ನು ತಿಳಿಸುವ ಪ್ರಯತ್ನ ವಚನಗಳಲ್ಲಿದೆ.



**ಜೇಡರ ದಾಸಿಮಯ್ಯ** : ಹನ್ನೊಂದನೆಯ ಶತಮಾನದಲ್ಲಿದ್ದ ಹಿರಿಯ ಶಿವಶರಣ. ಯಾದಗಿರಿ ಸನಿಹದ ಮುದೇನೂರಿನವನಾದ ದಾಸಿಮಯ್ಯ ಆದ್ಯವಚನಕಾರನೆಂದೇ ಮಾನ್ಯನಾಗಿದ್ದಾನೆ. **'ರಾಮನಾಥ'** ಎಂಬ ಅಂಕಿತದಿಂದ ರಚಿಸಿರುವ ಈತನ ೧೫೦ ವಚನಗಳು ದೊರೆತಿವೆ. ಸರಳ ಮತ್ತು ನೇರ ನಿರೂಪಣೆಯಿಂದ ಕೂಡಿರುವ ದಾಸಿಮಯ್ಯನ ವಚನಗಳು ಸಾಮಾಜಿಕ ಮೌಲ್ಯಗಳಿಂದ ಜನಮಾನ್ಯವಾಗಿದೆ.

## ಮರು ಓದು

೧. ನೀನು ಈಶನು ಈಯದೆ ಮಾನಿಸನು ಈವನೆ? ನೀನು ನೀಸುವ ಕಾರಣ ಮಾನಿಸನು ಈವನು. ಮಾನಿಸನ ಹೃದಯದೊಳು ಹೊಕ್ಕು ನೀನು ನೀಸುವ ಕಾರಣದಿಂದ ನೀನೇ ಶರಣು ಎಂಬೆ ಕಾಣಾ ರಾಮನಾಥ.

೨. ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ. ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ. ನಿಮ್ಮದಾನವನು ಉಂಡು ಅನ್ಯರನೆ ಹೊಗಳುವ ಕುನ್ನಿಗಳನು ಏನೆಂಬೆ ಹೇಳಾ ರಾಮನಾಥ.

೩. ಬರುಸಟೆಗನ ಭಕ್ತಿ ದಿಟ ಎಂದು ನಚ್ಚಲುಬೇಡ. ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತೆ ಆಯಿತ್ತು ಕಾಣಾ ರಾಮನಾಥ.

೪. ಹರಿದ ಗೋಣಿಯಲ್ಲಿ ಒಬ್ಬ ಕಳವೆಯ ತುಂಬಿದ. ಇರುಳೆಲ್ಲ ನಡೆದನು ಆತ ಸುಂಕಕೆ ಅಂಜಿ. ಕಳವೆಯೆಲ್ಲಾ ಹೋಗಿ ಬರಿ ಗೋಣಿ ಉಳಿದಿತ್ತು, ಅಳಿಮನದವನ ಭಕ್ತಿ ಇಂತು ಆಯಿತ್ತು ಕಾಣಾ ರಾಮನಾಥ.

೫. ಕಡೆಗೀಲು ಇಲ್ಲದ ಬಂಡಿ ಹೊಡೆ ಕೆಡೆಯದೆ ಮಾಣ್ಬುದೇ? ಕಡೆಗೀಲು ಬಂಡಿಗೆ ಆಧಾರ. ಕಡುದರ್ಪವು ಏರಿದ ಒಡಲು ಎಂಬ ಬಂಡಿಗೆ ಮೃಡಭಕ್ತರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ.

೬. ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ, ಅರೆದು ನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನ ಕೋಲಿನಂತೆ, ಬೆದರದೆ ಬೆಚ್ಚದೆ ಇದ್ದಡೆ, ಕರ ಪಿಡಿದು ಎತ್ತಿಕೊಂಬ ನಮ್ಮ ರಾಮನಾಥ.



## ಓದಿ ತಿಳಿಯಿರಿ

ಈಶ–ಒಡೆಯ, ಈಶ್ವರ; ಈಯು–ಕೊಡು; ಮಾನಿಸ–ಮನುಷ್ಯ; ನೀಸು–ನಿಭಾಯಿಸು, ನೋಡಿಕೊಳ್ಳು ; ಕುನ್ನಿ–ನಾಯಿ; ಬರುಸಟೆಗ–ಕೇವಲ ಸುಳ್ಳು ಹೇಳುವವ; ದಿಟ–ಸತ್ಯ; ಗೋಣಿ–ಸೆಣಬಿನ ನಾರಿನಿಂದ ಮಾಡಿದ ಚೀಲ; ಕಳವೆ–ಭತ್ತ; ಸುಂಕ–ತೆರಿಗೆ; ಅಳಿಮನ–ಕೆಟ್ಟಮನಸ್ಸು; ಕಡೆಗೀಲು–ಬಂಡಿಯ ಗಾಲಿ ಕಳಚದಂತೆ ಅಚ್ಚಿನಕಡೆಗೆ ಹಾಕುವ ಮೊಳೆ, ಕಡಾಣಿ; ಹೊಡೆಗೆಡೆ–

ಬೋರಲಾಗಿ ಬೀಳು, ಮಗುಚಿ ಬೀಳು; ಕಡುದರ್ಪ–ವಿಪರೀತ ಗರ್ವ; ಮೃಡ–ಶಿವ; ನುಡಿಗಡಣ–ಮಾತಿನ ಸಮೂಹ, ವಚನ; ತಿರಿ–ತಿರುಗಾಡು, ಭಿಕ್ಷೆಬೇಡು; ಒರೆ–ಉಜ್ಜು, ತಿಕ್ಕು, ಪರೀಕ್ಷಿಸು; ಸುವರ್ಣ–ಚಿನ್ನ; ಅರೆ–ಉಜ್ಜು, ತಿಕ್ಕು; ಅರಿ–ಕತ್ತರಿಸು, ಹಿಂಡು ; ಕರವಿಡಿದು–ಕೈಹಿಡಿದು.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ದೇವರ ದಾನವನುಂಡು ಕುನ್ನಿಗಳು ಯಾರನ್ನು ಹೊಗಳುವರು?

೨. ಒಡಲೆಂಬ ಬಂಡಿಗೆ ಯಾರ ನುಡಿಗಡಣ ಕಡೆಗೀಲು?

೩. ಹರ ತನ್ನ ಭಕ್ತರು ಏನು ಮಾಡುವಂತೆ ಮಾಡುತ್ತಾನೆ?

೪. ಬೆದರದೆ ಬೆಚ್ಚದೆ ಇದ್ದರೆ ರಾಮನಾಥ ಏನು ಮಾಡುತ್ತಾನೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು/ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಬರುಸಟೆಗನ ಭಕ್ತಿ ಹೇಗಿರುತ್ತದೆ?

೨. ಕಡೆಗೀಲಿಲ್ಲದ ಬಂಡಿ ಏನನ್ನು ಸೂಚಿಸುತ್ತದೆ?

೩. ಶಿವ ತನ್ನ ಭಕ್ತರನ್ನು ಹೇಗೆ ಪರೀಕ್ಷಿಸುತ್ತಾನೆ?

**ಇ. ಕೆಳಗಿನ ಪ್ರಶ್ನೆಗಳನ್ನು ಐದಾರು ವಾಕ್ಯಗಳಲ್ಲಿ ಉತ್ತರಿಸಿ.**

೧. ದಾನವನ್ನು ಕುರಿತು ಜೇಡರ ದಾಸಿಮಯ್ಯ ಏನು ಹೇಳಿದ್ದಾನೆ?

೨. ಭಕ್ತ ಹೇಗಿರಬೇಕೆಂದು ಜೇಡರ ದಾಸಿಮಯ್ಯನ ಆಶಯವಾಗಿದೆ?

**ಈ. ಕೆಳಗಿನ ಸಾಲುಗಳಿಗೆ ವಿವರಣೆ ನೀಡಿರಿ.**

೧. ನೀನೀಸುವ ಕಾರಣ ನೀನೆ ಶರಣೆಂಬೆ

೨. ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತಾಯಿತು

೩. ಕಡೆಗೀಲು ಬಂಡಿಗಾಧಾರ

೪. ಅರಿದು ನೋಡುವ ಕಬ್ಬಿನ ಕೋಲಿನಂತೆ

**ಉ. ಪದ್ಯಕ್ಕೆ ಅನುಗುಣವಾಗಿ ಸೂಕ್ತವಾದ ಪದಗಳನ್ನು ತುಂಬಿ ಸಾಲುಗಳನ್ನು ಪೂರ್ಣಗೊಳಿಸಿ.**

೧. ನೀನೇ ಶರಣೆಂಬೆ ಕಾಣಾ ______________

೨. ಮಠದೊಳಗಣ ಬೆಕ್ಕು ಇಲಿಯ ಕಂಡು ______________

೩. ಕಳವೆಯೆಲ್ಲಾ ಹೋಗಿ ____________

೪. ಮೃಡಭಕ್ತರ ನುಡಿಗಡಣವೇ ____________

೫. ಒರೆದು ನೋಡುವ ಸುವರ್ಣದ ____________

ಊ. ಕೆಳಗೆ ಕೊಟ್ಟಿರುವ ಪದಗಳನ್ನು ಬಿಡಿಸಿ ಬರೆದು, ಅವುಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ.

೧. ನಿಮ್ಮದಾನವನುಂಡು

೨. ಕುನ್ನಿಗಳನೇನೆಂಬೆ

೩. ಕರವಿಡಿದೆತ್ತಿಕೊಂಬ

## ಭಾಷಾಭ್ಯಾಸ

ಅ) ಕೆಳಗೆ ನೀಡಿರುವ ವಾಕ್ಯಗಳಲ್ಲಿ ದಟ್ಟಬಣ್ಣದ ಪದಗಳ ತಪ್ಪನ್ನು ಸರಿಪಡಿಸಿ ಬರೆಯಿರಿ.

೧. ದೇವರ **ಕ್ರಪೆಯಿಂದ** ನಮ್ಮೂರಿನ ರಾಜು **ಉಪಹಾರ ಗ್ರಹ, ಫಲಹಾರ** ಮಂದಿರ ಇಟ್ಟಿದ್ದಾನೆ

೨. **ಆದಾರ** ಕಾರ್ಡು ಪಡೆಯಲು **ನೊಂದಣಿ** ಮಾಡಿಸಬೇಕು

೩. ನನಗೆ ಊಟಮಾಡಲು **ಬಲತ್ಕಾರ** ಮಾಡಬೇಡಿ

೪. **ಬಾರತ ಜಾತ್ಯಾತೀತ ರಾಸ್ತ್ರ**

೫. ನಮ್ಮ ದೇಶದಲ್ಲಿ **ಕೋಟ್ಯಾಧಿಪತಿಗಳಿದ್ದಾರೆ**

೬. ಸಂಗೀತದಲ್ಲಿ **ಶೃತಿ** ಅಗತ್ಯ



### ಚೆನ್ನುಡಿ

**ಕನ್ನಡದ ಸೊಗಸು**

**'ಮಲ್ಲಿಗೆಗೆ ಹುಳಿಯಕ್ಕು, ಕಲ್ಲಿಗೆ ಗಂಟಕ್ಕು**
**ಹಲ್ಲಿಗೆ ನೊಣವು ಸವಿಯಕ್ಕು–ಕನ್ನಡದ**
**ಸೊಲ್ಲುಗಳ ನೋಡಿ ಸರ್ವಜ್ಞ'**

– ಸರ್ವಜ್ಞ (ತ್ರಿಪದಿಯಲ್ಲಿ ವಚನಗಳನ್ನು ರಚಿಸಿದವ, ಕಾಲ ಸುಮಾರು ೧೭೦೦)

ಪದಗಳ ಅರ್ಥ : ಮಲ್ಲಿಗೆ–ಮಣ್ಣಿನ ಮಡಕೆ; ಕಲ್ಲಿ–ಚೀಲ; ಹಲ್ಲಿ–ಪಲ್ಲಿ, ಒಂದು ಸರೀಸೃಪ

## ಗದ್ಯ ಪಾಠ – ೯

# ಹಳ್ಳಿಮನೆ ಆಶ್ರಮವಾಗಲಿ

– ನರೇಂದ್ರ ರೈ ದೇರ್ಲ

**ಪ್ರವೇಶ :** ಕೆಲಸದ ನಿಮಿತ್ತ ನಗರಕ್ಕೆ ಹೋದ ಮಹನೀಯರೊಬ್ಬರು ಹತ್ತು ವರುಷದ ನಂತರ ಮರಳಿ ಹಳ್ಳಿಗೆ ಬಂದರು. ಬದಲಾದ ಹಳ್ಳಿ ನೋಡಿ ಅವರಿಗೆ ಆಶ್ಚರ್ಯವಾಯಿತು. ಜನರ ಮಾತು, ಕತೆ, ರೀತಿ, ರಿವಾಜು ಎಲ್ಲವನ್ನು ಸೂಕ್ಷ್ಮವಾಗಿ ಗಮನಿಸಿದರು. ಸಾಕಷ್ಟು ಬದಲಾವಣೆಯಾಗಿರುವುದನ್ನು ಕಂಡರು. ಏಕೆ ಹೀಗೆ? ಎಂದು ಯೋಚಿಸಿತು ಅವರ ಮನ. ರಸ್ತೆಗಳು ಅಗಲವಾಗಿ ಹಲವಾರು ಮರಗಳು ಉರುಳಿದ್ದವು. ಹಂಚಿನ ಮನೆಯ ಸ್ಥಾನದಲ್ಲಿ ಕಾಂಕ್ರೀಟ್‌ನ ಮನೆಗಳು ಎದ್ದು ಕಾಣುತ್ತಿದ್ದವು. ಹೀಗೆ ಹಳ್ಳಿಯ ವಾತಾವರಣದಲ್ಲಿ ಹಲವಾರು ಬದಲಾವಣೆಗಳನ್ನು ಕಂಡರು. ತಲೆಯೊಳಗೆ ಏಕೆ? ಹೇಗೆ? ಏನು? ಹೊಕ್ಕು ತಾರ್ಕಿಕವಾಗಿ ಯೋಚಿಸಲು ಅವಕಾಶ ಮಾಡಿಕೊಟ್ಟವು. ಅಂತಹ ಒಂದು ಸಂದರ್ಭದ ಹಿನ್ನೆಲೆಯನ್ನು ಒಳಗೊಂಡ "ಹಳ್ಳಿಮನೆ ಆಶ್ರಮವಾಗಲಿ" ಗದ್ಯಭಾಗ ಇಲ್ಲಿದೆ.

"ಈಗ ಹೆಸರಿಗಷ್ಟೇ ನಮ್ಮದು ಹಳ್ಳಿ ಮನೆ. ಶೀತ ನೆಗಡಿಯಾದ್ರು ಔಷಧಿ ಮಾತ್ರೆಗೆಂದು ನಗರದ ಕ್ಲಿನಿಕ್ ಹುಡುಕುವ ಮಂದಿ ನಾವು. ಪಕ್ಕದ ನಮ್ಮ ಕಾಡು ಗುಡ್ಡೆಯಲ್ಲಿ ನೂರಾರು ಬಗೆಬಗೆಯ ಬೇರು ಬಳ್ಳಿಗಳಿವೆ. ಯಾವ ಕಾಯಿಲೆಗೆ ಯಾವ ಮೂಲಿಕೆ ಒಂದೂ ಗೊತ್ತಿಲ್ಲ" – ಗುಡ್ಡೆ ಮನೆ ಸುಬ್ರಾಯಭಟ್ಟರು ಮಾತನಾಡುವಾಗ ಅವರ ಮನೆಯಂಗಳ ನೋಡಿದೆ. ಹಸುರು ಸವರಿ ಮಟ್ಟಸ ಮಾಡಿ ಕಾಂಕ್ರೀಟ್ ಹಾಸಿದ್ದಾರೆ. ಅವರಜ್ಜ, ಅಜ್ಜಿ ನೆಟ್ಟ ಗಿಡಮೂಲಿಕೆಗಳ ಯಾವ ಪಳೆಯುಳಿಕೆಯೂ ಅಲ್ಲಿ ಉಳಿದಿರಲಿಲ್ಲ. ಕೈಗೆಟಕುತ್ತಿದ್ದ ಅಜ್ಜಿಯ ಮನೆಮದ್ದಿನ ಸಂಚಿ ನಾಪತ್ತೆಯಾಗಿದೆ.





ಒಂದು ಕಾಲವಿತ್ತು. ಮನೆಮಕ್ಕಳು ಕೆಮ್ಮಿದರೆ ಸಾಕು. ಅಜ್ಜಿ, ಮನೆಯ ಹಿಂಬದಿಯ ಕೈತೋಟಕ್ಕೆ ನುಗ್ಗಿ ಅದ್ಯಾವುದೋ ಎಲೆ ಬೇರುಗಳನ್ನು ಕಿತ್ತು ತಂದು ಕಾಯಿಲೆಗಳನ್ನು ಓಡಿಸಲು ಅಣಿಯಾಗುತ್ತಿದ್ದಳು. ದೇಹಕ್ಕೆ ಯಾವುದೇ ಬಗೆಯಲ್ಲೂ ತೊಂದರೆ ಕೊಡದ ರಾಮಬಾಣಗಳವು. ಈಗ ಕಾಲ ಬದಲಾಗಿದೆ. ಮನೆಯಂಗಳದಲ್ಲಿ ಮೂಲಿಕೆಯೂ ಇಲ್ಲ. ಒಳಗಡೆ ಅಜ್ಜಿಯೂ ಇಲ್ಲ.

ಎಲ್ಲ ರಂಗಗಳಂತೆ ಗ್ರಾಮಲೋಕವೂ ಇಂದು ದುಡ್ಡಿನ ಪಾಯದ ಮೇಲೆ ನಿಂತಿದೆ. ಆ ಪಾಯದಲ್ಲಿ ಕಾಣಿಸಿಕೊಳ್ಳುವ ಯಾವುದೇ ಹಸುರು ಆತನ ಪಾಲಿಗೆ ದುಡ್ಡು ಸುರಿಯುತ್ತಿರಬೇಕು. ಸ್ವಚ್ಛಗಾಳಿ, ಶುದ್ಧ ನೀರು, ತಾಜಾ ತರಕಾರಿ ಯಾವುದೂ ಬೇಡ.

ಹೆಂಚಿನ ಮಾಡಿನ ಮೇಲೆ ಮಲಗಿದ ಅದ್ಯಾವುದೋ ಕಾಡುಹೂವಿನ ಬಳ್ಳಿಯನ್ನು ಸವರಿ, ಮಲಗುವ ಕೋಣೆಯ ಕಿಟಕಿಗೆ ಅಡ್ಡವಾಗುವ ಗುಲಾಬಿ ಗಿಡವನ್ನು ಕಿತ್ತು, ಬಾವಿನೀರಿಗೆ ಹೂವು ಉದುರಿಸುವ ಕಿಸ್ಕಾರವನ್ನು ಕಡಿದು, ಗೋಡೆಗೆ ಅಂಟಿಕೊಂಡೇ ಬೆಳೆದ ಪಾರಿಜಾತವನ್ನು ಬಗೆದು ಅಲ್ಲೆಲ್ಲ ಕಾಂಕ್ರೀಟ್ ಬಿತ್ತುವ ವಿಕೃತಿ ಇಂದು ಹಳ್ಳಿಗೂ ಹಬ್ಬುತ್ತಿದೆ. ಒಂದು ಕಾಲದಲ್ಲಿ ಹಳ್ಳಿ ಹೀಗೆಯೇ ಇರಬೇಕು ಎಂದು ಜಗಲಿಯಲ್ಲಿ ಕೂತು ಹರಟಿದ ಮನಸ್ಸುಗಳೇ ಇಂದು ಮನೆಯೆದುರ ಹಸುರನ್ನು ಖಾಲಿ ಮಾಡುತ್ತಿವೆ. ಇಂದು ಮಹಾನಗರ ಸೇರಿ ಹಳ್ಳಿ ಮನೆಗೆ ಹಿಂದಿರುಗುವ ಮನೆಮಗ ಹಣದೊಂದಿಗೆ ಎರಡು ಯೋಚನೆ – ಯೋಜನೆಗಳನ್ನು ಹೊತ್ತುಕೊಂಡೇ ಬರುತ್ತಾನೆ. ಸಾಧ್ಯವಾದರೆ ಸಾಂಪ್ರದಾಯಿಕ ಹಳ್ಳಿಮನೆಯ ರೂಪ ಬದಲಾಯಿಸುವುದು, ಅಸಾಧ್ಯವಾದರೆ ಮನೆ, ಕೃಷಿ ಭೂಮಿ ಎಲ್ಲವನ್ನೂ ಮೂರು ಕಾಸಿಗೆ ಮಾರಾಟ ಮಾಡಿ ಹಿರಿಯರನ್ನೇ ಮಹಾನಗರಕ್ಕೆ ವರ್ಗಾಯಿಸುವುದು. ಗ್ರಾಮಪ್ರೀತಿಯ ಹಿರಿಯರು ಮೊದಲನೆಯದ್ದನ್ನೇ ಒಪ್ಪಿಕೊಳ್ಳುವುದು ಹೆಚ್ಚು. ಅಂದೇ ಮನೆಯೆದುರ ಅಜ್ಜನ ಜಗಲಿಗೆ, ಹಿಂಬದಿಯ ಬಚ್ಚಲುಮನೆಗೆ ಪೆಟ್ಟು ಬೀಳಲಾರಂಭಿಸುತ್ತದೆ. ಕೆತ್ತನೆಯ ಅಪೂರ್ವ ಕಂಬಗಳು, ಗೋಡೆ ನಡುವಿನ ಗಿಳಿಸೂವೆಗಳು, ಸಾಂಪ್ರದಾಯಿಕ ಕಾವಿ ಹಾಸು, ಉಪ್ಪರಿಗೆ ಹತ್ತುವ ಮರದ ಮೆಟ್ಟಿಲು, ಚೆಂದದ ಬಾವಿ ಕಟ್ಟೆ, ಪಾರಿಜಾತದಡಿಯ ಕಲ್ಲುಬೆಂಚು –ಹೀಗೆ ಎಲ್ಲವನ್ನೂ ಕಡಿದು ಬಡಿದು ಹಾಳು ಮಾಡಲಾಗುತ್ತದೆ. ಗುಡ್ಡದ ಏರಿಯಿಂದ ಜಿನುಗುತ್ತಿದ್ದ ಒರತೆ ಅಜ್ಞಾತವಾಗುತ್ತದೆ. ಮನೆಯೆದುರ ಮುರಕಲ್ಲಿನ ತುಳಸಿಕಟ್ಟೆ ಮಾಯವಾಗುತ್ತದೆ. ಹಟ್ಟಿಯ ಗೋಡೆಯಮೇಲೆ ಅಜ್ಜಿ ಹಾಕಿದ್ದ ಸುಣ್ಣದ ಗೆರೆ ಇಲ್ಲವಾಗುತ್ತದೆ. ನಡೆದಾಡುವ ನೆಲ ನಯವಾಗಿರಬೇಕು. ಮಲಗುವ ಕೋಣೆಯ ಗೋಡೆಗಳಿಗೆ ಒಂದೊಂದು ಬಣ್ಣವಿರಬೇಕು ಎಂಬ ಆಸೆಗಳು ಮಲೆನಾಡಿನ ಪರಂಪರೆಯ ಮೇಲೆ ನಿರಂತರ ದಾಳಿ ಮಾಡುತ್ತಿವೆ.

ಮನೆಗೆ ಮೊನ್ನೆ ಬೆಂಗಳೂರಿನಿಂದ ನೆಂಟರು ಬಂದಿದ್ದರು. ಆ ಕೂಡುಕೂಟದಲ್ಲಿ ನಾಲ್ಕೈದು ಮಕ್ಕಳಿದ್ದರು. ಜೇನುಪೆಟ್ಟಿಗೆ ನೋಡುವ ನೆಪದಲ್ಲಿ ಅವರೆಲ್ಲಾ ತೋಟಕ್ಕೆ ಇಳಿದರು. ತೋಟದ ನಡುವೆ ಒಂದು ಪುಟ್ಟ ಕಣಿಯಿದೆ. ಅದರ ಮೇಲೆ ಒಂಟಿ ಕಂಗಿನ ಪಾಪು ಇದೆ. ನಾವೆಲ್ಲ ಸುಲಭವಾಗಿ ದಾಟಿ ಆಚೆ ಹೋಗಿ ಮಕ್ಕಳಿಗೆ ಕಾದೆವು. ಮಕ್ಕಳು ಆ ಒಂಟಿ ಪಾಪು ದಾಟಲಾರದೆ

ಸುಮಾರು ಹೊತ್ತು ಆಚೆ ಕಡೆಯೇ ಉಳಿದರು. ನಾವೆಲ್ಲಾ ಈಚೆ ಕಡೆಗೆ, ಅವರೆಲ್ಲಾ ಆಚೆ ಕಡೆಗೆ. ಹೀಗೆ ದಾಟಿ ಹಾಗೆ ದಾಟಿ ಎಂದು ಎಲ್ಲಾ ಬಗೆಯಲ್ಲೂ ವಿವರಿಸಿದರೂ ಆ ಮಕ್ಕಳಿಗೆ ಐದಡಿ ಉದ್ದದ ಆ ಪಾಪು ದಾಟಲು ಸಾಧ್ಯವಾಗಲೇ ಇಲ್ಲ. ಮತ್ತೆ ನಾವೇ ಒಬ್ಬೊಬ್ಬರನ್ನು ಎತ್ತಿ ದಾಟಿಸಬೇಕಾಯಿತು.

ಒಂದು ಇಡೀ ಪೇಟೆಯೇ ಪಾಪುವಿನ ಆ ಕಡೆ; ಒಂದು ಹಳ್ಳಿ ಪಾಪುವಿನ ಈ ಕಡೆ ನಿಂತಂತೆ ಆ ಕ್ಷಣ ಭಾಸವಾಯಿತು. ಆಗ ಹುಡುಗರ ಅಪ್ಪ ಹೇಳಿದ ಒಂದು ಮಾತು. 'ನಾನೀಗ ಬೆಂಗಳೂರಿನಲ್ಲಿದ್ದರೂ ಹಿಂದೆ ಇಲ್ಲೇ ಇದ್ದ ಕಾರಣಕ್ಕೆ ಇದೆಲ್ಲಾ ಅಭ್ಯಾಸ. ಇಲ್ಲದಿದ್ದರೆ ನಾನೂ ಆಚೆಯೇ ಉಳಿಯುತ್ತಿದ್ದೆ' ಎಂಬುದು ಈ ಕಾರಣಕ್ಕಾಗಿಯೇ ಇರಬೇಕು. ರಾಧಣ್ಣ ಬೆಂಗಳೂರಿನಿಂದ ಬಂದಾಗಲೆಲ್ಲಾ ಈಗಲೂ ಒಂದು ದಿನವಿಡೀ ಗುಡ್ಡೆ ಅಲೆಯುತ್ತಾರೆ. ಸೊಗದೆ ಬೇರು, ಅಮೃತಬಳ್ಳಿ, ಕಡಿರಬೇರು ಎಂದೆಲ್ಲಾ ನೆನಪಿಟ್ಟುಕೊಂಡು ಅಗೆದು ಬಗೆದು ರಾಜಧಾನಿಗೆ ಒಯ್ಯುತ್ತಾರೆ.

ಶೀತ, ನೆಗಡಿ, ಜ್ವರ ಬಂದಾಗಲೆಲ್ಲಾ ರಾಧಣ್ಣ ಬೆಂಗಳೂರಿನಲ್ಲಿ ಮಕ್ಕಳಿಗೆ ಬೇರಿನ ನಾರಿನ ಕಷಾಯ ಕುಡಿಸುತ್ತಾರಂತೆ. ಅವರು ನೆಲೆನಿಂತ ಬಡಾವಣೆಯಲ್ಲಿ ಅವರಿಗೆ 'ಹಳ್ಳಿಮದ್ದಿನವ' ಎಂಬ ಖ್ಯಾತಿ ಇದೆಯಂತೆ. ಪ್ರತಿಬಾರಿ ಮಕ್ಕಳು ನಾಟಿ ಮದ್ದು ಕುಡಿಯುವಾಗಲೂ ರಾಧಣ್ಣ ಊರು – ಹಳ್ಳಿಯ ಮಹತ್ವ, ಬೇರು –ನಾರುಗಳಿಗೆ ಇರುವ ಅಗಾಧ ಶಕ್ತಿಯನ್ನು ವಿವರಿಸಿಯೇ ಕುಡಿಸುತ್ತಾರಂತೆ. ಆರಂಭದಲ್ಲಿ ಅವರ ನಗರದ ಪತ್ನಿ ಇದನ್ನೆಲ್ಲಾ ವಿರೋಧಿಸಿ ಮಕ್ಕಳ ಪರವಾಗಿ ನಿಂತು ನಾಟಿ ಮದ್ದನ್ನು ಕುಡಿಯದಂತೆ ಬಾಯಿಗೆ ಕೈ ಅಡ್ಡ ಹಿಡಿಯುತ್ತಿದ್ದಳಂತೆ. ಈಗ ಎಲ್ಲವೂ ಸರಿಯಾಗಿದೆ ಎನ್ನುತ್ತಾರೆ ರಾಧಣ್ಣ.

ಪಕ್ಕದ ಮನೆಯ ವಿಜ್ಞಾನಿ ಯಾವಾಗ ರಾಧಣ್ಣನ ಮನೆಗೆ ಬಂದು ಶೀತ, ನೆಗಡಿ, ಜ್ವರಗಳಿಗೆ ನಾರು ಬೇರಿನ ಕಷಾಯ ಬೇಡಿದ್ರೋ ಅಂದಿನಿಂದ ಅವರ ಮನೆಯಲ್ಲಿ ಇಂಥ ಬದಲಾವಣೆ– ಜಾಗೃತಿ ಆಯಿತು ಎನ್ನುತ್ತಾರೆ ಅವರು. ದೂರದ ಬೆಟ್ಟ ಏನೇ ಇರಲಿ, ನಮ್ಮ ಮನೆಯ ಹಾಡಿ – ತೋಡು, ವಳಚ್ಚಿಲ್‌ನೊಳಗೆ ಅದೆಷ್ಟೋ ಮದ್ದಿನ ಗಿಡಗಳು ಸಹಜವಾಗಿ ನೆಲದ ಸಾರವುಂಡು ಬೆಳೆದಿರುತ್ತವೆ. ಮನೆಯ ಸುತ್ತಲಿನ ಪರಿಸರವನ್ನು ಆಶ್ರಮ ಮಾಡಿಕೊಂಡರೆ, ಎಲ್ಲವನ್ನೂ ಹಾಗೆಯೇ ಉಳಿಸಿಕೊಂಡರೆ ಖಂಡಿತಾ ಅದು ನಮ್ಮನ್ನು ಉಳಿಸುತ್ತದೆ.

ಮನೆ ಕಟ್ಟುವವರೆಲ್ಲಾ ಒಳಗಿನ ವಿನ್ಯಾಸ, ಎತ್ತರ, ಗ್ರಾನೈಟ್, ಸ್ನಾನದ ಟಬ್ ಬಗ್ಗೆ ಯೋಚಿಸುವವರೇ ಹೆಚ್ಚು. ಸುತ್ತಲೊಂದು ಕೈತೋಟ ಬೇಕು, ಅದರಲ್ಲಿ ಬಗೆ ಬಗೆಯ ಗಿಡಮೂಲಿಕೆಗಳು, ಹೂವಿನ ಗಿಡ ಇರಬೇಕೆಂದು ಯೋಚಿಸುವವರು ಕಮ್ಮಿ. ಕೆಲವರಿಗೆ ಜಾಗದ ಕೊರತೆ. ಇನ್ನು ಕೆಲವರಿಗೆ ಸಮಯದ ಕೊರತೆ. ಮನಸ್ಸಿದ್ದರೆ ಇರುವ ಆರಡಿ ಮೂರಡಿಯಲ್ಲಿ ಹಸುರು ಬಿತ್ತಬಹುದು. ನಮ್ಮ ಒಳಗಡೆ ಹಸುರು ಇದ್ದಾಗ ಇದೆಲ್ಲಾ ಸುಲಭ ಸಾಧ್ಯ.

**ಕ್ಷೇತ್ರ :** ಮಾತನಾಡುವುದು.

**ಸಾಮರ್ಥ್ಯ : ವಿಷಯಾನುಸಾರ ಸಹಜ ಚರ್ಚೆ, ಸಂವಾದ ವಿವರಣೆಗಳೊಂದಿಗೆ ಮಾತನಾಡುವುದು.**

**ಆಶಯ :** ಕಾಲ ಬದಲಾಗುತ್ತಿದ್ದಂತೆ ಹಳ್ಳಿಗಳು ಬದಲಾಗುತ್ತಿವೆ. ಪ್ರಕೃತಿಯ ಮಡಿಲಲ್ಲಿ ಇರಬೇಕಾದ ಹಳ್ಳಿಗಳು ನಗರದ ಮಾದರಿಯನ್ನು ಅನುಕರಿಸುತ್ತಿವೆ. ಹಳ್ಳಿಗಳಲ್ಲಿ ಪಟ್ಟಣದ ಸೌಲಭ್ಯಗಳಿರಬಾರದು ಎಂಬ ಅರ್ಥವಲ್ಲ, ಅನುಕರಣೆಯಿಂದಾಗಿ ಹಳ್ಳಿಯ ಪರಿಸರ ಹಾಳಾಗಬಾರದು. ನಮ್ಮ ಅಮೂಲ್ಯವಾದ ಸಸ್ಯಸಂಪತ್ತು ಹಾಳಾಗಬಾರದು. ಹಳ್ಳಿಯ ಮನೆಗಳು ಆ ಪರಿಸರಕ್ಕೆ ಹೊಂದಿಕೊಂಡಂತೆ ಇರಬೇಕು.

## ಲೇಖಕರ ಪರಿಚಯ



ಅಂಕಣಕಾರ, ಕೃಷಿಕ, ಪತ್ರಿಕೋದ್ಯಮಿಯಾದ ಡಾ. ನರೇಂದ್ರ ರೈ ದೇರ್ಲ ಅವರು ಪುತ್ತೂರು ತಾಲ್ಲೂಕು, ಕಯ್ಯೂರು ಗ್ರಾಮದಲ್ಲಿ ೧೯೬೪ರಲ್ಲಿ ಜನಿಸಿದರು. ಈಗ ದಕ್ಷಿಣ ಕನ್ನಡದ ಬೆಳ್ಳಾರೆಯ ಡಾ. ಶಿವರಾಮ ಕಾರಂತ ಸರಕಾರಿ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. **ತೊದಲು, ಕಾಂಕ್ರೀಟ್ ಕಾಡಿನ ಪುಟ್ಟ ಕಿಟಕಿ, ಎಂಟುಲೋಕ, ನೆಲದವರು, ಸಾವಯವ ಕೃಷಿ, ಕೃಷಿ-ದೇಸೀ ಚಿಂತನೆ, ಹಸುರು ಕೃಷಿಯ ನಿಟ್ಟುಸಿರುಗಳು** ಮುಂತಾದ ಹಲವು ಕೃತಿಗಳನ್ನು ಬರೆದಿದ್ದಾರೆ. **ಹಳ್ಳಿಮನೆ ಆಶ್ರಮವಾಗಲಿ** ಎಂಬ ಲೇಖನವನ್ನು ಅವರ **ಹಸುರು ಕೃಷಿಯ ನಿಟ್ಟುಸಿರುಗಳು** ಎಂಬ ಸಂಕಲನದಿಂದ ಆರಿಸಲಾಗಿದೆ.



## ಓದಿ ತಿಳಿಯಿರಿ

ಮಟ್ಟಸ-ಏರುತಗ್ಗಿಲ್ಲದ, ಸಪಾಟಾದ; ಸಂಚಿ-ಚೀಲ; ಪಾಯ-ಬುನಾದಿ; ತಾಜಾ-ಹೊಚ್ಚಹೊಸದಾದ; ಕಿಸ್ಕಾರ - ಕೆಂಪುಬಣ್ಣದ ಹೂಬಿಡುವ ಗಿಡ; ಗಿಳಿಸೂವೆ-ಮನೆಯಲ್ಲಿ ಬೆಳಕು ಬರಲು ಮಾಡುವ ಕಿಂಡಿ; ಮುರಕಲ್ಲು-ದೊಡ್ಡ ಇಟ್ಟಿಗೆ; ಕಣಿ-ತಗ್ಗು, ಕಂದಕ; ಕಂಗು-ಅಡಿಕೆ; ಹಾಡಿ-ಹಳ್ಳಿ, ಗ್ರಾಮ; ಗುಡ್ಡೆ-ಗುಡ್ಡ; ತೋಡು-ಹಳ್ಳ; ವಳಚ್ಚಿಲ್-ಗದ್ದೆ ಬಯಲು (ತುಳುಪದ); ಕಂಗಿನ ಪಾಪು - ಅಡಿಕೆ ಮರದಿಂದ ಮಾಡಿದ ಸೇತುವೆ ; ವಿಕೃತಿ - ಬದಲಾವಣೆ, ಕುರೂಪ.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಸುಬ್ರಾಯ ಭಟ್ಟರ ಮನೆಯಂಗಳದಲ್ಲಿ ಏನು ಹಾಸಿದ್ದಾರೆ?

೨. ಗ್ರಾಮಲೋಕ ಇಂದು ಯಾವುದರ ಮೇಲೆ ನಿಂತಿದೆ?

೩. ನೆಂಟರು ಏನನ್ನು ನೋಡುವ ನೆಪದಲ್ಲಿ ತೋಟಕ್ಕೆ ಇಳಿದರು?

೪. ರಾಧಣ್ಣ ಮಕ್ಕಳಿಗೆ ಯಾವುದರ ಕಷಾಯ ಕುಡಿಸುತ್ತಾರೆ?

೫. ನಮ್ಮ ಒಳಗಡೆ ಏನು ಇದ್ದಾಗ ಎಲ್ಲ ಸುಲಭ ಸಾಧ್ಯ?

೬. ಗುಡ್ಡದ ಏರಿಯಿಂದ ಜಿನುಗುತ್ತಿದ್ದ ನೀರು ಏನಾಗುತ್ತದೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಮೂರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಸುಬ್ರಾಯ ಭಟ್ಟರ ಮನೆಯ ಅಂಗಳ ಹೇಗಿದೆ?

೨. ಮಕ್ಕಳು ಪಾಪುವನ್ನು ದಾಟಿದ ಬಗೆ ಹೇಗೆ?

೩. ರಾಧಣ್ಣನ ಪತ್ನಿ ನಾಟಿ ಮದ್ದಿನ ಬಗ್ಗೆ ಯಾವ ಅಭಿಪ್ರಾಯ ಹೊಂದಿದ್ದರು?

೪. ಮನೆ ಕಟ್ಟುವವರು ಏನನ್ನು ಯೋಚಿಸುವುದು ಕಡಿಮೆ?

**ಇ. ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಹಳ್ಳಿಯಲ್ಲಿ ಕಾಂಕ್ರೀಟ್ ವಿಕೃತಿ ಹೇಗೆ ಹಬ್ಬುತ್ತಿದೆ?

೨. ಮನೆಮಗ ಯಾವ ಯೋಚನೆಗಳನ್ನು ಹೊತ್ತುಕೊಂಡು ಹಳ್ಳಿಗೆ ಬರುತ್ತಾನೆ?

೩. ಹಳ್ಳಿ ಮನೆಯ ಸ್ವರೂಪ ಏನಾಗುತ್ತಿದೆ?

೪. ರಾಧಣ್ಣ ಮಕ್ಕಳಿಗೆ ಹೇಳಿದ ಮಾತುಗಳೇನು?

**ಈ. ಕೆಳಗೆ ನೀಡಿರುವ ಪದಗಳನ್ನು ಬಳಸಿ ಅರ್ಥವತ್ತಾದ ವಾಕ್ಯಗಳನ್ನು ರಚಿಸಿ.**

ಗಿಡಮೂಲಿಕೆಗಳು, ನಾಟಿಮದ್ದು, ಪರಿಸರ



## ಭಾಷಾಭ್ಯಾಸ

**ಅ. ಬಿಟ್ಟಿರುವ ಪದಗಳನ್ನು ಸೂಕ್ತ ಪದಗಳಿಂದ ತುಂಬಿ ಕೆಳಗಿನ ಗಾದೆ ಮಾತುಗಳನ್ನು ಪೂರ್ಣಗೊಳಿಸಿ.**

೧. ದೂರದ ಬೆಟ್ಟ ______________

೨. ಮಂತ್ರಿಸಿದರೆ ______________ ಉದುರುತ್ತಾ ?

೩. ______________ ದುಡ್ಡು ಹಾಲಿಗೆ, ______________ ದುಡ್ಡು ನೀರಿಗೆ.

೪. ಹಿತ್ತಲ ಗಿಡ ______________

**ಆ. ಮನೆಯ ವಿವಿಧ ಸ್ಥಳಗಳನ್ನು ಸೂಚಿಸುವ ಪದಗಳನ್ನು ಆವರಣದಲ್ಲಿ ನೀಡಲಾಗಿದೆ. ಇವುಗಳಲ್ಲಿ ಮನೆಯ ವಾಸಸ್ಥಾನದ ಒಳಗಿನ ಮತ್ತು ಹೊರಗಿನ ಸ್ಥಳಗಳನ್ನು ಸೂಚಿಸುವ ಪದಗಳನ್ನು ವರ್ಗೀಕರಿಸಿ ಬರೆಯಿರಿ.**

(ಜಗುಲಿ, ಪಡಸಾಲೆ, ಅಡುಗೆಮನೆ, ಅಂಗಳ, ಹಿತ್ತಿಲು, ಹಜಾರ, ಕೊಟ್ಟಿಗೆ, ಉಗ್ರಾಣ, ಮಲಗುವ ಮನೆ, ದೇವರ ಕೋಣೆ)

**ಇ. ಕೆಳಗೆ ಸಸ್ಯಗಳಿಗೆ ಸಂಬಂಧಿಸಿದ ಮತ್ತು ನೀರಿಗೆ ಸಂಬಂಧಿಸಿದ ಪದಗಳನ್ನು ನೀಡಲಾಗಿದೆ. ಸಸ್ಯಗಳಿಗೆ ಸಂಬಂಧಿಸಿದ ಪದಗಳಿಗೆ ನೀಲಿ ಶಾಯಿಯಲ್ಲೂ ನೀರಿಗೆ ಸಂಬಂಧಿಸಿದ ಪದಗಳಿಗೆ ಕೆಂಪು ಶಾಯಿಯಲ್ಲೂ ವೃತ್ತ ಹಾಕಿ, ಎರಡೂ ಗುಂಪಿನ ಪದಗಳನ್ನು ಪ್ರತ್ಯೇಕವಾಗಿ ಅಕಾರಾದಿ ಕ್ರಮದಲ್ಲಿ ಜೋಡಿಸಿ.**

| ಗಿಡ | ಸಸಿ | ಜಲಪಾತ | ಸಿಪ್ಪೆ | ಟೊಂಗೆ | ಪ್ರವಾಹ |
|---|---|---|---|---|---|
| ಬತ್ತ | ಬಾವಿ | ಸೊಪ್ಪು | ಪಾತಿ | ಕಾಂಡ | ಬೇರು |
| ಮೂಲಿಕೆ | ಹಳ್ಳ | ಮರ | ಹೊಲ | ತರಕಾರಿ | ಕೊಳ |
| ತೋಡು | ದಳ | ಕಡಲು | ಹೊಳೆ | ಮೊಗ್ಗು | ಬಳ್ಳಿ |
| ಎಲೆ | ಪತ್ರೆ | ತಳಿರು | ಗರಿಕೆ | ಗದ್ದೆ | ನಲ್ಲಿ |
| ಸರೋವರ | ಕೊಂಬೆ | ನದಿ | ಕೆರೆ | ಬೇರು | ರೆಂಬೆ |



**ಈ. ಈ ಪಾಠದಲ್ಲಿರುವ ದಕ್ಷಿಣ ಕನ್ನಡ ಪ್ರದೇಶಕ್ಕೆ ವಿಶಿಷ್ಟವಾದ ಪದಗಳನ್ನು ವಾಕ್ಯದಲ್ಲಿ ಬಳಸಿ.**

ಕಿಸ್ಕಾರ, ಗಿಳಿಸೂವೆ, ಕಾವಿಹಾಸು, ಮುರಕಲ್ಲು, ಕೂಡುಕೂಟ,
ಕಣಿ, ಕಂಗು, ಪಾಪು, ವಳಚ್ಚಿಲ್

## ಚಟುವಟಿಕೆ

ಈ ಪಾಠದಲ್ಲಿ ಬರುವ ಆಂಗ್ಲ ಭಾಷಾ ಪದಗಳನ್ನು ಪಟ್ಟಿ ಮಾಡಿ. ಆ ಪದಗಳಿಗೆ ಇರುವ ಕನ್ನಡ ಅರ್ಥವನ್ನು ಬರೆಯಿರಿ. ಇದೇ ರೀತಿ ನೀವು ಮಾತನಾಡುವಾಗ ಬಳಸುವ ಆಂಗ್ಲಭಾಷಾ ಪದಗಳನ್ನು ಪಟ್ಟಿ ಮಾಡಿ. ಅದಕ್ಕೆ ಇರುವ ಕನ್ನಡ ಪದಗಳನ್ನು ಗುರುತಿಸಿ.

೧. ಹಳ್ಳಿಮದ್ದಿನ ಬಗ್ಗೆ ಹಿರಿಯರಿಂದ ಕೇಳಿ ಎಂಟು ಹತ್ತು ವಾಕ್ಯಗಳಲ್ಲಿ ಪುಟ್ಟ ಪ್ರಬಂಧ ಬರೆಯಿರಿ.

೨. ಬದಲಾಗುತ್ತಿರುವ ಹಳ್ಳಿಯ ಕುರಿತು ಕಿರು ಪ್ರಬಂಧ ಬರೆಯಿರಿ.

## ಭಾಷಾಭ್ಯಾಸ

### ಅನ್ಯದೇಶ್ಯ ಶಬ್ದಗಳು

ಒಂದು ಪ್ರದೇಶದಲ್ಲಿ ಸಾಮಾನ್ಯವಾಗಿ ಒಂದು ಭಾಷೆ ಹರಡಿಕೊಂಡಿರುತ್ತದೆ. (ಉದಾಹರಣೆಗೆ, ನಮ್ಮ ರಾಜ್ಯದಲ್ಲಿ ಕನ್ನಡ ರೂಢಿಯಾಗಿದೆ) ಈ ದೇಶಭಾಷೆಯನ್ನು ಆಡುವವರಿಗೆ ಬೇರೆ ಭಾಷೆಗಳನ್ನು ಆಡುವವರ ಸಂಗಡ ಹಲವು ವಿಧಗಳಲ್ಲಿ ಸಂಪರ್ಕಉಂಟಾಗುತ್ತದೆ. ಹೊರಗಿನಿಂದ ಅವರು ಬಂದು ಇವರ ಸಂಗಡ ವ್ಯಾಪಾರ ಮಾಡಬಹುದು. ಇವರ ದೇಶವನ್ನು ಗೆದ್ದು ಆಳಬಹುದು. ಇಲ್ಲೇ ಮನೆ ಮಾಡಿಕೊಂಡು ನೆಲೆಸಬಹುದು. ಇಂಥ ಸಂದರ್ಭಗಳಲ್ಲಿ ಅವರ ಭಾಷೆಗಳಿಂದ ಹಲಕೆಲವು ಶಬ್ದಗಳು ಒಂದು ದೇಶಭಾಷೆಗೆ ಸೇರಿಹೋಗುತ್ತವೆ. ಹೀಗೆ ಹೊರಗಿನ ಭಾಷೆಗಳಿಂದ ಬಂದು ಒಂದು ಭಾಷೆಗೆ ಸೇರುವ ಶಬ್ದಗಳಿಗೆ ಅನ್ಯದೇಶ್ಯಗಳೆಂದು ಹೆಸರು.

**ಸಂಸ್ಕೃತದಿಂದ ಕನ್ನಡಕ್ಕೆ ಬಂದ ಪದಗಳು:** ಭೂಮಿ, ನದಿ, ಅಜ್ಜ, ದಯೆ, ರಾತ್ರಿ, ಕಥೆ, ಸಂಜೆ, ನಿದ್ದೆ, ಹಬ್ಬ, ದೀಪ, ಮುಖ, ಶಕ್ತಿ, ಧರ್ಮ, ಪುಣ್ಯ, ರಾಜ, ಯುದ್ಧ ಇತ್ಯಾದಿ.

### ಕನ್ನಡಕ್ಕೆ ಬಂದ ಅನ್ಯದೇಶ್ಯ ಪದಗಳಿಗೆ ಕೆಲವು ಉದಾಹರಣೆಗಳು

**ಪರ್ಸೋ – ಅರಾಬಿಕ್‌ನಿಂದ ಬಂದುವು :** ಜಮೀನು, ಸರ್ಕಾರ, ರೈತ, ಸಲಾಮು, ಕಾನೂನು, ಕಾಗದ, ಬಂದೂಕ, ಚುನಾವಣೆ, ಮಂಜೂರು, ದರ್ಬಾರು, ಅಸಲು, ನಕಲು, ರಸ್ತೆ ಇತ್ಯಾದಿ

**ಇಂಗ್ಲಿಷ್‌ನಿಂದ ಬಂದುವು :** ಲಾಯರು, ಬ್ಯಾಂಕು, ಎಕರೆ, ಪ್ಲೇಗು, ನಂಬರು, ಮೈಲಿ, ಕಾರ್ಡು, ಫೀಜು, ಕಾಲೇಜು, ಜೈಲು ಇತ್ಯಾದಿ.

**ಪೋರ್ಚುಗೀಸಿನಿಂದ ಬಂದುವು :** ಅಲಮಾರು, ಸಾಬೂನು, ಪಾದ್ರಿ, ಇಸ್ತ್ರೀ, ಮೇಜು ಇತ್ಯಾದಿ

**ದೇಶ್ಯಶಬ್ದಗಳು :** ಹೊರಗಿನ ಭಾಷೆಗಳಿಂದ ಬಾರದೆ, ಒಂದು ಭಾಷೆಯಲ್ಲಿ ಮೊದಲಿನಿಂದಲೂ ಇರತಕ್ಕ ಅಥವಾ ಅದರ ಪ್ರಕೃತಿಗಳಿಂದಲೇ ಸಾಧಿತವಾಗಿರತಕ್ಕ ಶಬ್ದಗಳಿಗೆ ದೇಶ್ಯ ಶಬ್ದಗಳೆಂದು ಹೆಸರು.

**ಉದಾಹರಣೆ :** ನೆಲ, ಹೊಲ, ಅಕ್ಕಿ, ಕಲ್ಲು, ಹೊಳೆ, ಒಳ್ಳೆಯ, ಕೆಟ್ಟ, ಒಂದು ಎರಡು, ಹೇಳು, ಕೇಳು, ಹೆಚ್ಚು, ತಗ್ಗು, ಸುಮ್ಮನೆ, ಮೆಲ್ಲಗೆ, ತಿಳಿವಳಿಕೆ, ಹೊಂದಿಕೆ, ನಡತೆ, ತಿಳಿಸು, ಕಲಿಸು ಇತ್ಯಾದಿ.

## ವ್ಯಾಕರಣ

### ವಿಶೇಷಣಗಳು

ಒಂದು ಊರಿನಲ್ಲಿ ಶಂಕರ ಎಂಬ ಚಿಕ್ಕ ಹುಡುಗನಿದ್ದನು.

ಬಿಳಿ ಆನೆಗಳು ಬರ್ಮಾ ದೇಶದಲ್ಲಿ ಕಾಣಬರುತ್ತವೆ.

ಹಳೆ ಎತ್ತಿಗೆ ಹಾಳು ಬಂಡಿ

ಮೇಲಿನ ವಾಕ್ಯಗಳನ್ನು ಗಮನಿಸಿ. ಇಲ್ಲಿ 'ಚಿಕ್ಕ ಹುಡುಗ', 'ಬಿಳಿ ಆನೆ', ಹಳೆ ಎತ್ತು' ಎಂಬಲ್ಲಿ 'ಚಿಕ್ಕ', 'ಹಳೆ', ಬಿಳಿ' ಎಂಬ ಪದಗಳು ಅದೇ ವಾಕ್ಯದಲ್ಲಿ ಕಾಣುವ ಹುಡುಗ, ಎತ್ತು ಹಾಗೂ ಆನೆ ಎಂಬ ನಾಮಪದಗಳ ವಿಶೇಷವನ್ನು ಕುರಿತು ಹೇಳುತ್ತವೆ. ದೊಡ್ಡ ಚೀಲ, ಕೆಂಪು ತಾವರೆ, ಪುಟ್ಟ ನಾಯಿಮರಿ ಇವೆಲ್ಲ ಪದಗಳಲ್ಲೂ ವಿಶೇಷಣಗಳಿರುವುದನ್ನು ಗಮನಿಸಿ. ಹೀಗೆ ನಾಮಪದಗಳ ಮೊದಲಲ್ಲಿ ಆಯಾ ನಾಮಪದಗಳ ವಿಶೇಷವನ್ನು ಕುರಿತು ಹೇಳುವ ಪದಗಳನ್ನು 'ವಿಶೇಷಣ'ಗಳೆನ್ನುತ್ತೇವೆ.

ಈ ವಾಕ್ಯಗಳಲ್ಲಿ ವಿಶೇಷ್ಯ ಮತ್ತು ವಿಶೇಷಣಗಳನ್ನು ಗುರುತಿಸಿ.

| ಕ್ರಮ ಸಂಖ್ಯೆ | ವಾಕ್ಯಗಳು | ವಿಶೇಷ್ಯ | ವಿಶೇಷಣ |
|---|---|---|---|
| ೧ | ತೋಳವು ದೊಡ್ಡ ನಾಯಿಯಂತೆ ಇದೆ | | |
| ೨ | ಮಿನುಗುವ ನಕ್ಷತ್ರವನ್ನು ನೋಡುತ್ತಾ ಇರಲು ನನಗೆ ಇಷ್ಟ. | | |
| ೩ | ಭಾರತೀಯ ವಿಜ್ಞಾನಿಗಳು ಅತ್ಯಂತ ಬುದ್ಧಿವಂತರು. | | |
| ೪ | ಸುಸ್ವಾದ ಯಾತ್ರಿಕರು ತಂಗಲು ತಂಗುದಾಣಗಳಿರಬೇಕು. | | |



**ಚೆನ್ನುಡಿ**

**'ಹಲವು ಹಳ್ಳಗಳು ಹರಿದು ಬಂದು ಸಮುದ್ರವಾಗುವಂತೆ, ಕೆಲವನ್ನು ತಿಳಿದವರಿಂದ ಕಲಿತು, ಕೆಲವನ್ನು ಶಾಸ್ತ್ರಗಳನ್ನು ಕೇಳುತ್ತ, ಕೆಲವನ್ನು ಮಾಡುವವರನ್ನು ಕಂಡು,ಕೆಲವನ್ನು ಎಚ್ಚರದಿಂದ ನೋಡುತ್ತ, ಕೆಲವನ್ನು ಸಜ್ಜನರ ಸಹವಾಸದಿಂದ ತಿಳಿದರೆ ಮನುಷ್ಯ ಸರ್ವಜ್ಞನಾಗುತ್ತಾನೆ.'** (ಹೊಸಗನ್ನಡ ಭಾವಾನುವಾದ)

–ಪುಲಿಗೆರೆ ಸೋಮೇಶ್ವರ ('ಸೋಮೇಶ್ವರ ಶತಕ' ಎಂಬ ಚೌಪದಿಯ ಕಾವ್ಯವನ್ನು ರಚಿಸಿದವ, ಕಾಲ ಸುಮಾರು ೧೩ನೆಯ ಶತಮಾನ)

# ಪಠ್ಯಾಧಾರಿತ ಪದಕೋಶ–೧

(ಮೊದಲನೆಯ ಚತುರ್ಮಾಸದ ಪಾಠಗಳಿಂದ ಆಯ್ದ ಪದಗಳ ಕೋಶ)

## ಅ–ಆ

ಅಗ್ರಗಣ್ಯ – ಶ್ರೇಷ್ಠ
ಅಚ್ಚುಮೆಚ್ಚು – ಪ್ರೀತಿ
ಅಟ್ಟಿಸಿಕೊಂಡು – ಬೆನ್ನಟ್ಟಿ
ಅಣಿಯಾಗು – ಸಿದ್ಧವಾಗು
ಅನುಭವಜನ್ಯ–ಅನುಭವದಿಂದ ಬಂದುದು
ಅನಾದಿ–ಮೊದಲಿಲ್ಲದ
ಅಪರಿಮಿತ–ಮಿತಿಇಲ್ಲದಷ್ಟು
ಅಭೀಷ್ಟೆ–ಆಸೆ
ಅಬ್ಬರಿಸು–ಕೂಗು
ಅರಳು–ಹಿಗ್ಗು
ಅರಿ–ಕತ್ತರಿಸು
ಅರೆ–ಉಜ್ಜು, ತಿಕ್ಕು
ಆಲೆ–ಕಬ್ಬಿನ ರಸತೆಗೆಯುವ ಯಂತ್ರ
ಅಲೌಕಿಕ–ಲೌಕಿಕವಲ್ಲದ
ಅವಿತುಕೊಳ್ಳು–ಅಡಗಿಕೊ
ಅಳಿಮನ–ಕೆಟ್ಟ ಮನಸ್ಸು
ಅಳುಕು–ಹೆದರಿಕೆ
ಆಟ–ಕ್ರೀಡೆ
ಆತುರ–ಅವಸರ
ಆತ್ಮೋದ್ಧಾರ–ವ್ಯಕ್ತಿಯ ಉನ್ನತಿ
ಆಪ್ತ–ಹತ್ತಿರದವ, ಅತ್ಯಂತ ಪ್ರೀತಿಪಾತ್ರನಾದವ
ಆಧಿಪತ್ಯ–ಒಡೆತನ
ಆವತ್ತು–ಆ ಹೊತ್ತು, ಆ ದಿನ

## ಇ–ಈ

ಇರುಳು–ರಾತ್ರಿ, ಕತ್ತಲು
ಈಯಿಉ–ಕೊಡು
ಈಶ–ಒಡೆಯ

## ಉ–ಊ

ಉತ್ತೇಜನ–ಪ್ರೋತ್ಸಾಹ

## ಋ

ಋಣ–ಹಂಗು

## ಎ

ಎಂತಾಮಗ–ಏನು ಮಗ
ಎಚ್ಚರ–ಜಾಗೃತಿ
ಎಡಬಿಡಂಗಿ–ಗೊಂದಲದಲ್ಲಿರುವ ವ್ಯಕ್ತಿ
ಎಳಸು–ಮಾಗದೆ ಇರುವ

## ಒ–ಓ

ಒರೆ–ಉಜ್ಜು, ತಿಕ್ಕು, ಪರೀಕ್ಷಿಸು
ಒಲವು–ಇಷ್ಟವಾದ
ಓಟ–ಓಡು

## ಕ

ಕಂಗು–ಅಡಿಕೆ
ಕಂಚು–ಲೋಹ
ಕಂಬಳಿಗೊಡ್ಡೆ–ಮಳೆಯಿಂದ ರಕ್ಷಿಸಿಕೊಳ್ಳಲು ಕಂಬಳಿಯಿಂದ ಮಾಡಿದ ಮುಸುಕು, ಗೊರಬು
ಕೊಂಡ್ ಹೋಗು–ತೆಗೆದುಕೊಂಡು ಹೋಗು
ಕೊಂಪೆ–ಕಸದ ಗುಡ್ಡೆ
ಕಠಿಣ–ಕಷ್ಟ
ಕಡುದರ್ಪ–ವಿಪರೀತ ಗರ್ವ
ಕಡೆಗೀಲು–ಗಾಡಿಯ ಗಾಲಿ ಕಳಚದಂತೆ ಅಚ್ಚಿನ ಕಡೆ ಹಾಕುವ ಮೊಳೆ, ಕಡಾಣಿ
ಕಣಿ–ತಗ್ಗು
ಕರ್ತವ್ಯ–ಮಾಡಲೇ ಬೇಕಾದ ಕೆಲಸ
ಕಥನ–ಕತೆ

ಕದ–ಬಾಗಿಲು
ಕರವಿಡಿದು–ಕೈಹಿಡಿದು
ಕಲಿ–ಕಲಿತುಕೊ, ಶೂರ
ಕಲೆಗಾರ–ಕಲಾವಿದ
ಕಳವೆ–ಬತ್ತ
ಕಳುವು–ಅಪಹರಿಸು, ಕಳ್ಳತನ
ಕಾಡು–ಪೀಡಿಸು, ಅರಣ್ಯ
ಕಾಪಾಡು–ರಕ್ಷಿಸು
ಕಾಲ–ವೇಳೆ, ಸಮಯ
ಕಾಲ್ತೆಗೆ–ಓಡಿಹೋಗು
ಕಾಳಗ–ಯುದ್ಧ, ಹೋರಾಟ
ಕಿಕ್ಕಿರಿ–ಉತ್ಸಾಹದಿಂದ ಸೇರಿರುವ ಜನಸಂದಣಿ
ಕಿತ್ತಿ ಬರುತಾರ–ಕಿತ್ತು ಬರುತ್ತಾರೆ
ಕಿಸ್ಕಾರ–ಕೆಂಪುಬಣ್ಣದ ಹೂ ಬಿಡುವ ಗಿಡ
ಕುನ್ನಿ–ನಾಯಿ
ಕೃತಜ್ಞತೆ–ಉಪಕಾರ ಸ್ಮರಣೆ
ಕೃಪೆ–ಆಶೀರ್ವಾದ
ಕೆನ್ನೆ–ಗಲ್ಲ, ಕಪಾಳ
ಕ್ರೋಧ–ಸಿಟ್ಟು
ಕ್ಷಣಿಕ–ಅಲ್ಪಕಾಲಿಕ
ಕ್ಲೇಶ–ಕಷ್ಟ

## ಗ

ಗಮ್ಮತ್ತು–ಮಜಾ
ಗಳಿಸು–ಸಂಪಾದಿಸು
ಗಾಬರಿ–ಭಯ
ಗಿಣಿ–ಗಿಳಿ
ಗಿಳಿಸೂವೆ–ಮನೆಯಲ್ಲಿ ಬೆಳಕು ಬರಲು ಮಾಡಿರುವ ಕಿಂಡಿ
ಗೀರಿನ–ಗೆರೆಯ
ಗುಡ್ಡೆ–ಗುಡ್ಡ
ಗೋಣಿ–ಚೀಲ, ಸೆಣಬಿನ ಚೀಲ
ಗೊತ್ತಿಲ್ಲ–ತಿಳಿದಿಲ್ಲ

## ಚ

ಚಂದ–ಚೆನ್ನಾಗಿ
ಚಡಪಡಿಕೆ–ಕಳವಳಗೊಳ್ಳುವಿಕೆ
ಚಪ್ಪರ–ಹಂದರ
ಚಾಟಿ–ಹೊಡೆಯುವ ಕೋಲು
ಚಾರ್ವಾಕ–ಒಂದು ಪಂಥ
ಚಿಂತನ–ಆಲೋಚನೆ
ಚಿಕ್ಕ–ಸಣ್ಣ
ಚಿಗುರು–ಲವಲವಿಕೆಯಿಂದಿರುವ
ಚಿತಾಭಸ್ಮ–ಚಿತೆಯ ಬೂದಿ
ಚೀಲ–ಕೈಚೀಲ
ಚೊಕ್ಕ–ಚೆನ್ನಾಗಿ, ಅಚ್ಚುಕಟ್ಟಾಗಿ
ಚೌಕುಳಿ–ಬಟ್ಟೆಯ ಮೇಲೆ ಇರುವ ಚಚ್ಚೌಕವಾದ ಚಿತ್ರ

## ಜ

ಜಗಲಿ–ಕಟ್ಟೆ
ಜರ್ಝರಿತ–ಚೂರುಚೂರಾದ
ಜಾನಪದ–ಜನಪದಕ್ಕೆ ಸಂಬಂಧಿಸಿದ
ಜಾವ–ದಿವಸದ ಎಂಟನೆಯ ಒಂದು ಭಾಗ,ಮೂರು ಗಂಟೆಯ ಕಾಲ

## ಟ

ಟೀಚರ್–ಶಿಕ್ಷಕ
ಟೊಪ್ಪಿಗೆ–ಟೋಪಿ

## ತ

ತನ್ನಪಾಡು–ತನ್ನಷ್ಟಕ್ಕೆ
ತಮಾಷೆ–ಹಾಸ್ಯ
ತಲ್ಲೀನ–ಮಗ್ನ, ಏಕಾಗ್ರತೆ

ತವರು–ತಾಯಿಯ ಮನೆ
ತಳಹದಿ–ಬುನಾದಿ
ತಾಜಾ–ಹೊಚ್ಚಹೊಸದಾದ
ತಿರಿ–ತಿರುಗಾಡು, ಭಿಕ್ಷೆ ಬೇಡು
ತೀವ್ರ–ಹೆಚ್ಚು
ತುಕಡಿ–ಸೈನ್ಯ
ತುಡಿತ–ಸ್ಪಂದನ, ಮಿಡಿತ
ತುರುಕು–ಸಿಕ್ಕಿಸು, ಹಾಕು
ತೃಪ್ತಿ–ಸಂತುಷ್ಟಿ, ಸಮಾಧಾನ
ತೆನೆ–ಧಾನ್ಯದ ಕಾಳು ತುಂಬಿದ ಪೈರಿನ ತುದಿ
ತೆರವು–ಖಾಲಿ
ತೊಡೆ–ಒರಸು, ಶುದ್ಧಿಮಾಡು
ತೋಡು–ಹಳ್ಳ

## ದ–ಧ

ದನಿ–ಧ್ವನಿ
ದರ್ಪಿಷ್ಟ– ಅಹಂಕಾರಿ
ದಯ–ಕರುಣೆ
ದಾಕ್ಷಿಣ್ಯ–ಸಂಕೋಚ,
ದಿಟ–ಸತ್ಯ
ದಿಟ್ಟತನ–ಧೈರ್ಯ,
ದಿವ್ಯ–ಉತ್ತಮವಾದ, ಶ್ರೇಷ್ಠವಾದ
ದೀಕ್ಷೆ–ವ್ರತ
ದೇವರೊಟ್ಟಿಗೆ–ದೇವರ ಜೊತೆಯಲ್ಲಿ
ದೈವ–ದೇವರು
ಧಕ್ಕೆ–ತೊಂದರೆ
ಧನಿಕ–ಶ್ರೀಮಂತ
ಧನ್ಯವಾದ–ಕೃತಜ್ಞತೆ ಸಲ್ಲಿಸು
ಧ್ಯೇಯ–ಉದ್ದೇಶ, ಗುರಿ
ಧ್ರುವತಾರೆ–ಧ್ರುವನಕ್ಷತ್ರ

## ನ

ನಾಟಿ–ಸಸಿಗಳನ್ನು ನೆಡುವ ಕೆಲಸ
ನಾನಾ–ವಿವಿಧ, ಬೇರೆ ಬೇರೆ
ನಾಮ–ಹೆಸರು
ನಿಟ್ಟುಸಿರು–ದೀರ್ಘ ಉಸಿರು
ನಿಧಾನ–ಸಾವಕಾಶ
ನೀಟು–ಸೀದಾ
ನೀಸು–ನಿಭಾಯಿಸು
ನುಡಿಗಡಣ–ಮಾತಿನ ಸಮೂಹ, ವಚನ
ನೆನಪು–ಸ್ಮರಣೆ, ಜ್ಞಾಪಕ
ನೀರಾವು–ನೀರಿನಲ್ಲಿ ಬದುಕುವ ಹಾವು
ನಿರ್ಜನ–ಜನರಿಲ್ಲದ
ನಿರ್ಭೀತ–ಹೆದರಿಕೆ ಇಲ್ಲದ
ನಿರ್ಮಲ–ಪರಿಶುದ್ಧ
ನಿರ್ಮುಕ್ತ–ಬಂಧನವನ್ನು ಕಳಚದ

## ಪ

ಪಂಜರ–ಬಂಧನದ ಬೇಲಿ
ಪಕ್ಕಾಗು–ಒಳಗಾಗು
ಪಡಪೋಶಿ–ಕೆಲಸಕ್ಕೆ ಬಾರದ, ನಿಷ್ಪ್ರಯೋಜಕ
ಪಣ– ಹಣ, ಜೂಜಿಗೆ ಒಡ್ಡಿದ ವಸ್ತು.
ಪಾಯ–ಬುನಾದಿ
ಪಾರ್ಕ–ಉದ್ಯಾನ
ಪುಟನೆಗೆ–ಹಾರು
ಪುಟ್ಟ–ಚಿಕ್ಕ
ಪೊಟ್ಟಣ–ಕಟ್ಟು,ಗಂಟು
ಪ್ರತಿಭೆ–ವಿಶೇಷ ಜಾಣ್ಮೆ

## ಬ–ಭ

ಬಣ್ಣ–ವರ್ಣ
ಬಲಿ–ಆಹುತಿ

ಬಲ್ಲೆ–ಗೊತ್ತಿರುವ
ಬರುಸಟೆಗ–ಸುಳ್ಳುಹೇಳುವ
ಬಳಲಿಕೆ–ಆಯಾಸ, ಸುಸ್ತಾಗು
ಬಾಚಿ–ಎಳೆದುಕೊ, ತಬ್ಬು
ಬಾಳು–ಬದುಕು
ಬಾಳೆ–ಬಾಳೆಯ ಗಿಡ
ಬೆಳೆ–ಫಸಲು,
ಬೊಡ್ಡೆ–ಬುಡ, ಮರದ ದಿಂಡು
ಬೋಧಕ–ಉಪನ್ಯಾಸಕ, ಅಧ್ಯಾಪಕ
ಭಜನೆ–ದೇವರ ಸ್ತುತಿ, ಹಾಡು
ಭರವಸೆ–ಆಶ್ವಾಸನೆ, ಅಭಯ
ಭಾಷೆ–ಮಾತು
ಭಿಕ್ಷೆ–ತಿರುಪೆ
ಭೀತಿ–ಅಂಜಿಕೆ
ಭೂಮಿ–ಧರೆ, ಇಳೆ
ಭೋಗ–ಅನುಭವಿಸು

## ಮ

ಮಂತ್ರಮುಗ್ಧ–ಪರವಶನಾದ
ಮಟ್ಟಸ–ಏರುತಗ್ಗಿಲ್ಲದ
ಮಡು–ಕೊಳ್ಳ
ಮರಿ–ಮರೆವು
ಮರಣ ಬಂದರನ–ಸಾವು ಬಂದರೂ
ಮರ್ಜಿ–ಇಷ್ಟ
ಮಸ್ತಕ–ತಲೆ
ಮಾನೀಶ–ಮನುಷ್ಯ
ಮಿಂಚಾಡು–ಹೊಳೆಯುವ
ಮಿಕ್ಕು–ಉಳಿಕೆ
ಮೀರು–ಉಲ್ಲಂಘಿಸು
ಮುಗುಳ್ನಗು–ನಸುನಗು,ಮಂದಹಾಸ
ಮುಟ್ಟ–ಹಿಡಿ, ತಲುಪು
ಮುತ್ತೈದೆ– ಮದುವೆಯಾದ ಹೆಣ್ಣುಮಗಳು
ಮುರಕಲ್ಲು–ಕಲ್ಲಿನಂಥ ಇಟ್ಟಿಗೆ, ಜಂಬಿಟ್ಟಿಗೆ
ಮೃಡ–ಶಿವ
ಮೃದು–ನಯ
ಮೇಟಿ–ಕಂಬ
ಮೇಧಾಶಕ್ತಿ–ಬುದ್ಧಿಶಕ್ತಿ
ಮೇಲ್ಮೊಗ–ಮೇಲುಮುಖ ಮಾಡುವುದು
ಮೋಕ್ಷ–ಮುಕ್ತಿ
ಮೌನ–ಮಾತನಾಡದಿರುವಿಕೆ

## ಯ

ಯಾತನೆ–ನೋವು, ಸಂಕಟ
ಯೋಧ–ಸೈನಿಕ

## ರ

ರಾಗ–ಪ್ರೀತಿ
ರಾಷ್ಟ್ರಭಕ್ತ–ದೇಶಪ್ರೇಮಿ

## ಲ

ಲಪ್ಪಟೆ–ತಲೆಗೆ ಸುತ್ತಿಕೊಳ್ಳುವ ಬಟ್ಟೆ
ಲವಲವಿಕೆ–ಸಂತಸ, ಹುರುಪು
ಲೋಕಕಲ್ಯಾಣ–ಲೋಕದ ಜನರ ಒಳಿತು

## ವ

ವಂದಿಸು–ನಮಿಸು, ನಮಸ್ಕರಿಸು
ವಳಚ್ಚಿಲ್–ಗದ್ದೆಬಯಲು
ವಣಿಕ–ವ್ಯಾಪಾರಿ
ವರ್ಣ–ಬಣ್ಣ
ವಾಹಿನಿ–ನದಿ
ವೀಕ್ಷಣೆ–ನೋಟ, ಪರಿಶೀಲನೆ
ವೇದಾಂತ–ವೇದದ ಕಡೆಯ ಭಾಗ, ತತ್ವಗಳು
ವೈಶಾಲ್ಯ–ವಿಶಾಲವಾದ

## ಶ

ಶುಶ್ರೂಷೆ–ಉಪಚಾರ, ಸೇವೆ

ಶೋಧ–ಹುಡುಕು

ಶ್ರಮಿಕ–ದುಡಿಯುವ ಜೀವಿ

## ಸ

ಸಂಕಲ್ಪ–ದೃಢ ನಿಶ್ಚಯ

ಸಂಭ್ರಮ–ಸಂತಸ

ಸಂಚಿ – ಚೀಲ

ಸಂವಾದಿಸು–ಮಾತನಾಡು

ಸಫಲತೆ–ಫಲಕೊಡುವ

ಸತ್ಯ–ನಿಜ

ಸಫಲತೆ–ಫಲಕೊಡುವ

ಸರಿಸಾಟಿ–ಸರಿಸಮ

ಸಹಪಾಠಿ–ಜೊತೆಯಲ್ಲಿ ಕಲಿಯುವವರು

ಸ್ಪರ್ಶ–ಮುಟ್ಟು

ಸಾರಂಗ–ಮೈಮೇಲೆ ಚುಕ್ಕೆ ಇರುವ ಜಿಂಕೆ

ಸಾಂತ್ವನ–ಸಮಾಧಾನ

ಸಾರಥಿ–ರಥವನ್ನು ನಡೆಸುವ ಚಾಲಕ

ಸ್ವಾರಸ್ಯ–ಮುದಕೊಡುವ

ಸಿದ್ಧ –ತಯಾರಿ

ಸೀಬೆ–ಪೇರಳೆ, ಪೇರಲಹಣ್ಣು

ಸುಂಕ–ತೆರಿಗೆ

ಸುಖ–ಕಷ್ಟರಹಿತ ಬದುಕು

ಸುವರ್ಣ–ಚಿನ್ನ

ಸುವಿಚಾರ–ಒಳ್ಳೆಯ ವಿಚಾರ

ಸ್ನೇಹಿತ–ಗೆಳೆಯ

ಸೊಗಸು–ಸವಿಯಾದ

ಸೊಪ್ಪು– ತರಕಾರಿ

ಸ್ಫೂರ್ತಿ–ಪ್ರೇರಣೆ

## ಹ

ಹಗಲು–ಬೆಳಗ್ಗೆ, ಮುಂಜಾವು

ಹಟ್ಟಿ–ಮನೆ, ಗುಡಿಸಿಲು

ಹಡೆದವ್ವ–ತಾಯಿ, ಅವ್ವ

ಹರವು–ವಿಸ್ತಾರ

ಹಸಿ–ಒದ್ದೆಯಾದ, ಹಸಿವು

ಹಾಡಿ–ಹಳ್ಳಿ, ಗ್ರಾಮ

ಹಾರೈಸು–ಆಶಿಸು

ಹುಡುಕು–ಶೋಧಿಸು

ಹುತಾತ್ಮ–ಧ್ಯೇಯ ಸಾಧನೆಗೆ ತನ್ನ ಪ್ರಾಣ ಅರ್ಪಿಸಿದವ

ಹೊತ್ತು–ಸಮಯ

ಹೊಡೆ – ಕಾಳು ತುಂಬುವ ಮುನ್ನ ಕಾಣುವ ಪೈರಿನ ತುದಿ

ಹೊರಗೆಡೆ–ಬೋರಲಾಗಿ ಬೀಳು, ಮುಗುಚಿ ಬೀಳು

ಹೋತು–ಹೋಯಿತು

ಹೋಳು–ತುಂಡು

## ಪ್ರೇರಣಾ ಪಾಠ

# ಪರಿವರ್ತನೆ

–ಸ್ವಾಮಿ ಪುರುಷೋತ್ತಮಾನಂದ

**ಪ್ರವೇಶ :** 'ರಾಕ್‌ಫೆಲ್ಲರ್ ಇನ್‌ಸ್ಟಿಟ್ಯೂಟ್' ಅಮೆರಿಕದ ಅತ್ಯಂತ ಹೆಸರಾಂತ ವೈದ್ಯಕೀಯ ಸಂಶೋಧನಾ ಸಂಸ್ಥೆ. ಈ ಸಂಸ್ಥೆಯನ್ನು ಸ್ಥಾಪಿಸಿದವರು ಜಾನ್ ಡಿ. ರಾಕ್‌ಫೆಲ್ಲರ್ ಎಂಬ ಅಮೆರಿಕನ್ ಕೋಟ್ಯಧೀಶ. ಇದನ್ನು ಸ್ಥಾಪಿಸಲು ಅವರಿಗೆ ದೊರಕಿದ ಪ್ರೇರಣೆ – ಅದೊಂದು ಸ್ವಾರಸ್ಯದ ಕಥೆ. ರಾಕ್‌ಫೆಲ್ಲರ್ ವಿವೇಕದೆಡೆಗೆ ಸಾಗುವ ಪರಿವರ್ತನೆಯು ಇಲ್ಲಿ ಕಂಡುಬರುತ್ತದೆ.

ಸ್ವಾಮಿ ವಿವೇಕಾನಂದರು ಅಮೆರಿಕದಲ್ಲಿದ್ದ ಸಮಯ. ಒಮ್ಮೆ ಅವರು ಅಲ್ಲಿನ ಗಣ್ಯವ್ಯಕ್ತಿಯ ಮನೆಯಲ್ಲಿ ಉಳಿದುಕೊಂಡಿದ್ದರು. ಆ ವ್ಯಕ್ತಿ ಜಾನ್ ಡಿ. ರಾಕ್‌ಫೆಲ್ಲರ್‌ನ ಆಪ್ತ ಸ್ನೇಹಿತ. ರಾಕ್‌ಫೆಲ್ಲರ್ ಅಮೆರಿಕದ ಅತ್ಯಂತ ಧನಿಕರಲ್ಲಿ ಅಗ್ರಗಣ್ಯ. ಪೆಟ್ರೋಲಿಯಂ ಉತ್ಪಾದನೆಯಿಂದ ಅವರ ಸಂಪಾದನೆ. ಈ ಮೂಲಕ ಅವರು ಆಗ ಸಂಪಾದಿಸಿದ ಹಣ ೧೫೦ ಕೋಟಿ ಡಾಲರುಗಳಿಗಿಂತಲೂ ಅಧಿಕ.



ಅವರಿಗೆ ಸ್ನೇಹಿತರು ಸ್ವಾಮೀಜಿಯವರ ಬಗ್ಗೆ ಹಲವು ಸಲ ಹೇಳಿದ್ದರು. "ನೋಡು, ಸ್ವಾಮಿ ವಿವೇಕಾನಂದರೆಂಬ ಅಸಾಧಾರಣ ಸನ್ಯಾಸಿಯೊಬ್ಬರು ಭಾರತದಿಂದ ಬಂದಿದ್ದಾರೆ. ಅವರ ವ್ಯಕ್ತಿತ್ವ ಬಹಳ ಆಕರ್ಷಕ. ಅವರ ಮೇಧಾಶಕ್ತಿಗಂತೂ ಯಾರೂ ಸರಿಸಾಟಿಗಳಿಲ್ಲ. ಹಲವು ಅಮೆರಿಕನ್ನರು ಈಗಾಗಲೇ ಅವರ ಅನುಯಾಯಿಗಳಾಗಿದ್ದಾರೆ. ಅವರ ಭಾಷಣ ಕೇಳುವುದಕ್ಕೆ ಜನ ಕಿಕ್ಕಿರಿಯುತ್ತಾರೆ. ನೀನು ಅವಶ್ಯವಾಗಿ ಅವರನ್ನೊಮ್ಮೆ ನೋಡಬೇಕು".

ಸ್ನೇಹಿತರು ಎಷ್ಟೇ ಹೇಳಿದರೂ ರಾಕ್‌ಫೆಲ್ಲರ್ ಮಾತ್ರ ಒಂದಲ್ಲ ಒಂದು ನೆಪವೊಡ್ಡಿ ತಪ್ಪಿಸಿಕೊಳ್ಳುತ್ತಿದ್ದ. ಸ್ವಭಾವತಃ ಅವನೊಬ್ಬ ಹಟಮಾರಿ. ಯಾರ ಮಾತನ್ನೂ ಕೇಳುವವನಲ್ಲ. ಆದರೂ ಅವನ ಸ್ನೇಹಿತರು "ವಿವೇಕಾನಂದರನ್ನೊಮ್ಮೆ ನೀನು ನೋಡಬೇಕು" ಎಂದು ಪದೇ ಪದೇ ಒತ್ತಾಯಿಸಿದರು. ಒಂದು ದಿನ ರಾಕ್‌ಫೆಲ್ಲರ್ ಅವರಿಗೆ ಸ್ವಾಮೀಜಿಯವರನ್ನೊಮ್ಮೆ ನೋಡಿಯೇ ಬಿಡಬೇಕು ಎಂಬ ಮನಸ್ಸಾಯಿತು. ಆದರೂ ಸ್ವಾಭಿಮಾನ ತಡೆಯುತ್ತಲೇ ಇತ್ತು.

ಅವರು ನೇರವಾಗಿ ಸ್ವಾಮೀಜಿಯವರು ಬಿಡಾರ ಹೂಡಿದ್ದ ತನ್ನ ಸ್ನೇಹಿತನ ಮನೆಗೆ ಬಂದರು. ಮನೆಯ ಸೇವಕ ಬಾಗಿಲು ತೆರೆದ. ರಾಕ್‌ಫೆಲ್ಲರ್ ದರ್ಪದಿಂದ ಆ ಸೇವಕನನ್ನು ಪಕ್ಕಕ್ಕೆ ತಳ್ಳಿ, "ನಾನು ಆ ಸನ್ಯಾಸಿಯನ್ನು ನೋಡಬೇಕು" ಎಂದರು. ಸ್ವಾಮೀಜಿಯವರು ವಾಸವಾಗಿದ್ದ ಕೋಣೆಗೆ ಸೇವಕ ಕರೆದುಕೊಂಡು ಹೋದ. ರಾಕ್‌ಫೆಲ್ಲರ್ ಸ್ವಾಮೀಜಿಯವರ ಅನುಮತಿ ತೆಗೆದುಕೊಂಡು ಒಳಗೆ ಹೋಗಬೇಕಾದ್ದು ಸಭ್ಯತೆಯಲ್ಲವೇ? ಆದರೆ ಅವರು ಈ ಕ್ರಮವನ್ನು ಪಾಲಿಸದೆ ಕೋಣೆಯೊಳಕ್ಕೆ ನುಗ್ಗಿದರು.

ಆ ವೇಳೆಗೆ ಬರೆಯುವುದರಲ್ಲಿ ತಲ್ಲೀನರಾದ ಸ್ವಾಮೀಜಿಯವರು ಕೋಣೆಯೊಳಕ್ಕೆ ಬಂದವರು ಯಾರೆನ್ನುವುದನ್ನು ತಲೆಯೆತ್ತಿಯೂ ನೋಡಲಿಲ್ಲ. ಆದರೆ ದರ್ಪಿಷ್ಠನಾದ ರಾಕ್‌ಫೆಲ್ಲರ್‌ಗೆ ಮಾತ್ರ ಅವಮಾನವೆನ್ನಿಸಿತು. ಹೇಳದೆ ಕೇಳದೆ ನುಗ್ಗಿದ್ದು ತನ್ನದೇ ತಪ್ಪಾದ್ದರಿಂದ ಸುಮ್ಮನೇ ನಿಂತಿದ್ದರು.

ಸ್ವಲ್ಪ ಹೊತ್ತಾಯಿತು. ಸ್ವಾಮೀಜಿ ಬರೆಯುವುದನ್ನು ನಿಲ್ಲಿಸಿ ತಲೆಯೆತ್ತಿ ನೋಡಿ ಅತಿಥಿಯನ್ನು ಮಾತನಾಡಿಸಿದರು. ರಾಕ್‌ಫೆಲ್ಲರ್ ಕೋಟ್ಯಧೀಶ್ವರ ಎನ್ನುವುದು ಸ್ವಾಮೀಜಿಯವರಿಗೆ ಗೊತ್ತು. ಮಹಾದರ್ಪಿಷ್ಠ ಎನ್ನುವುದೂ ಅವರಿಗೆ ಗೊತ್ತು.

ಆದರೂ ಅವರು ಹೇಳಿದರು – "ನೋಡಿ, ನೀವು ಈಗ ಕೂಡಿಹಾಕಿರುವ ಹಣ ನಿಮ್ಮ ಸ್ವಂತದ್ದಲ್ಲ. ಅದು ಇಡೀ ಜಗತ್ತಿಗೆ ಸೇರಿದ್ದು. ನಿಮ್ಮ ಕರ್ತವ್ಯವೇನಿದ್ದರೂ ಅದರ ಮೂಲಕ ಜಗತ್ತಿಗೆ ಒಳಿತನ್ನು ಮಾಡುವುದು. ಆ ಹಣಕ್ಕೆ ನೀವೊಬ್ಬ ಮೇಲ್ವಿಚಾರಕರು ಅಷ್ಟೆ. ಭಗವಂತ ನಿಮಗೆ ಈ ಭಾಗ್ಯವನ್ನೆಲ್ಲ ಕೊಟ್ಟಿರುವುದೇಕೆಂದರೆ ಬಡವರಿಗೆ ನೆರವಾಗಲು ನಿಮಗೊಂದು ಅವಕಾಶವಾಗಲಿ ಎಂದು ಮಾತ್ರ. ಆದ್ದರಿಂದ ನಿಮ್ಮ ಹಣವೆಲ್ಲ ಸದ್ವಿನಿಯೋಗವಾಗಲೇಬೇಕು."

ಈ ಅಪರಿಚಿತ ಸನ್ಯಾಸಿ ನನ್ನಂಥವನಿಗೆ ಉಪದೇಶ ಮಾಡುತ್ತಿದ್ದಾನಲ್ಲ; ನಾನು ಏನು ಮಾಡಬೇಕೆಂದು ಇವನು ಹೇಳಿಕೊಡಬೇಕೆ ಎಂದು ರಾಕ್‌ಫೆಲ್ಲರ್‌ಗೆ ಸಿಟ್ಟುಬಂತು. ಕೂಡಲೇ ಕೋಣೆಯಿಂದ ಹೊರಟುಹೋದರು.



ಸುಮಾರು ಒಂದು ವಾರ ಕಳೆಯಿತು. ಒಂದು ದಿನ ರಾಕ್‌ಫೆಲ್ಲರ್ ಹಿಂದಿನಂತೆಯೇ ಆತುರಾತುರವಾಗಿ ಸ್ವಾಮೀಜಿಯವರ ಕೋಣೆಗೆ ನುಗ್ಗಿದರು. ಅಂದು ಸ್ವಾಮೀಜಿ ಬರೆಯುತ್ತ ಕುಳಿತ್ತಿದ್ದರು. ರಾಕ್‌ಫೆಲ್ಲರ್ ಒಳಗೆ ಬಂದವನೇ ಕಾಗದವೊಂದನ್ನು ಮೇಜಿನ ಮೇಲೆ ಬಿಸಾಡಿ, "ಇಗೋ ಇಲ್ಲಿದೆ ನೋಡಿಕೊಳ್ಳಿ" ಎಂದರು. ಸಾರ್ವಜನಿಕ ಸಂಸ್ಥೆಯೊಂದಕ್ಕೆ ಬಹುದೊಡ್ಡ ಮೊತ್ತವೊಂದನ್ನು ಅದರಲ್ಲಿ ದಾನ ನೀಡಿದ ಬಗ್ಗೆ ಬರೆದಿತ್ತು.

"ಈಗ ನಿಮಗೆ ತೃಪ್ತಿಯಾಗಿರಬೇಕು. ಇದಕ್ಕಾಗಿ ನೀವು ನನಗೆ ಕೃತಜ್ಞತೆ ಸಲ್ಲಿಸಬೇಕು" ಎಂದರು ರಾಕ್‌ಫೆಲ್ಲರ್. ಸ್ವಾಮೀಜಿ ರಾಕ್‌ಫೆಲ್ಲರ್‌ರನ್ನು ನೋಡದೆ ಮೌನವಾಗಿ ಆ ಕಾಗದವನ್ನು ಓದಿದರು.

"ಕೃತಜ್ಞತೆ ಸಲ್ಲಿಸಬೇಕಾದುದು ನಾನಲ್ಲ, ನೀವು" ಸ್ವಾಮೀಜಿ ಉತ್ತರಿಸಿದರು. ರಾಕ್‌ಫೆಲ್ಲರ್ ತಟಸ್ಥರಾದರು. ಆದರೂ ಸುಮ್ಮನಾಗಲಿಲ್ಲ.

"ನೀವು ನನಗೆ ಕೃತಜ್ಞತೆ ಸಲ್ಲಿಸಲೇಬೇಕು" ಎಂದರು.

"ಕೃತಜ್ಞತೆ ಸಲ್ಲಿಸಬೇಕಾದವನು ನಾನಲ್ಲ. ನೀವು. ಕೊಟ್ಟದ್ದನ್ನು ತೆಗೆದುಕೊಳ್ಳಲು ಕೈನೀಡುವವರಿಲ್ಲದಿದ್ದರೆ ಕೊಡುವುದಾದರೂ ಯಾರಿಗೆ? ಸೇವೆಯನ್ನು ಸ್ವೀಕರಿಸುವವರಿಲ್ಲದಿದ್ದರೆ ಸೇವಾಕರ್ತರು ಸೇವೆ ಮಾಡುವುದಾದರೂ ಯಾರಿಗೆ? ಆದ್ದರಿಂದ ದಾನ ಪಡೆದ ದೀನನಿಗೆ ದಾನಿಯೇ ಕೈ ಮುಗಿದು ಕೃತಜ್ಞನಾಗಿರಬೇಕು" ಸ್ವಾಮೀಜಿ ಉಪದೇಶ ನೀಡಿದರು.

ಕೂಡಿ ಹಾಕುವುದೇ ಜೀವನದ ಧ್ಯೇಯವಾಗಿದ್ದ ರಾಕ್‌ಫೆಲ್ಲರ್ ಸ್ವಾಮೀಜಿಯವರ ಮಾತು ಕೇಳಿ ಪರಿವರ್ತನೆ ಹೊಂದಿ ಕೊಡುಗೈ ದಾನಿಯಾದರು. ಸ್ವಾಮೀಜಿಯವರಿಗೆ ನೀಡಿದ ಆ ಬಹು ದೊಡ್ಡ ಮೊತ್ತವೇ ಸಾರ್ವಜನಿಕ ಕಲ್ಯಾಣಕ್ಕಾಗಿ ಅವರು ನೀಡಿದ ಮೊದಲ ದೇಣಿಗೆಯಾಯಿತು. ಬಳಿಕ ಸಾರ್ವಜನಿಕ ಉದ್ದೇಶಗಳಿಗಾಗಿ ಅಪಾರ ಹಣವನ್ನು ವಿನಿಯೋಗಿಸಿದರು. ಅನೇಕ ಸೇವಾಸಂಸ್ಥೆಗಳನ್ನು ಸ್ಥಾಪಿಸಿದರು. ವಿಶ್ವವಿದ್ಯಾನಿಲಯಗಳಿಗೆ ಕೋಟ್ಯಂತರ ಡಾಲರುಗಳ ಅನುದಾನ ನೀಡಿದರು. ಈ ದಾನಕಾರ್ಯವನ್ನು ಮುಂದುವರಿಸಿಕೊಂಡು ಹೋಗಲು ಟ್ರಸ್ಟ್‌ಗಳನ್ನು ಸ್ಥಾಪಿಸಿದರು.

## ಸ್ವಾಮಿ ವಿವೇಕಾನಂದ

(೧೮೬೩-೧೯೦೨)



ಭಾರತೀಯ ಸಂಸ್ಕೃತಿಯ ಪುನರುತ್ಥಾನದ ಹರಿಕಾರ, ವಾಗ್ಮಿ, ಶ್ರೇಷ್ಠ ಸನ್ಯಾಸಿ. ಇವರ ಪೂರ್ವಾಶ್ರಮದ ಹೆಸರು ನರೇಂದ್ರನಾಥದತ್ತ. ಇವರು ಕೊಲ್ಕೊತ್ತದಲ್ಲಿ ೧೮೬೩ ಜನವರಿ ೧೨ರಂದು ಜನಿಸಿದರು. ತಂದೆ ವಿಶ್ವನಾಥದತ್ತ, ತಾಯಿ ಭುವನೇಶ್ವರೀದೇವಿ, ಕಾಲೇಜಿನ ದಿನಗಳಲ್ಲಿ ಹಿಂದೂ ಧರ್ಮದ ಸುಧಾರಣೆಗೆ ಸ್ಥಾಪಿತವಾಗಿದ್ದ ಬ್ರಹ್ಮಸಮಾಜ ಸೇರಿ ಗಾನಗೋಷ್ಠಿಯ ಮುಂದಾಳುವಾಗಿದ್ದರು. ತರಗತಿಯಲ್ಲಿ ವರ್ಡ್ಸ್‌ವರ್ಥ್ ಕವಿಯ ಅನುಭಾವ ಗೀತೆಗಳನ್ನು ಹೆಚ್ಚು ಚೆನ್ನಾಗಿ ಗ್ರಹಿಸಬೇಕಾದರೆ ದಕ್ಷಿಣೇಶ್ವರದ ರಾಮಕೃಷ್ಣರನ್ನು ನೋಡಿ ಬರಬೇಕೆಂದು ಇವರ ಗುರು ಹೇಸ್ಟಿಯವರು ಸೂಚನೆ ಕೊಟ್ಟ ದಿನದಿಂದ ರಾಮಕೃಷ್ಣರ ಭೇಟಿಗೆ ಕಾತುರರಾಗಿದ್ದರು.



ಒಮ್ಮೆ ಕೋಲ್ಕೊತ್ತದ ಸುರೇಂದ್ರನಾಥರ ಮನೆಯಲ್ಲಿ ಭಜನೆಯಲ್ಲಿ ಭಾಗವಹಿಸಲು ಇವರು ಹೋಗಿದ್ದಾಗ ಅಲ್ಲಿಗೆ ಅತಿಥಿಯಾಗಿ ಬಂದಿದ್ದ ರಾಮಕೃಷ್ಣ ಪರಮಹಂಸರ ಭೇಟಿ ಇವರಿಗಾಯಿತು. ಇವರ ಹಾಡನ್ನು ಕೇಳಿ ಆನಂದಿಸಿದ ರಾಮಕೃಷ್ಣರು ಇವರ ಪೂರ್ವಾಪರಗಳನ್ನು ವಿವರವಾಗಿ ತಿಳಿದುಕೊಂಡು ದಕ್ಷಿಣೇಶ್ವರಕ್ಕೆ ಇವರಿಗೆ ಆಹ್ವಾನವಿತ್ತರು. ರಾಮಕೃಷ್ಣರ ಭಕ್ತರೂ ಬಂಧುವೂ ಆದ ರಾಮಚಂದ್ರದತ್ತರೊಂದಿಗೆ ರಾಮಕೃಷ್ಣರಿರುವಲ್ಲಿಗೆ ನಡೆದೇಬಿಟ್ಟರು. ಎಲ್ಲವನ್ನೂ ಪ್ರಶ್ನಿಸುವ ಮನೋಧರ್ಮದ ಇವರು ದೇವರ ಅಸ್ತಿತ್ವವೇ ಮೊದಲಾದ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಪ್ರಶ್ನಿಸಿದಾಗ ರಾಮಕೃಷ್ಣರ ಸರಳತೆ, ತನ್ಮಯತೆ ಇವರನ್ನು ಮುಗ್ಧರನ್ನಾಗಿಸಿತು. ಮತ್ತೊಂದು ಬಾರಿ ಕಾಲುನಡಿಗೆಯಿಂದ ರಾಮಕೃಷ್ಣರ ಸಂದರ್ಶನಕ್ಕೆ ಹೋದಾಗ ಅವರ ಸ್ಪರ್ಶಮಾತ್ರದಿಂದ ಆದ ಅಲೌಕಿಕ ಅನುಭವ ಇವರನ್ನು ರಾಮಕೃಷ್ಣರ ಆಪ್ತವರ್ಗಕ್ಕೆ ಸೇರಿಸಿತು. ಇವರೇ ಹೇಳಿಕೊಂಡಿರುವಂತೆ ಆರು ವರ್ಷಗಳ

ಕಾಲ ರಾಮಕೃಷ್ಣರೊಂದಿಗೆ ವಿಚಾರ ಮಥನಗಳನ್ನು ಮಾಡಿದ ಮೇಲೆ ಆಧ್ಯಾತ್ಮಿಕ ಮಾರ್ಗದ ಪ್ರತಿಯೊಂದು ಹೆಜ್ಜೆಯೂ ಇವರಿಗೆ ಸ್ಪಷ್ಟವಾಯಿತು. ವಿದ್ಯಾಭ್ಯಾಸ ಮುಗಿದ ಅನಂತರ ಆಧ್ಯಾತ್ಮ ಸಾಧನೆಯಲ್ಲಿ ಬಲವಾದ ಅಭೀಪ್ಸೆಯಿದ್ದರೂ ತಂದೆಯ ಮರಣ ಕುಟುಂಬಕ್ಕೆ ತಂದ ಸಂಕಷ್ಟಗಳಿಂದ ನೌಕರಿ ಸೇರಬೇಕಾದ ಪರಿಸ್ಥಿತಿಯೊದಗಿತು.

೧೮೮೬ರಲ್ಲಿ ಶ್ರೀ ರಾಮಕೃಷ್ಣರು ನಿಧನರಾದ ಅನಂತರ ಇವರು ಹಾಗೂ ಇವರ ಸಹಪಾಠಿಗಳು ಸನ್ಯಾಸದೀಕ್ಷೆಯನ್ನು ಸ್ವೀಕರಿಸಿ ಗುರುಗಳ ಉಪದೇಶದಂತೆ ಆತ್ಮೋದ್ಧಾರವನ್ನೂ ಲೋಕಕಲ್ಯಾಣವನ್ನೂ ಸಾಧಿಸುವ ಸಂಕಲ್ಪ ಮಾಡಿದರು. ರಾಮಕೃಷ್ಣರ ಚಿತಾಭಸ್ಮಪಾತ್ರೆ ಹಾಗೂ ಗುರುಗಳ ಚಿತ್ರಪಟ ಇಷ್ಟೇ ಆಸ್ತಿಯನ್ನು ಹಿಡಿದು, ಧ್ಯಾನ, ಅಧ್ಯಯನ, ಭಜನೆ, ಭಿಕ್ಷೆ, ಕಠಿಣ ವ್ರತಗಳಲ್ಲಿ ನಿರತರಾಗಿ ತೀರ್ಥಯಾತ್ರೆ, ತಪಸ್ಸುಗಳಲ್ಲಿ ನಿರತರಾದರು. ೧೮೯೦ರಿಂದ ಸುಮಾರು ಎರಡು ವರ್ಷಗಳವರೆಗೆ ಇಡೀ ಭಾರತದೇಶದ ಸಂಚಾರ ಕೈಗೊಂಡು ಅಸಾಧಾರಣ ಪ್ರತಿಭೆ ಮತ್ತು ವ್ಯಕ್ತಿತ್ವಗಳಿಂದ ಪಂಡಿತ ವರ್ಗದವರೊಂದಿಗೆ, ಸಾಮಾನ್ಯರೊಂದಿಗೆ, ಪ್ರತಿಭಾವಂತರೊಂದಿಗೆ ವಿಚಾರ ವಿನಿಮಯ ಮಾಡುತ್ತ ತಮ್ಮ ಪ್ರಭಾವವನ್ನು ಅವರ ಮೇಲೆ ಬೀರುತ್ತಾ ಬದುಕಿದರು. ಇವರಿಗೆ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ಪ್ರಕಾಂಡ ಪಾಂಡಿತ್ಯವಿತ್ತು. ಬೇರೆ ಬೇರೆ ಹೆಸರುಗಳನ್ನು ಹೇಳಿಕೊಂಡು ಓಡಾಡುತ್ತಿದ್ದ ಇವರಿಗೆ ವಿವೇಕಾನಂದ ಎಂಬ ಹೆಸರನ್ನಿಟ್ಟವರು ಹಾಗೂ ಇವರು ಅಮೆರಿಕಕ್ಕೆ ಪ್ರವಾಸ ಕೈಗೊಳ್ಳುವಂತೆ ಪ್ರಚೋದಿಸಿದವರು ಖೇತ್ರಿಮಹಾರಾಜರು. ಇವರ ಪ್ರತಿಭೆ ಮೈಸೂರು ಮಹಾರಾಜರಾಗಿದ್ದ ಚಾಮರಾಜ ಒಡೆಯರನ್ನು ಮಂತ್ರಮುಗ್ಧರನ್ನಾಗಿಸಿ ಇವರ ವಿದೇಶ ಪ್ರವಾಸಕ್ಕೆ ಅವರು ನೆರವು ನೀಡುವಂತಾಯಿತು.



ಶಿಕಾಗೊ ನಗರದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು ಜಪಾನ್ ಮಾರ್ಗವಾಗಿ ಪ್ರಯಾಣ ಕೈಗೊಂಡರು(೧೮೯೩). ಸಮ್ಮೇಳನದಲ್ಲಿ ಸಭೆಯನ್ನುದ್ದೇಶಿಸಿ ಆಡಿದ ಇವರ ಮಾತುಗಳು, ಇವರ ವಿಶಿಷ್ಟವಾದ ಪ್ರತಿಭೆ, ಮೇಧಾಶಕ್ತಿ, ಪ್ರತಿಪಾದನಾ ಕೌಶಲ್ಯಗಳನ್ನು ಜಗತ್ತಿಗೇ ಪರಿಚಯಿಸಿದವು. ಅಲ್ಲಿ ಇವರಿಗೆ ದೊರೆತ ಯಶಸ್ಸು ಭಾರತೀಯರಿಗೆ ಹೆಮ್ಮೆಯ ವಿಷಯವಾಯಿತು. ಭಾರತದ ನವನಿರ್ಮಾಣದಲ್ಲಿ ಅಂದಿನಿಂದ ಇವರೊಬ್ಬ ಯುಗಪುರುಷರಾಗಿ ಪರಿಗಣಿತರಾದರು.

೧೮೯೫ರಲ್ಲಿ ವಿದೇಶದಲ್ಲಿ ವೇದಾಂತ ಪ್ರಚಾರ ಕೈಗೊಂಡ ಸಂದರ್ಭದಲ್ಲಿ ಮಾರ್ಗರೆಟ್ ನೊಬೆಲ್ ಎಂಬ ಆಂಗ್ಲಮಹಿಳೆ ಇವರನ್ನು ಸಂದರ್ಶಿಸಿ, ಶಿಷ್ಯೆಯಾಗಿ ಭಾರತಕ್ಕೆ ಬಂದು ಉತ್ತಮ ಸೇವೆ ಸಲ್ಲಿಸಿ ನಿವೇದಿತಾ ಎಂಬ ಹೆಸರಿನಿಂದ ಪ್ರಸಿದ್ಧಳಾದದ್ದು ಒಂದು ಐತಿಹಾಸಿಕ ದಾಖಲೆಯಾಗಿದೆ. 'ಕೊಲಂಬೋವಿನಿಂದ ಆಲ್ಮೋರವರೆಗೆ' ಎಂಬ ಗ್ರಂಥ ಉತ್ತರ ಭಾರತದ ಅನೇಕ ನಗರಗಳಿಗೆ ಇವರು ಭೇಟಿ ನೀಡಿ ವೇದಾಂತಕ್ಕಿಂತ ಹೆಚ್ಚಾಗಿ ದೇಶಾಭ್ಯುದಯಕ್ಕಾಗಿ ನೀಡಿದ ಸ್ಫೂರ್ತಿಯುತ ಭಾಷಣಗಳನ್ನು ಒಳಗೊಂಡಿದೆ. ೧೮೯೭ ರಿಂದ ಹಲವು ವರ್ಷಗಳು ಅವಿಶ್ರಾಂತವಾಗಿ ದುಡಿದು ದೇಶದ ಹಲವಾರು ಕಡೆಗಳಲ್ಲಿ ಮೋಕ್ಷಕ್ಕೂ ಪ್ರಪಂಚದ ಹಿತಕ್ಕೂ ಶ್ರಮಿಸುವ ಪ್ರಮುಖ ಧ್ಯೇಯವುಳ್ಳ

ರಾಮಕೃಷ್ಣಮಠ ಮತ್ತು ಮಿಷನ್‌ಗಳನ್ನು ವಿಧಿವತ್ತಾಗಿ ಸ್ಥಾಪಿಸಿದರು. ಅವಿಶ್ರಾಂತ ದುಡಿಮೆಯಿಂದ ಜರ್ಝರಿತರಾಗಿದ್ದ ಇವರು ೧೯೦೨ ಜುಲೈ ೪ರಂದು ನಿಧನರಾದರು.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ರಾಕ್ ಫೆಲ್ಲರ್ ಯಾವ ದೇಶಕ್ಕೆ ಸೇರಿದವರು?

೨. ಭಾರತದಿಂದ ಅಮೆರಿಕಾಕ್ಕೆ ಬಂದಿದ್ದ ಸನ್ಯಾಸಿ ಯಾರು?

೩. ರಾಕ್ ಫೆಲ್ಲರನ ಹಣ ಏನಾಗಬೇಕೆಂದು ಸ್ವಾಮೀಜಿ ಹೇಳಿದರು?

೪. ರಾಕ್ ಫೆಲ್ಲರ್ ಸ್ವಾಮೀಜಿಯ ಮಾತು ಕೇಳಿದುದರ ಪರಿಣಾಮವೇನು?

೫. ದಾನಕಾರ್ಯವನ್ನು ಮುಂದುವರಿಸಿಕೊಂಡು ಹೋಗಲು ರಾಕ್ ಫೆಲ್ಲರ್ ಮಾಡಿದುದೇನು?

೬. ಸ್ವಾಮಿ ವಿವೇಕಾನಂದರ ಪೂರ್ವಾಶ್ರಮದ ಹೆಸರೇನು?

೭. ಕೋಲ್ಕೊತ್ತಾದ ಯಾರ ಮನೆಯಲ್ಲಿ ಭಜನೆಯಲ್ಲಿ ಪಾಲ್ಗೊಳ್ಳಲು ನರೇಂದ್ರನಾಥರು ಹೋಗಿದ್ದರು?

೮. ನರೇಂದ್ರನಾಥದತ್ತರಿಗೆ ಸನ್ಯಾಸದೀಕ್ಷೆಯನ್ನು ಕೊಟ್ಟವರು ಯಾರು?

೯. ಮಾರ್ಗರೇಟ್ ನೊಬೆಲ್ ಸ್ವಾಮೀಜಿಯ ಶಿಷ್ಯರಾಗಿ ಭಾರತದಲ್ಲಿ ಯಾವ ಹೆಸರಿನಿಂದ ಪ್ರಸಿದ್ಧಳಾದಳು?



**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯದಲ್ಲಿ ಉತ್ತರಿಸಿರಿ.**

೧. ರಾಕ್ ಫೆಲ್ಲರ್ ಸ್ವಾಮೀಜಿಯ ಕೋಣೆಗೆ ಹೇಗೆ ನುಗ್ಗಿದರು?

೨. ಸ್ವಾಮೀಜಿಯು ರಾಕ್ ಫೆಲ್ಲರನ್ನು ಬದಲಾಯಿಸಿದ ರೀತಿ ಹೇಗೆ?

೩. ಗುರು ಹೇಸ್ಟಿಯವರು ಕೊಟ್ಟ ಸೂಚನೆ ಏನು?

೪. ದಕ್ಷಿಣೇಶ್ವರದಲ್ಲಿ ನರೇಂದ್ರನಾಥರಿಗೆ ಆದ ಅನುಭವವೇನು?

೫. ವಿವೇಕಾನಂದರು ಭಾರತದ ನವನಿರ್ಮಾಣದಲ್ಲಿ ಯುಗಪುರುಷರಾಗಲು ಶಿಕಾಗೋ ಸಮ್ಮೇಳನ ಹೇಗೆ ಕಾರಣವಾಯಿತು?

೬. ಸ್ವಾಮೀಜಿಯವರ ಮಾತುಗಳು ರಾಕ್ ಫೆಲ್ಲರ್‌ನ ಜೀವನವನ್ನು ಪರಿವರ್ತಿಸಿದ ಬಗೆ ಹೇಗೆ?

**ಇ. ಕೆಳಗಿನ ಸಾಲುಗಳಲ್ಲಿ ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

೧. ರಾಕ್ ಫೆಲ್ಲರ್ ಸಂಪಾದಿಸಿದ ಹಣ ______________

೨. ರಾಕ್ ಫೆಲ್ಲರ್ ಸ್ವಭಾವತಃ ______________

## ಪದ್ಯ ಪಾಠ – ೧

# ಹಚ್ಚೇವು ಕನ್ನಡದ ದೀಪ

–ಡಿ.ಎಸ್ ಕರ್ಕಿ

**ಪ್ರವೇಶ :** ಅಮ್ಮ ಮನೆಯಲ್ಲಿ ಬೇಗ ಎದ್ದು ಪ್ರತಿ ದಿನದಂತೆ ರೇಡಿಯೋ ಆನ್ ಮಾಡಿದ್ದಳು. ಕಾರ್ತಿಕ್‌ನನ್ನು ಹಾಸಿಗೆಯಿಂದ ಏಳಿಸಿದಳು. ರೇಡಿಯೋದಲ್ಲಿ 'ಎಲ್ಲಾದರೂ ಇರು, ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು'..... ಹಾಡು ಕೇಳಿ ಬರುತ್ತಿತ್ತು. ಕಿರಣ್ ಈ ಹಾಡನ್ನು ಅತ್ಯಂತ ಆಸಕ್ತಿಯಿಂದ ಕೇಳುತ್ತಿದ್ದ. ಕೊನೆಯಲ್ಲಿ 'ಅಮ್ಮ ಈ ಹಾಡನ್ನು ಬರೆದವರು ಯಾರು?' ಎಂದು ತಾಯಿಯನ್ನು ಪ್ರಶ್ನಿಸಿದ. ತಾಯಿ 'ನಮ್ಮ ರಾಷ್ಟ್ರಕವಿ ಕುವೆಂಪುರವರು ಈ ಹಾಡನ್ನು ಬರೆದಿದ್ದಾರೆ. ಇಂತಹ ಅನೇಕ ಹಾಡುಗಳನ್ನು ಅವರು ಬರೆದಿದ್ದಾರೆ. ಆ ಮೂಲಕ ಕನ್ನಡಿಗರ ನಡೆ ನುಡಿಯನ್ನು ಹಾಡಿ ಹೊಗಳಿದ್ದಾರೆ' ಎಂದರು .

ಕಾರ್ತಿಕ್ 'ಅಮ್ಮಾ ಇಂತಹ ಹಾಡುಗಳನ್ನು ಇನ್ನು ಯಾರ್‍ಯಾರು ಬರೆದಿದ್ದಾರೆ' ಎಂದು ಕೇಳಿದ. 'ಇಂತಹದ್ದೇ ಹಾಡುಗಳನ್ನು ಅನೇಕ ಕವಿವರೇಣ್ಯರು ಬರೆದಿದ್ದಾರೆ. ಅಂತಹವರಲ್ಲಿ ಡಿ.ಎಸ್.ಕರ್ಕಿಯವರೂ ಒಬ್ಬರು. ಅವರು 'ಹಚ್ಚೇವು ಕನ್ನಡದ ದೀಪ' ಎಂದು ಹಾಡಿದ್ದಾರೆ. ಅವರ 'ನಕ್ಷತ್ರಗಾನ' ಎಂಬ ಕವನ ಸಂಕಲನ ಅಪ್ಪನ ಬೀರುವಿನಲ್ಲಿದೆ. ತೆಗೆದುಕೊಂಡು ಓದು' ಎಂದರು. ಕಿರಣ ಅಪ್ಪನ ಹತ್ತಿರ ಆ ಪುಸ್ತಕವನ್ನು ಪಡೆದು ಓದತೊಡಗಿದ. ಆ ಹಾಡು ಹೇಗಿದೆ ಎಂದು ನಾವೂ ನೋಡೋಣ ಬನ್ನಿ.

ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ನಾಡು ಅನೇಕ ಪ್ರಾಂತ್ಯಗಳಲ್ಲಿ ಹರಿದು ಹಂಚಿಹೋಗಿತ್ತು. ಆದರೂ ಕನ್ನಡಿಗರೆಲ್ಲ ಒಂದು ಎಂಬ ಭಾವನೆ ಪ್ರತಿ ಕನ್ನಡಿಗನ ಮನದಲ್ಲೂ ಮನೆ ಮಾಡಿತ್ತು. ಇಂತಹ ಸಂದರ್ಭದಲ್ಲಿ ಸಾಮೂಹಿಕ ಜಾಗೃತಿಯನ್ನು ಉತ್ತೇಜಿಸುವ ವೀರದಾಟಿಯ ಅನೇಕ ಕವನಗಳು ನಮ್ಮ ಕವಿಗಳ ಲೇಖನಿಯಿಂದ ಹೊರಹೊಮ್ಮಿದವು.



ಹಚ್ಚೇವು ಕನ್ನಡದ ದೀಪ
ಕರುನಾಡ ದೀಪ ಸಿರಿನುಡಿಯ ದೀಪ
ಒಲವೆತ್ತಿ ತೋರುವಾ ದೀಪ । ಹಚ್ಚೇವು ।



೧

ಬಹುದಿನಗಳಿಂದ ಮೈಮರೆವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು
ಎಲ್ಲೆಲ್ಲಿ ಕನ್ನಡದ ಕಂಪು ಸೂಸ–
ಲಲ್ಲಲ್ಲಿ ಕರಣ ಚಾಚೇವು
ನಡು ನಾಡೆ ಇರಲಿ, ಗಡಿನಾಡೆ ಇರಲಿ
ಕನ್ನಡದ ಕಳೆಯ ಕೆಚ್ಚೇವು
ಮರೆತೇವು ಮರವ, ತೆರೆದೇವು ಮನವ, ಎರೆದೇವು ಒಲವ– ಹಿಡಿ ನೆನಪ
ನರನರವನೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದ ದೀಪ

೨

ಕಲ್ಪನೆಯ ಕಣ್ಣು ಹರಿವನಕ ಸಾಲು
ದೀಪಗಳ ಬೆಳಕ ಬೀರೇವು
ಹಚ್ಚಿರುವ ದೀಪದಲಿ ತಾಯ ರೂಪ
ಅಚ್ಚಳಿಯದಂತೆ ತೋರೇವು
ಒಡಲೊಡಲ ಕೆಚ್ಚಿನಾ ಕಿಡಿಗಳನ್ನು
ಗಡಿನಾಡಿನಾಚೆ ತೂರೇವು
ಹೊಮ್ಮಿರಲು ಪ್ರೀತಿ ಎಲ್ಲಿಯದು ಭೀತಿ? ನಾಡೊಲವೆ ನೀತಿ ಹಿಡಿ ನೆನಪ
ಮನೆ ಮನೆಗಳಲ್ಲಿ ಮನಮನಗಳಲ್ಲಿ ಹಚ್ಚೇವು ಕನ್ನಡದ ದೀಪ

೩

ನಮ್ಮವರು ಗಳಿಸಿದಾ ಹೆಸರ ಉಳಿಸ-
ಲೆಲ್ಲಾರು ಒಂದುಗೂಡೇವು
ನಮ್ಮೆದೆಯ ಮಿಡಿಯುವೀ ಮಾತಿನಲ್ಲಿ
ಮಾತೆಯನು ಪೂಜೆ ಮಾಡೇವು
ನಮ್ಮುಸಿರು ತೀಡುವೀ ನಾಡಿನಲ್ಲಿ
ಮಾಂಗಲ್ಯಗೀತ ಹಾಡೇವು
ತೊರೆದೇವು ಮರುಳ, ಕಡೆದೇವು ಇರುಳ, ಪಡೆದೇವು ತಿರುಳ- ಹಿಡಿ ನೆನಪ
ಕರುಳೆಂಬ ಕುಡಿಗೆ ಮಿಂಚನ್ನೆ ಮುಡಿಸಿ ಹಚ್ಚೇವು ಕನ್ನಡದ ದೀಪ



**ಕ್ಷೇತ್ರ :** ಬರೆಯುವುದು.

**ಸಾಮರ್ಥ್ಯ :** ಕಥೆಗಳನ್ನು ನಾಟಕಗಳಾಗಿ, ನಾಟಕಗಳನ್ನು ಕಥೆಗಳಾಗಿ ಪರಿವರ್ತಿಸುವ, ಕವಿತೆಗಳಿಗೆ ಸಾರಾಂಶ ಬರೆಯುವ ಸೃಜನಾತ್ಮಕತೆಯನ್ನು ಬೆಳೆಸುವುದು.

**ಆಶಯ :** ವಿವಿಧತೆಯಲ್ಲಿ ಏಕತೆಯನ್ನು ಕಾಣುತ್ತಿರುವ ದೇಶ –ನಾಡು ನಮ್ಮದು. ಜನರು ತೊಡುವ ಉಡುಗೆ–ತೊಡುಗೆಗಳಲ್ಲಿ, ಆಹಾರ–ವಿಹಾರಗಳಲ್ಲಿ, ನಡೆ–ನುಡಿಗಳಲ್ಲಿ ವಿವಿಧತೆಯೊಂದಿಗೆ ನಾವೆಲ್ಲ ಒಂದು ಎಂಬ ಒಗ್ಗಟ್ಟನ್ನು ಪ್ರದರ್ಶಿಸುತ್ತಾ ಬಂದವರು ನಾವು.

ಕನ್ನಡ ನಾಡಿನ ಭಾಷೆ ಕನ್ನಡ. ನಾಡಭಾಷೆಯಾದ ಕನ್ನಡ ಇಂದು ವಿವಿಧ ಕಾರಣಗಳಿಂದ ನಾಡಿನವರಿಂದ ದೂರವಾಗುತ್ತಿದೆ. ಭಾಷೆಯ ಬಗ್ಗೆ ಅಭಿಮಾನ ಬೆಳೆಸಿಕೊಳ್ಳಬೇಕಾದ ಅನಿವಾರ್ಯತೆ ನಮ್ಮ ಮೇಲಿದೆ. ಪ್ರಪಂಚದಲ್ಲಿಯೇ ಅತ್ಯಂತ ವೈಜ್ಞಾನಿಕವಾಗಿ ಜೋಡಿಸಲ್ಪಟ್ಟ ವರ್ಣಮಾಲೆಯನ್ನು ಹೊಂದಿರುವ ಹೆಗ್ಗಳಿಕೆ ನಮ್ಮದು. ಸುಮಾರು ಎರಡು ಸಾವಿರ ವರ್ಷಗಳ ಭವ್ಯ ಇತಿಹಾಸ ನಮ್ಮ ಈ ಭಾಷೆಗಿದೆ. ಇಂತಹ ಸುಂದರ ಭಾಷೆಯನ್ನು ನಮ್ಮ ನಾಡಿನಲ್ಲಿ ಜೊತೆಗೆ ನಾಡಿನ ಹೊರಗೂ ಪಸರಿಸಬೇಕಾದ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ.

ಇದರರ್ಥ ಬೇರೆ ಭಾಷೆಗಳನ್ನು ದ್ವೇಷಿಸಬೇಕೆಂದಲ್ಲ. ನಮ್ಮ ನಾಡಭಾಷೆಯ ನೆರಳಿನಲ್ಲಿ ಅನ್ಯಭಾಷೆಗಳೂ ಇರಲು ಅವಕಾಶ ಕೊಡಬೇಕು. ನಮ್ಮ ಭಾಷೆಯನ್ನು ಪ್ರೀತಿಸಬೇಕು, ಉಳಿಸಬೇಕು, ಬೆಳೆಸಬೇಕು. ಕನ್ನಡದ ದೀಪವನ್ನು ಮನೆ-ಮನಗಳಲ್ಲಿ ಹಚ್ಚಿ ಬೆಳಗಿಸುವ ಶಪಥವನ್ನು ನಾವೆಲ್ಲ ಇಂದು ಮಾಡಬೇಕಾಗಿದೆ.

## ಕವಿ ಪರಿಚಯ



೧೯೦೭ರ ನವೆಂಬರ್ ೧೫ ರಂದು ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಹಿರೇಕೊಪ್ಪದಲ್ಲಿ ಡಿ.ಎಸ್.ಕರ್ಕಿ ಜನಿಸಿದರು. ಕರ್ನಾಟಕದ ಪ್ರಸಿದ್ಧ ಕವಿಗಳಾದ ಇವರು ಪ್ರೌಢಶಾಲಾ ಶಿಕ್ಷಕರಾಗಿ ಸೇವೆಯನ್ನು ಪ್ರಾರಂಭಿಸಿ ಕೊನೆಯಲ್ಲಿ ಹುಬ್ಬಳ್ಳಿಯ ಕಲಾ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ ೧೯೬೬ರಲ್ಲಿ ನಿವೃತ್ತರಾದರು. ಇವರು ನಕ್ಷತ್ರಗಾನ, ಭಾವತೀರ್ಥ, ತನನತೋಂ, ಗೀತ ಗೌರವ, ಕರಿಕೆ ಕಣಗಿಲು, ನಮನ, ಬಣ್ಣದ ಚೆಂಡು ಎಂಬ ಕವನ ಸಂಕಲನಗಳನ್ನು ಬರೆದಿದ್ದಾರೆ. ಇದಲ್ಲದೆ ಕನ್ನಡ ಛಂದೋವಿಕಾಸ ಎಂಬ ಸಂಶೋಧನಾ ಪ್ರಬಂಧವನ್ನು ಸಹ ಬರೆದು ಕನ್ನಡಿಗರ ಮನಗೆದ್ದಿದ್ದಾರೆ. ಗಡಿನಾಡಿನಲ್ಲಿದ್ದ ಇವರು ಅವರೆಲ್ಲರ ಪ್ರತಿನಿಧಿಯಾಗಿ ಏಕೀಕರಣದ ಕನಸ ಕಂಡವರು. ಅದಕ್ಕಾಗಿಯೇ ಅನೇಕ ಕವನಗಳನ್ನು ಕಟ್ಟಿ ಜನರ ಮನದಲ್ಲಿ ಕೆಚ್ಚನ್ನು ಮೂಡಿಸಿದವರು.



## ಓದಿ-ತಿಳಿಯಿರಿ

ಹಚ್ಚೇವು-ಹಚ್ಚುವೆವು; ಕರುನಾಡು-ಕನ್ನಡನಾಡು; ಕೊಚ್ಚೇವು- ಕತ್ತರಿಸುತ್ತೇವೆ; ಸೂಸು-ಹರಡು, ಚಿಮುಕಿಸು; ಕರಣ-ಒಡಲು,ಶರೀರ; ಕಳೆ-ಕಾಂತಿ, ತೇಜಸ್ಸು, ಪ್ರಕಾಶ; ಎರೆ-ಹೊಯ್ಯು; ಹುರಿಗೊಳಿಸು-ಹಗ್ಗ ಮಾಡು, ಬಲಪಡಿಸು; ಕೆಚ್ಚು-ಕೂಡುವಿಕೆ, ಬೆಸುಗೆ, ಸೇರಿಸು; ಅಚ್ಚಳಿಯದೆ-ಅಂದಗೆಡದಂತೆ, ರೂಪುಗೆಡದಂತೆ; ಒಂದುಗೂಡೇವು-ಒಂದಾಗಿ ಸೇರುತ್ತೇವೆ; ತೀಡು-ಬೀಸು, ಹೊರಹೊಮ್ಮು; ಮಾಂಗಲ್ಯಗೀತೆ-ಮಂಗಳಕರವಾದ ಹಾಡು; ಮರುಳು- ಹುಚ್ಚು; ಕಡೆ-ನಿವಾರಿಸು, ಅಂತ್ಯಗೊಳಿಸು; ಮೈಮರೆವು- ದೇಹದ ಅರಿವು ಇಲ್ಲವಾಗು, ಮೂರ್ಛೆ; ಮಾತೆ-ತಾಯಿ, ಜನನಿ; ಕೊಳೆ-ಹೊಲಸು, ಕೆಸರು, ಕೊಚ್ಚೆ; ಕಂಪು-ಸುಗಂಧ, ಪರಿಮಳ; ನಾಡು-ಜನವಸತಿಯುಳ್ಳ ಪ್ರದೇಶ, ದೇಶ, ರಾಜ್ಯ; ಹಿಡಿ-ಗ್ರಹಿಸು, ಹಿಡಿದಿಟ್ಟುಕೊ; ಹೊಸೆ-ಹುರಿ ಮಾಡು, ಹೆಣೆ: ಹರಿವು-ಪ್ರವಹಿಸು, ಹರಿಯುವಿಕೆ; ಬೀರು-ಹರಡು; ಅಚ್ಚಳಿ-ಅಂದಕೆಡು; ತೋರು- ಕಾಣುವಂತೆ ಮಾಡು; ಒಡಲು-ಹೊಟ್ಟೆ; ತೂರು-ಎಸೆ, ನೂಕು;

## ಪೂರಕ ಮಾಹಿತಿ

**ನಡುನಾಡು** : ಕನ್ನಡ ನಾಡಿನ ಮಧ್ಯದ ಜಿಲ್ಲೆಗಳು. ಉದಾಹರಣೆಗೆ ಹಾಸನ, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ, ಧಾರವಾಡ ಇತ್ಯಾದಿ, ನಾಡಿನ ನಡುವೆ ಇರುವ ಪ್ರದೇಶಗಳು.

**ಗಡಿನಾಡು** : ಕನ್ನಡನಾಡಿನ ಗಡಿಯಲ್ಲಿರುವ ಜಿಲ್ಲೆಗಳು. ಉದಾಹರಣೆಗೆ ಬೆಳಗಾವಿ, ಬೀದರ್, ಕೋಲಾರ, ಬಳ್ಳಾರಿ, ದಕ್ಷಿಣ ಕನ್ನಡ ಇತ್ಯಾದಿ.

**ಕರುನಾಡು** : ಎತ್ತರವಾದ ನಾಡು, ವಿಶಾಲವಾದ ನಾಡು, ಕನ್ನಡ ನಾಡು.

**ಸಿರಿನುಡಿ** : ಸಂಪತ್ತಿನಿಂದ, ಶ್ರೀಮಂತಿಕೆಯಿಂದ ಕೂಡಿದ ಭಾಷೆ.

**ನಾಡೊಲವು** : ನಾಡಿನ ಬಗ್ಗೆ ಪ್ರೀತಿ.

**ಕೆಳಗೆ ನೀಡಿರುವ ಪದಗಳು ಪದ್ಯದ ಸಂದರ್ಭದಲ್ಲಿ ಪಡೆದುಕೊಳ್ಳುವ ಅರ್ಥವನ್ನು ಗಮನಿಸಿರಿ.**

ಕೊಳೆಯ ಕೊಚ್ಚೇವು – ನಾಡು ನುಡಿಯ ಬಗೆಗಿನ ಮರೆವಿನಿಂದಾಗಿ ಮೂಡಿರುವ ತಿರಸ್ಕಾರದ ಭಾವನೆಯನ್ನು ದೂರಮಾಡುತ್ತೇವೆ.

ಕರಣ ಚಾಚೇವು – ಕನ್ನಡ ಭಾಷೆಯ ಪರಿಮಳ ಬೀರುವಲ್ಲಿಗೆ ಹೋಗುತ್ತೇವೆ.

ಕಳೆಯಾ ಕೆಚ್ಚೇವು – ಕನ್ನಡದ ಕಾಂತಿಯನ್ನು ಬೆಳಗುತ್ತೇವೆ.

ಬೆಳಕ ಬೀರು – ಬೆಳಕನ್ನು ತೋರು.

ಅಚ್ಚಳಿಯದಂತೆ ತೋರು – ಕೆಡದಂತೆ ತೋರಿಸುತ್ತೇವೆ.

ಹಿಡಿನೆನಪ – ನೆನಪು ಮಾಡಿಕೊ.

ಕಡೆದೇವು ಇರುಳಾ – ಕತ್ತಲನ್ನು (ಕೆಟ್ಟದ್ದನ್ನು) ನಾಶ ಮಾಡುತ್ತೇವೆ.

**ಕೆಳಗಿನ ಸಾಲುಗಳು ನೀಡುವ ಶಬ್ದಚಿತ್ರವನ್ನು ಗಮನಿಸಿ.**

- ನರನರಗಳೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದ ದೀಪ.
  (ನರಗಳನ್ನು ದಾರದಂತೆ ಮಾಡಿ ಅದನ್ನು ದೀಪದಲ್ಲಿಟ್ಟು ಕನ್ನಡದ ದೀಪವನ್ನು ಬೆಳಗುತ್ತೇವೆ)
- ಕಲ್ಪನೆಯ ಬೆಳಕು ಹರಿವನಕ, ಸಾಲುದೀಪಗಳ ಬೆಳಕು ಬೀರೇವು.
  (ನಿಜವಾಗಿ ಕಣ್ಣಿಗೆ ಕಾಣುವುದಕ್ಕಿಂತ ಕಲ್ಪನೆಯಲ್ಲಿ ಇನ್ನೂ ಹೆಚ್ಚುದೂರ ಕಾಣುತ್ತದೆ. ನಮ್ಮ ಕಣ್ಣಿನಿಂದ ಆ ದಾರಿ ಸಾಗುವವರೆಗೆ ಸಾಲು ದೀಪಗಳನ್ನು ಹಚ್ಚುತ್ತೇವೆ.)
- ತೊಡೆದೇವು ಮರುಳಾ, ಕಡೆದೇವು ಇರುಳಾ, ಪಡೆದೇವು ತಿರುಳಾ. (ನಮ್ಮ ಹುಚ್ಚನ್ನು ಬಿಡುತ್ತೇವೆ, ಕೆಟ್ಟದ್ದನ್ನು ನಾಶ ಮಾಡುತ್ತೇವೆ, ಕನ್ನಡದ ಉತ್ತಮ ಬದುಕಿಗೆ ಬೇಕಾದ ಉತ್ತಮಾಂಶಗಳನ್ನು ಪಡೆಯುತ್ತೇವೆ.)
- ಕರುಳೆಂಬ ಕುಡಿಗೆ ಮಿಂಚನ್ನೆ ಮುಡಿಸಿ:
  (ಹೊಟ್ಟೆಯೊಳಗೆ ಕರುಳಿರುತ್ತದೆ. ಆದರೆ ಇಲ್ಲಿ ಮಮತೆ ಎಂಬರ್ಥ. ಅದಕ್ಕೆ ಮಿಂಚನ್ನು ಮುಡಿಸಿ ಎಂಬುದು ಒಂದು ಅರ್ಥ. ದೀಪದ ಕುಡಿ ಎಂದರೆ ತುದಿ ಅದಕ್ಕೆ ಮಿಂಚುವ ಬೆಳಕನ್ನು ಹಚ್ಚಿ ಎಂಬುದು ಇನ್ನೊಂದು ಅರ್ಥ)

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕನ್ನಡದ ಕಂಪನ್ನು ಸೂಸುವಲ್ಲಿ ಏನನ್ನು ಚಾಚುತ್ತೇವೆ?

೨. ಕಲ್ಪನೆಯ ಕಣ್ಣು ಹರಿವ ತನಕ ಯಾವ ದೀಪಗಳನ್ನು ಹಚ್ಚುತ್ತೇವೆ?

೩. ನಮ್ಮವರು ಗಳಿಸಿದ ಹೆಸರುಳಿಸಲು ಎಲ್ಲರೂ ಏನು ಮಾಡುತ್ತೇವೆ?

೪. ನಮ್ಮುಸಿರು ತೀಡುವ ನಾಡಿನಲ್ಲಿ ಯಾವ ಗೀತೆ ಹಾಡುತ್ತೇವೆ?

೫. ಕರುಳೆಂಬ ಕುಡಿಗೆ ಏನನ್ನು ಮುಡಿಸುತ್ತೇವೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯದಲ್ಲಿ ಉತ್ತರಿಸಿರಿ.**

೧. ಕನ್ನಡಿಗರು ಯಾವ ದೀಪವನ್ನು ಹಚ್ಚುತ್ತಾರೆ?

೨. ಏನನ್ನು ಮರೆತು, ಏನನ್ನು ಎರೆದು, ಹೇಗೆ ಕನ್ನಡದ ದೀಪ ಹಚ್ಚುತ್ತಾರೆ?

೩. ಕನ್ನಡ ಮಾತೆಯನ್ನು ಹೇಗೆ ಆದರಿಸುತ್ತಾರೆ?

**ಇ. ಕೆಳಗಿನ ಸಾಲುಗಳಲ್ಲಿ ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

೧. ಮೈಮರೆವೆಯಿಂದ ಕೂಡಿರುವ ______________

೨. ಹಚ್ಚಿರುವ ದೀಪದಲಿ ತಾಯರೂಪ ______________

೩. ನಮ್ಮೆದೆಯ ಮಿಡಿಯುವೀ ಮಾತಿನಲ್ಲಿ ಮಾತೆಯನು ______________

೪. ಕರುಳೆಂಬ ಕುಡಿಗೆ ______________

**ಈ.** **'ಹಚ್ಚೇವು'** ಎಂಬ ಪದಕ್ಕೆ ಸರಿಹೊಂದುವ, ಪದ್ಯದಲ್ಲಿ ಇರುವ ಪ್ರಾಸಪದಗಳನ್ನು ಬರೆಯಿರಿ.

**ಉ.** **'ಬೀರೇವು'** ಎಂಬ ಪದದಂತೆ ಪದಮಧ್ಯದಲ್ಲಿ **'ರ'** ಅಕ್ಷರ ಬರುವ ಪದಗಳನ್ನು ಪಟ್ಟಿ ಮಾಡಿ.

**ಊ.** ಕೈಗೆ ಕಾಲ್ಗೆ ಮೊಳೆಯ ಜಡಿಯೆ
ಶಿಲುಬೆಗಿಕ್ಕಿ ಸಾಯೆ ಬಡಿಯೆ
ಅವರ ತಪ್ಪ ಕ್ಷಮಿಸುಯೆಂದು
ಮೊರೆಯನಿಟ್ಟ ತಂದೆಗೆಂದು
ಕ್ರಿಸ್ತ ಸತ್ತು ಬದುಕಿದ
ಯುಗವೊಂದನು ತೊಡಗಿದ– **ಕಯ್ಯಾರ ಕಿಞ್ಞಣ್ಣ ರೈ (ಶತಮಾನದ ಗಾನ)**

ಈ ಪದ್ಯದಲ್ಲಿ ಬರುವ ಪ್ರಾಸ ಪದಗಳನ್ನು ಪಟ್ಟಿಮಾಡಿ.

## ಭಾಷಾಭ್ಯಾಸ

**ಅ. ಕೆಳಗೆ ನೀಡಿರುವ ಪದ್ಯದ ಪ್ರಾಸಪದಗಳನ್ನು ಜೋಡಿಸಿ ಬರೆಯಿರಿ.**

| | | | | | |
|---|---|---|---|---|---|
| ದೀಪ | ಮರುಳು | ತೀಡು | ಭೀತಿ | ಹಾಡು | ಮನವ |
| ಹಚ್ಚು | ರೂಪ | ಕರುಳು | ಪಡೆ | ಮನೆ | ಮಿಡಿ |
| ಗೂಡು | ನಾಡು | ಮರೆತೇವು | ನಾಡು | ಗಡಿನಾಡು | ಸಿಡಿ |
| ಪ್ರೀತಿ | ನೀತಿ | ಮನ | ಕುಡಿ | ಇರುಳು | ಸೊಂಪು |
| ನಡುನಾಡು | ಅಚ್ಚು | ತೊಡೆ | ಮುಡಿ | ಹಿಡಿ | ಮರೆವ |
| ಮಿಡಿ | ತೊರೆದೇವು | ಕೆಚ್ಚು | ಗಳಿಸು | ಕಂಪು | |

**ಆ. ಕೆಳಗೆ ನೀಡಿರುವ ಪದಗಳ ಅರ್ಥವ್ಯತ್ಯಾಸವನ್ನು ಗಮನಿಸಿ.**

- ಹಚ್ಚು–ಹಚ್ಚೆವು–ಹಚ್ಚುವುದಿಲ್ಲ, ಹಚ್ಚೇವು – ಹಚ್ಚುತ್ತೇವೆ.
- ಬೀರು–ಬೀರೆವು–ಬೀರುವುದಿಲ್ಲ. ಬೀರೇವು – ಬೀರುತ್ತೇವೆ.
- ಮಾಡು–ಮಾಡೆವು–ಮಾಡುವುದಿಲ್ಲ. ಮಾಡೇವು – ಮಾಡುತ್ತೇವೆ.



**ಇ. ಇದೇ ರೀತಿಯಲ್ಲಿ ನೋಡು, ಹಾಡು, ನಿಲ್ಲು, ಮೆಚ್ಚು ಮೊದಲಾದ ಪದಗಳನ್ನು ಕೆಳಗಿನ ವಾಕ್ಯದಲ್ಲಿ ಬಳಸಿ ವಾಕ್ಯ ಪೂರ್ಣಗೊಳಿಸಿ.**

ನಾವು ಕನ್ನಡ ಚಲನ ಚಿತ್ರಗಳನ್ನು ______________

ನಾವು ಕನ್ನಡ ಗೀತೆಗಳನ್ನು______________

ನಿಮಗಾಗಿ ನಾಳೆ ನಾವು ಕಾಯುತ್ತಾ ______________

ನಿಮ್ಮೆಲ್ಲ ಚಿತ್ರಗಳನ್ನು ______________

**ಈ. ಒಂದೇ ಪದವನ್ನು ನಾಮಪದ ಮತ್ತು ಕ್ರಿಯಾಪದ ಅರ್ಥದಲ್ಲಿ ಮಾದರಿಯಂತೆ ಬಳಸಿ ವಾಕ್ಯ ರಚಿಸಿ.**

**ಮಾದರಿ:** ಕಳೆ : ನಮ್ಮ ಶಾಲಾ ಕೈತೋಟದಲ್ಲಿ ತುಂಬಾ ಕಳೆ ಬೆಳೆದಿದೆ.
ರಾಜುವಿನ ಮುಖದಲ್ಲಿ ತುಂಬಾ ಕಳೆಯಿದೆ.

೧. ಹಚ್ಚು : ______________________________

೨. ಕುಡಿ : ______________________________

೩. ಪಡೆ : ______________________________

## ಉ) ಮೊದಲೆರಡು ಪದಗಳ ಸಂಬಂಧ ಗ್ರಹಿಸಿ ಖಾಲಿಜಾಗದಲ್ಲಿ ಸೂಕ್ತ ಪದ ಭರ್ತಿಮಾಡಿ.

೧. ಆಂಧ್ರಪ್ರದೇಶ: ಹೈದರಾಬಾದ್:: ಕೇರಳ: ______________

೨. ಶತ್ರು: ಮಿತ್ರ :: ರಾತ್ರಿ: ______________

೩. ಮಾತಾ: ತಾಯಿ:: ಪಿತಾ: ______________

೪. ದಾವಣಗೆರೆ: ನಡುನಾಡು:: ಬೆಳಗಾವಿ: ______________

### ಸಮಾನಾಂತರ ಚಟುವಟಿಕೆ:

೧. ನಾಡಭಕ್ತಿ ಗೀತೆಗಳನ್ನು ಸಂಗ್ರಹಿಸಿ ಹಾಡಿನ ಒಂದು ಆಲ್ಬಂ ತಯಾರಿಸಿ.

೨. ಕರ್ನಾಟಕದಲ್ಲಿ ಮಾತನಾಡುವ ವಿವಿಧ ಭಾಷೆಗಳನ್ನು ಪಟ್ಟಿ ಮಾಡಿ.

೩. ನೀವು ಮಾತನಾಡುವ ಮತ್ತು ಅರ್ಥ ಮಾಡಿಕೊಳ್ಳುವ ವಿವಿಧ ಭಾಷೆಗಳನ್ನು ಪಟ್ಟಿ ಮಾಡಿ.

೪. ನಮ್ಮ ರಾಜ್ಯದ ಗಡಿನಾಡಿನಲ್ಲಿರುವ ಜಿಲ್ಲೆಗಳ ಬಗ್ಗೆ ನಿಮ್ಮ ಗ್ರಂಥಾಲಯದಲ್ಲಿರುವ ಪುಸ್ತಕಗಳನ್ನು ಓದಿರಿ.



## ಪೂರಕ ಮಾಹಿತಿ

### ನಮ್ಮ ಕನ್ನಡ ನಾಡು

ನಮ್ಮ ಕರ್ನಾಟಕದ ಹೆಸರು ಮಹಾಭಾರತದ ಕಾಲದಿಂದ ಇಂದಿನವರೆಗೆ ತನ್ನದೇ ಆದ ವಿಶೇಷತೆಗಳಿಂದ ಇತಿಹಾಸದ ಪುಟಗಳಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. ಕರಿಯ ಮಣ್ಣಿನ ನಾಡು ಕರ್ನಾಟಕ, ಕರುನಾಡು ಅಥವಾ ಎತ್ತರದ ನಾಡು ಕರ್ನಾಟಕ, ಕಮ್ಮಿತು ನಾಡು ಅಂದರೆ ಶ್ರೀಗಂಧದ ಕಂಪನ್ನುಳ್ಳ ನಾಡು ಕರ್ನಾಟಕವಾಗಿದೆ ಎಂದೆಲ್ಲ ವಾದಿಸುವವರು ನಮ್ಮಲ್ಲಿದ್ದಾರೆ. ಆದರೆ ಜನಸಾಮಾನ್ಯ ಇದ್ಯಾವುದರ ಬಗ್ಗೆಯೂ ತಲೆಕೆಡಿಸಿಕೊಳ್ಳದೆ ತನ್ನ ನಾಡು ಕರ್ನಾಟಕ ಎಂಬಷ್ಟಕ್ಕೇ ಪ್ರಾಧಾನ್ಯ ನೀಡಿದ್ದಾನೆ.

ಕ್ರಿ.ಪೂ ೩ ನೇ ಶತಮಾನದಲ್ಲಿ ಕರ್ನಾಟಕದ ಹೆಚ್ಚಿನ ಭಾಗ ಮೌರ್ಯಚಕ್ರವರ್ತಿ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಇತಿಹಾಸಕಾರರು ಕಂಡುಕೊಂಡಿದ್ದಾರೆ. ಅಲ್ಲಿಂದ ಇಲ್ಲಿಯವರೆಗೆ ಕರ್ನಾಟಕವನ್ನು ಕಂಚಿಯ ಪಲ್ಲವರಿಂದ ಹಿಡಿದು ಕನ್ನಡಿಗರನ್ನು ಆಳಿದ ಮೊದಲ ಕನ್ನಡಿಗ ದೊರೆಗಳಾದ ಕದಂಬರು, ನಂತರ ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ

ಚಾಲುಕ್ಯರು, ಹೊಯ್ಸಳರು, ದೇವಗಿರಿ ಯಾದವರು, ವಿಜಯನಗರದರಸರು, ಬಹುಮನಿ ಸುಲ್ತಾನರು, ಬಿಜಾಪುರದ ಆದಿಲ್ ಷಾಹಿಗಳು, ಕೆಳದಿ–ಮೈಸೂರು ಅರಸರು, ಹೈದರ್, ಟಿಪ್ಪುವರೆಗೆ ಅನೇಕ ರಾಜಮನೆತನಗಳು, ರಾಜ ಮಹಾರಾಜರು ಆಳಿದ್ದಾರೆ. ಆ ಮೂಲಕ ರಾಜ್ಯದ ಏಳಿಗೆಗೆ ತಮ್ಮದೇ ಆದ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಿಗೆ ಅಪಾರ ಕೊಡುಗೆಗಳನ್ನು ನೀಡಿದ್ದಾರೆ.

ಭಾರತ ಜನನಿಯ ತನುಜಾತೆಯಾದ ಕರ್ನಾಟಕ ಮಾತೆ ಇಂದು ಭಾರತದ ಭೂಪಟದಲ್ಲಿ ತನ್ನದೇ ಆದ ವೈಶಿಷ್ಟ್ಯಗಳಿಂದ ರಾರಾಜಿಸುತ್ತಿದ್ದಾಳೆ. ಎಂಟು ಜ್ಞಾನಪೀಠ ಪ್ರಶಸ್ತಿಗಳನ್ನು ಪಡೆದ ಕೀರ್ತಿ ಕನ್ನಡ ಭಾಷೆಯದ್ದು. ಇದುವರೆಗೆ ಭಾರತದ ಯಾವ ಭಾಷೆಗಳಿಗೂ ಇಷ್ಟು ಜ್ಞಾನಪೀಠ ಪ್ರಶಸ್ತಿಗಳು ಸಿಕ್ಕಿಲ್ಲ ಎಂಬುದು ಒಂದು ಹೆಮ್ಮೆಯ ವಿಷಯ. ಬ್ರಿಟಿಷರ ಕಾಲದಲ್ಲಿ ಕನ್ನಡ ಭಾಷಾ ಪ್ರದೇಶಗಳು ಸುಮಾರು ೨೦ ಆಡಳಿತದಲ್ಲಿ ಹರಿದು ಹಂಚಿ ಹೋಗಿದ್ದವು. ನಂತರ ೧೯೪೭ರಲ್ಲಿ ಮದ್ರಾಸ್, ಮುಂಬೈ, ಮೈಸೂರು, ಕೊಡಗು ಹಾಗೂ ಹೈದರಾಬಾದ್ ಪ್ರಾಂತಗಳೆಂಬ ಬೇರೆ ಬೇರೆ ಆಡಳಿತಗಳಿಗೆ ಒಳಪಟ್ಟಿತ್ತು. ೧೯೫೬ರಲ್ಲಿ ಈ ಎಲ್ಲಾ ಪ್ರಾಂತಗಳನ್ನು ಒಟ್ಟು ಸೇರಿಸಿ ಮೈಸೂರು ರಾಜ್ಯ ಎಂಬ ಹೆಸರಿನಲ್ಲಿ ಇಂದಿನ ನಮ್ಮ ಕನ್ನಡ ನಾಡು ಉದಯಿಸಲ್ಪಟ್ಟಿತು. ಮೈಸೂರು ರಾಜ್ಯಕ್ಕೆ ಪುನರ್‌ನಾಮಕರಣವನ್ನು ಮಾಡಿ ೧೯೭೩ರ ನವೆಂಬರ್ ೧ ರಂದು "ಕರ್ನಾಟಕ" ಎಂದು ಬದಲಿಸಲಾಯಿತು.



**ಚೆನ್ನುಡಿ**

**ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ**
**ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ**
**ಕನ್ನಡ ಕಸ್ತೂರಿಯನ್ನ**
**ಹೊಸತುಸಿರಿಂ ತೀಡದನ್ನ**
**ಸುರಭಿ ಎಲ್ಲಿ ? ನೀನದನ್ನ**
**ನವಶಕ್ತಿಯನೆಬ್ಬಿಸು–**
**ಹೊಸಸುಗಂಧದೊಸಗೆಯಿಂದ ಜಗದಿ ಹೆಸರ ಹಬ್ಬಿಸು॥**

**–ಎಂ ಗೋವಿಂದ ಪೈ (ರಾಷ್ಟ್ರಕವಿ, ವಿದ್ವಾಂಸ, ಸಂಶೋಧಕರು)**

ಕಸ್ತೂರಿ ಮೃಗವು ತನ್ನಲ್ಲೇ ಪರಿಮಳ ಅಡಗಿದ್ದರೂ ಅದನ್ನು ಅರಿಯದೆ ಬೇರೆ ಕಡೆ ಕಸ್ತೂರಿಯ ಪರಿಮಳ ಹುಡುಕುವಂತೆ, ನಾವಿಂದು ಕಸ್ತೂರಿಯಂತೆ ಪರಿಮಳಯುಕ್ತವಾದ ಕನ್ನಡವನ್ನು ತಿಳಿಯದೆ, ಬೇರೆ ಭಾಷೆಯ ಕಡೆ ನೋಡುತ್ತಿದ್ದೇವೆ. ಕನ್ನಡದ ಕಸ್ತೂರಿಯನ್ನು ಹೊಸ ಉಸಿರಿಂದ ತೀಡಿ, ಹೊಸ ಶಕ್ತಿಯನ್ನಾಗಿ ಅದನ್ನು ಎಬ್ಬಿಸಿ, ಅದರ ಸುಗಂಧವನ್ನು ಎಲ್ಲ ದಿಕ್ಕಿಗೆ ಹರಡಬೇಕಾಗಿದೆ.

# ಗದ್ಯಪಾಠ – ೨

# ಚಗಳಿ ಇರುವೆ

– ಕೆ.ಪಿ ಪೂರ್ಣಚಂದ್ರ ತೇಜಸ್ವಿ

**ಪ್ರವೇಶ :** ಕನ್ನಡದ ಪ್ರಖ್ಯಾತ ಸಾಹಿತಿ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಪ್ರಸಿದ್ಧ ಮಿಲನಿಯಮ್ ಸರಣಿಯ ಪುಸ್ತಕಗಳಲ್ಲಿ ಐದನೆ ಪುಸ್ತಕ ನೆರೆಹೊರೆ ಗೆಳೆಯರು. ಅದರಲ್ಲಿ ಒಂದು ಬರೆಹ ಮೂರು ಇರುವೆಗಳು. ಇದರಲ್ಲಿ ತೇಜಸ್ವಿಯವರು ಒಂದು ಪ್ರಸಂಗವನ್ನು ಹೀಗೆ ವಿವರಿಸುತ್ತಾರೆ.

"ಒಂದು ದಿನ ನಾನು, ನನ್ನ ತಮ್ಮ ಚೈತ್ರ ಮೈಸೂರಿನಲ್ಲಿ ಮನೆ ಮುಂದೆ ಇದ್ದ ಪನ್ನೇರಲು ಮರ ಹತ್ತಿ ಹಣ್ಣುಗಳಿವೆಯೇ ಎಂದು ಹುಡುಕುತ್ತಿದ್ದಾಗ ಇದ್ದಕ್ಕಿದ್ದಂತೆ ಇರುವೆಗಳ ದಂಡೊಂದು ನಮ್ಮ ಮೇಲೆ ಎರಗಿತು. ಮರದ ಮೇಲೆ ಎಲ್ಲಿಂದ ಬಂತು ಇರುವೆ ಎಂದು ಅತ್ತಿತ್ತ ನೋಡಿದೆ. ಕೊಂಬೆಗಳ ಮೇಲೆ ಸಾಲು ಸಾಲಾಗಿ ಕೆಂಪು ಇರುವೆಗಳು ನಮ್ಮತ್ತ ನುಗ್ಗುತ್ತಿದ್ದವು. ಅಲ್ಲದೆ ನಮ್ಮ ತಲೆಯ ಮೇಲೆ ಎಲೆಗಳನ್ನೆ ಸುತ್ತಿ ಮಾಡಿದ ದೊಡ್ಡ ಗಂಟಿನಿಂದ ಇರುವೆಗಳು ತುಪು ತುಪು ಉದುರುತ್ತಿದ್ದವು. ಸಾವಿರಾರು ಇರುವೆಗಳು ಇದ್ದುದರಿಂದ ಕಚ್ಚುತ್ತಿದ್ದ ಅವನ್ನು ಹೊಸಕಿ ಹಾಕಿ ಮುಯ್ಯಿ ತೀರಿಸಲು ಸಾಧ್ಯವಿರಲಿಲ್ಲ. ಕೊಂಬೆಯಿಂದ ಒಂದೇ ಏಟಿಗೆ ಕೆಳಗೆ ಹಾರಿ ಮೈ ಕೈಯೆಲ್ಲಾ ಮುತ್ತಿಕೊಂಡು ಕಚ್ಚುತ್ತಿದ್ದ ಇರುವೆಗಳನ್ನು ಕೊಡವಿಕೊಂಡೆವು. ಗೂಡಿನಿಂದ ಇರುವೆಗಳು ಹೊರಬಂದು ಗೂಡಿನ ಮೇಲೆಲ್ಲ ನೆರೆದಿದ್ದರಿಂದ ಹಸುರೆಲೆಗಳನ್ನು ಅಂಟಿಸಿ ಮಾಡಿದ್ದ ಗೂಡು ಈಗ ಕೆಂಪಗೆ ಕಾಣುತ್ತಿತ್ತು.

ಅಂಗಿಯ ಒಳಗೆ, ಚಡ್ಡಿಯ ಒಳಗೆ, ಎಲ್ಲ ಕಡೆಯೂ ಸೇರಿಕೊಂಡು ಕಚ್ಚುತ್ತಿದ್ದ ಅವನ್ನು ಆ ಮರದಿಂದ ಹೇಗಾದರೂ ಉಚ್ಚಾಟಿಸಲೇಬೇಕೆಂದು ದೃಢನಿಶ್ಚಯ ಮಾಡಿ ಮರವನ್ನು ಗಟ್ಟಿಯಾಗಿ ಹಿಡಿದು ಅಲ್ಲಾಡಿಸತೊಡಗಿದೆವು. ಆಗ ಗೂಡಿನಿಂದ ಧಾರಾಕಾರವಾಗಿ ಇರುವೆಗಳು ಹೊರಬಂದು ದಾಳಿಗೆ ಸಜ್ಜಾದವು.

ನಮ್ಮ ಪ್ರಯತ್ನ ಸತತವಾಗಿ ಮುಂದುವರೆಯಿತು. ಗೂಡಿಗೆ ಅಂಟಿಸಿದ್ದ ಎಲೆಗಳು ಬೇರೆ ಬೇರೆಯಾಗಿ ಇರುವೆಗಳು ಎಲ್ಲಾ ಉದುರಿ ಬಿದ್ದು ಹರಿದಾಡತೊಡಗಿದವು. ಇರುವೆಗಳಿಗೆ ತಕ್ಕ ಶಾಸ್ತಿಯಾಯಿತೆಂದು ನಮಗೆ ಸಮಾಧಾನವಾಯಿತು. ನಮ್ಮ ತಂದೆಯವರಿಗೆ ನಾವು ಈ ವಿಷಯ ತಿಳಿಸಿದಾಗ ಅವು ಚಗಳಿ ಇರುವೆಗಳೆಂದೂ ಮಲೆನಾಡಿನಲ್ಲಿ ಅವುಗಳ ಮೊಟ್ಟೆ ಮರಿಗಳನ್ನೆಲ್ಲಾ ಹಿಡಿದು ಅರೆದು ಚಟ್ನಿ ಮಾಡಿ ಊಟಕ್ಕೆ ನಂಚಿಕೊಳ್ಳುತ್ತಾರೆಂದೂ ಹೇಳಿದರು."

ಅವರೇ ವಿವರಿಸಿದಂತೆ ಮಲೆನಾಡಿಗರ ಪ್ರಿಯ ಇರುವೆಗಳ ಪರಿಚಯ ಈ "ಚಗಳಿ ಇರುವೆ" ಪಾಠ.

ಇರುವೆಗಳ ವರ್ಗದಲ್ಲೇ ಅದ್ಭುತವೆಂದು ವರ್ಣನೆಗೊಳಗಾಗಿರುವ ಚಗಳಿ ಇರುವೆಗಳು ಮಲೆನಾಡಿಗರಿಗೆ ಚಿರಪರಿಚಿತ. ಇವು ಕಾಡಿನಲ್ಲಿ, ತೋಟದಲ್ಲಿ ಅಗಾಧವಾದ ಗೂಡುಗಳನ್ನು ಕಟ್ಟಿಕೊಂಡು ವಾಸಿಸುತ್ತವೆ. ಎಲೆಗಳನ್ನು ಒಂದಕ್ಕೊಂದು ಸೇರಿಸಿ ಇವು ಕಟ್ಟುವ ಗೂಡುಗಳನ್ನು 'ಕೊಟ್ಟೆ' ಎನ್ನುತ್ತಾರೆ. ಅತ್ಯಂತ ಸಂಕೀರ್ಣ ಸಂದೇಶಗಳನ್ನು ತಿಳಿಸಬಲ್ಲ ಭಾಷೆ ಅಥವಾ ಸಂವಹನ ಮಾಧ್ಯಮ ಇಲ್ಲದೆ ಈ ಇರುವೆಗಳು ಇಷ್ಟೆಲ್ಲ ಕೆಲಸ ಮಾಡಲು ಸಾಧ್ಯವಿಲ್ಲ ಎನ್ನುವುದು ಇದರಿಂದ ತಿಳಿದುಬರುತ್ತದೆ. ಸಂಘಜೀವಿಗಳಾದ ಈ ಇರುವೆಗಳು ಇಡೀ ಗೂಡು ಒಂದೇ ಎನ್ನುವಷ್ಟು ಶಿಸ್ತಿನಿಂದ ವರ್ತಿಸುತ್ತವೆ.



ಉದಾಹರಣೆಗೆ ಇವು ಕೊಟ್ಟೆಗಳನ್ನು ರಚಿಸುವ ರೀತಿಯನ್ನೇ ನೋಡಿ. ಒಂದು ಕೊಂಬೆಯ ಎಲೆಗಳನ್ನು ಬಗ್ಗಿಸಿ ಒಂದಕ್ಕೊಂದು ತಾಗಿಸಿ ಹೊಲಿದಿರುತ್ತವೆ. ನಮಗೆ ಹೊರಗಿನಿಂದ ನೋಡಿದಾಗ ಇದೇನು ಮಹಾ ಅನ್ನಿಸಬಹುದು. ಆದರೆ ಇರುವೆಯಂಥ ಅತ್ಯಂತ ಸಣ್ಣ ಶರೀರದ ಪ್ರಾಣಿ ಅದರ ನೂರಾರು ಪಟ್ಟು ವಿಸ್ತಾರವಾಗಿಯೂ ಬಲವಾಗಿಯೂ ಇರುವ ಎಲೆಗಳನ್ನು ಬಗ್ಗಿಸುವುದು ಹೇಗೆ? ಯಾವ ಎಲೆಗಳನ್ನು ಬಗ್ಗಿಸಬೇಕಾಗಿದೆಯೋ ಆ ಎಲೆಯ ಮೇಲೆ ನೂರಾರು ಇರುವೆಗಳು ಜಮಾಯಿಸುತ್ತವೆ. ಅನಂತರ ಒಂದರ ಕಾಲು ಒಂದು ಹಿಡಿದುಕೊಂಡು ಜೋತಾಡುತ್ತಾ ಕೆಳಗಿಳಿಯುತ್ತವೆ. ಕೆಳಗಿನ ಎಲೆಯ ಅಂಚು ಸಿಕ್ಕಿದ ಕೂಡಲೆ ನೇತಾಡುವ ದಾರದ ಕೊನೆಯಲ್ಲಿರುವ ಇರುವೆ ಎಲೆಯ ಅಂಚನ್ನು ಹಿಡಿಯುತ್ತದೆ. ಮೇಲಿನಿಂದ ಕೆಳಗೆ ನೇತುಕೊಂಡಿರುವ ಹಲವಾರು ದಾರಗಳು ನಿರ್ಮಾಣವಾದ ಕೂಡಲೇ ನೀಡಿರುವ ತಮ್ಮ ಕೈ ಕಾಲುಗಳನ್ನು ಎಲ್ಲ ಇರುವೆಗಳೂ ನಿಧಾನವಾಗಿ ಮಡಚುತ್ತವೆ. ದಾರದ ಸೆಳೆತಕ್ಕೆ ಎಲೆ ಮೆಲ್ಲಗೆ ಕೆಳಗೆ ಬಾಗುತ್ತದೆ. ಮೊದಲ ಇರುವೆಗಳ ದಾರ ಸಂಕುಚಿಸಿ ಎಲೆ ಕೆಳಕ್ಕೆ ಬಾಗಿರಬೇಕಾದರೆ ಮತ್ತೆ ಎರಡನೆ ಸುತ್ತಿನ ಇರುವೆಗಳ ದಾರ ನಿರ್ಮಾಣವಾಗುತ್ತದೆ. ಮೊದಲನೆ ಸರಣಿ ಎಳೆದು ಹಿಡಿದಿರುವ ಎಲೆಯಿಂದ ಮತ್ತೊಂದು ಸುತ್ತಿನ ದಾರಗಳು ಬಂದು ಎಲೆಯನ್ನು ಮತ್ತಷ್ಟು ಕೆಳಗೆ ಎಳೆಯುತ್ತವೆ. ಕೆಲಹೊತ್ತಿನಲ್ಲೇ ಆ ಎಲೆಯನ್ನು ಪೊಟ್ಟಣದಂತೆ ಬಗ್ಗಿಸಿ ಕೆಳಗಿನ ಎಲೆಗೆ ಒತ್ತಿ ಹಿಡಿಯುತ್ತವೆ.



ಹಲಸಿನ ಮತ್ತು ಮಾವಿನ ಮರದಲ್ಲಿ ನೇತಾಡುತ್ತಿರುವ ಸಾಮಾನ್ಯ ಗಾತ್ರದ ಚಗಳಿ ಕೊಟ್ಟೆಯ ಚಿಕ್ಕೆಲೆಗಳು ಒಂದಕ್ಕೊಂದು ತಾಗುತ್ತಿದ್ದಂತೆಯೇ ಇರುವೆಗಳು ತಮ್ಮ ಹಳೆಗೂಡಿಗೆ ಓಡಿ ಅಲ್ಲಿ ಇನ್ನೂ ಕೋಶಾವಸ್ಥೆಯಲ್ಲಿರುವ ಲಾರ್ವಾಗಳನ್ನು ತಮ್ಮ ದವಡೆಯಲ್ಲಿ ಮೃದುವಾಗಿ ಹಿಡಿದು

ತರುತ್ತವೆ. ಆ ಲಾರ್ವಾಗಳನ್ನು ಎಲೆಗೆ ಎಲೆ ಅಂಟಿಸಬೇಕಾದ ಜಾಗದಲ್ಲಿ ವಿಚಿತ್ರವಾಗಿ ನೇವರಿಸುತ್ತಾ ಮೇಲೂ ಕೆಳಗೂ ಮಗ್ಗದ ಲಾಳ ಆಡಿಸುವಂತೆ ಅತ್ತಿಂದಿತ್ತ ಆಡಿಸುತ್ತವೆ. ಲಾರ್ವಾಗಳನ್ನು ನೇವರಿಸುವುದರಿಂದ ಅವು ರೇಷ್ಮೆಯಂಥ ನೂಲನ್ನು ಸತತವಾಗಿ ಸ್ರವಿಸಲು ಶುರು ಮಾಡುತ್ತವೆ. ಜೇಡರ ಬಲೆಯಂತೆ ಎರಡನ್ನೂ ಬೆಸೆಯುವ ಈ ನೂಲು ಕೆಲಸ ಮುಗಿಯುವ ಹೊತ್ತಿಗೆ ರೇಷ್ಮೆ ಬಟ್ಟೆಯಂತೆಯೇ ದಟ್ಟವಾಗಿ ದಪ್ಪಗಿದ್ದು ಎಲೆಗಳೆರಡನ್ನು ಅಂಟಿಸಿರುತ್ತದೆ.







ಚಗಳಿ ಇರುವೆಗಳು ಮೊದಲು ಎರಡೋ ಮೂರೋ ಅಕ್ಕಪಕ್ಕದ ಎಲೆಗಳನ್ನು ಸೇರಿಸಿ ಪೊಟ್ಟಣ ಕಟ್ಟಿದಂತೆ ಚಿಕ್ಕಗೂಡು ಕಟ್ಟುತ್ತವೆ. ಇವುಗಳ ಸಂಖ್ಯೆ ಬೆಳೆದಂತೆಲ್ಲಾ ಮೇಲಿನ ಮತ್ತು ಅಕ್ಕಪಕ್ಕದ ಎಲೆಗಳನ್ನು ಹೊಂದಿಸಿ ಮಾಳಿಗೆಗಳನ್ನು ನಿರ್ಮಿಸುತ್ತಾ ಗೂಡನ್ನು ದೊಡ್ಡ ಮಾಡುತ್ತವೆ. ದೊಡ್ಡ ಗೂಡುಗಳಲ್ಲಿ ಐದರಿಂದ ಹತ್ತು ಲಕ್ಷ ಇರುವೆಗಳವರೆಗೂ ಇರುತ್ತವೆ. ಇರುವೆಗಳ ಸಂಖ್ಯೆ ಇದನ್ನೂ ಮೀರಿ ಬೆಳೆದರೆ ಆಗ ಅದೇ ಮರದ ಬೇರೆ ಕೊಂಬೆಯಲ್ಲೋ ಅಥವಾ ಸಮೀಪದ ಇನ್ನೊಂದು ಮರದಲ್ಲೋ ಹೊಸ ಉಪಕೊಟ್ಟೆಗಳನ್ನು ಕಟ್ಟುತ್ತವೆ.

ಈ ಇರುವೆಗಳ ಶಿಸ್ತು, ಧೈರ್ಯ ಮತ್ತು ಒಗ್ಗಟ್ಟುಗಳ ದೆಸೆಯಿಂದ ಇವನ್ನು ಮನುಷ್ಯರಿಗೂ ಸಹ ಹಿಮ್ಮೆಟ್ಟಿಸುವುದು ಕಷ್ಟ. ಬೇರೆ ಇರುವೆಗಳನ್ನು ನೀವು ಹಿಡಿಯಲು ಹೋದರೆ ಅವು ತಲೆ ತಪ್ಪಿಸಿಕೊಂಡು ಓಡಿಹೋಗಲು ನೋಡುತ್ತವೆ. ಆದರೆ ಚಗಳಿ ಇರುವೆಗಳನ್ನು ಹಿಡಿಯಲು ಹೋದರೆ ಅವು ಓಡುವುದಿಲ್ಲ. ಬದಲಿಗೆ ತಿರುಗಿ ನಿಂತು ನೆಗೆದು ಕಚ್ಚಲು ಸಿದ್ಧವಾಗುತ್ತವೆ. ಅಷ್ಟೇ ಅಲ್ಲದೆ ತನ್ನ ಹಿಂಭಾಗವನ್ನು ಮೇಲೆತ್ತಿ ಹೊಟ್ಟೆ ಅಡಿಯಲ್ಲಿರುವ ಗ್ರಂಥಿಗಳಿಂದ ಅಪಾಯದ ಫಿರಮೋನ್ ರಾಸಾಯನಿಕವನ್ನು ಗಾಳಿಯಲ್ಲಿ ಸಿಂಪರಿಸುತ್ತವೆ. ಕೆಲವೇ ಕ್ಷಣಗಳಲ್ಲಿ ಆಜುಬಾಜಿನಲ್ಲಿರುವ ಎಲ್ಲ ಚಗಳಿ ಇರುವೆಗಳೂ ಯುದ್ಧ ಸನ್ನದ್ಧರಾಗಿ ಹಾಜರಾಗುತ್ತವೆ.

ಈ ಇರುವೆಗಳು ತಮ್ಮಲ್ಲೇ ದನ ಸಾಕುವ ಗೋಪಾಲಕರಂಥ ಕೆಲಸಗಾರ ಇರುವೆಗಳನ್ನು ರೂಪಿಸಿವೆ. ಇವುಗಳ ಕೆಲಸವೆಂದರೆ ಗಿಡದ ರಸ ಹೀರಿ ಬದುಕುವ ತಿಗಣೆ ಮತ್ತು ಜಿಗಿ ಹುಳುಗಳನ್ನು ಹಿಡಿತಂದು ತಾವು ಕೊಟ್ಟೆ ಕಟ್ಟಿದ ಮರದ ಕೊಂಬೆಗಳ ಮೇಲೆ ಸಾಕುವುದು. ಚಗಳಿಗಳ ಜೀವನದಲ್ಲಿ ಇವಕ್ಕೆ ಅಪಾರ ಪ್ರಾಮುಖ್ಯತೆ ಇದೆ. ಅವುಗಳ ಉಚ್ಛಿಷ್ಟ ಸಿಹಿಯಾದ ಮಧುವಾಗಿರುವುದರಿಂದ ಅದು ಇರುವೆಗಳ ಆಹಾರವೂ ಹೌದು. ನಾವು ದನ ಸಾಕಿ ಅವುಗಳಿಂದ

ಹಾಲು ಕರೆದುಕೊಳ್ಳುವಂತೆ ತಮಗೆ ಆಹಾರೋತ್ಪತ್ತಿ ಮಾಡುವ ಈ ಕೀಟಗಳನ್ನು ಚಗಳಿ ಇರುವೆಗಳು ಸಾಕುತ್ತವೆ. ಇದರಿಂದಾಗಿ ಚಗಳಿ ಇರುವೆಗಳು ಲಕ್ಷಾಂತರ ಕೀಟಗಳನ್ನು ಹಿಡಿದು ಕೊಂದು ರೈತರಿಗೆ ಸಹಾಯ ಮಾಡಿದರೂ ಜಿಗಿ ಹುಳುಗಳನ್ನೂ, ತಿಗಣೆಗಳನ್ನೂ ಇವು ಗೂಡು ಮಾಡಿರುವ ಮರಗಿಡಗಳಲ್ಲೆಲ್ಲ ತಂದಿಟ್ಟು ಸಾಕುವುದರಿಂದ ಈ ಉಪದ್ರವಕಾರಿ ಕೀಟಗಳನ್ನು ಗಿಡದಿಂದ ಗಿಡಕ್ಕೆ ಹಬ್ಬಿಸಿ ಸಾಕುವ ವಾಹಕಗಳಾಗಿವೆ.

ಚಗಳಿ ಇರುವೆಗಳಿಗೆ ಇತರೆ ಸಂಘಜೀವಿಗಳಾದ ಕೀಟಗಳಲ್ಲಿರುವಂತೆಯೇ ಒಂದು ರಾಣಿ ಇರುವೆ ಇರುತ್ತದೆ. ಇಡೀ ಇರುವೆಗಳ ಗುಂಪಿಗೆ ಇದೇ ಮೂಲ. ಇದರ ಕೆಲಸ ಸತತವಾಗಿ ಮೊಟ್ಟೆ ಇಡುವುದು. ರಾಣಿ ಇರುವೆಯ ಮೈಯಲ್ಲಿ ಅನೇಕ ಗ್ರಂಥಿಗಳಿಂದ ಹಲವಾರು ಬಗೆಯ ಫಿರಮೋನ್ ರಾಸಾಯನಿಕ ಒಸರುತ್ತದೆ. ಈ ರಾಸಾಯನಿಕಗಳು ಒಂದು ಇರುವೆಯ ಸಮುದಾಯದ ರೂಪುರೇಷೆಗಳನ್ನು ನಿಯಂತ್ರಿಸುವವು. ಗಂಡು ಇರುವೆಗಳು, ಕಾವಲುಗಾರ ಇರುವೆಗಳು, ಸೈನಿಕ ಇರುವೆಗಳು ಸಹ ಈ ರಾಸಾಯನಿಕ ಸಂಯೋಜನೆಯಲ್ಲಿ ರೂಪುಗೊಳ್ಳುವವು.

ರಾಣಿಯ ಮೇಲೆ ಸದಾ ಇರುವೆಗಳು ಮುತ್ತಿಕೊಂಡಿರುತ್ತವೆ. ಅದರ ಮೈಮೇಲೆ ಒಸರುವ ರಾಸಾಯನಿಕವನ್ನು ತಾವು ನೆಕ್ಕುವುದಲ್ಲದೆ ಅದನ್ನು ಸಂಗ್ರಹಿಸಿ ಬೇರೆ ಬೇರೆ ಇರುವೆಗಳಿಗೆ ಒಯ್ದು ತಿನ್ನಿಸುತ್ತವೆ. ತಾವು ಹೊರಗಿನಿಂದ ಸಂಗ್ರಹಿಸಿ ತಂದ ಆಹಾರವನ್ನು ಕೆಲಸಗಾರ ಇರುವೆಗಳು ರಾಣಿಗೆ ತಿನ್ನಿಸುತ್ತಲೂ ಇರುತ್ತವೆ. ಚಗಳಿ ಇರುವೆಗಳದ್ದು ಸ್ತ್ರೀ ಪ್ರಧಾನವಾದ ಸಮಾಜ.



**ಕ್ಷೇತ್ರ :** ಮಾತನಾಡುವುದು.

**ಸಾಮರ್ಥ್ಯ :** ಸನ್ನಿವೇಶ ಮತ್ತು ಘಟನೆಗಳನ್ನು ಕುರಿತು ನಿರರ್ಗಳವಾಗಿ ಹಾಗೂ ಸ್ಪಷ್ಟವಾಗಿ ಮಾತನಾಡುವುದು.

**ಆಶಯ :** ಇಂದು ನಮ್ಮ ಸುತ್ತಮುತ್ತಲು ಅನೇಕ ಕೌತುಕಗಳು ನಡೆಯುತ್ತಿರುತ್ತವೆ. ವಿಚಿತ್ರ ಸಂಗತಿಗಳು ಘಟಿಸುತ್ತಿರುತ್ತವೆ. ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿರುವ ಅನೇಕ ಜೀವಿಗಳ ಜೀವನದಿಂದ ನಾವು ಕಲಿಯಬೇಕಾದುದು ಬಹಳ ಇದೆ. ಅಂತಹ ಕೌತುಕಗಳಲ್ಲಿ ಒಂದಾದ ಚಗಳಿ ಇರುವೆಗಳ ಪರಿಚಯ ಮಾಡಿಕೊಡುವುದು ಇಲ್ಲಿನ ಉದ್ದೇಶ.

## ಲೇಖಕರ ಪರಿಚಯ



ಪೂರ್ಣಚಂದ್ರ ತೇಜಸ್ವಿ (೧೯೩೮–೨೦೦೭) ರಾಷ್ಟ್ರಕವಿ ಕುವೆಂಪುರವರ ಪುತ್ರ. ೧೯೩೮ರ ಸೆಪ್ಟೆಂಬರ್ ೦೮ರಂದು ಶಿವಮೊಗ್ಗದಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆಯಲ್ಲಿ ನೆಲೆಸಿದರು. ತೋಟಗಾರಿಕೆ ಛಾಯಾಗ್ರಹಣ, ಬರವಣಿಗೆ ಮತ್ತು ಚಿತ್ರಕಲೆ ತೇಜಸ್ವಿಯವರ ಹವ್ಯಾಸ.

ಕಥೆ, ಕವಿತೆ, ನಾಟಕ, ಕಾದಂಬರಿ, ವೈಚಾರಿಕ ಲೇಖನಗಳು, ಪರಿಸರ, ಶಿಕಾರಿ ಸಂಬಂಧಿತ ಬರಹಗಳು, ಇತಿಹಾಸ, ತತ್ವಜ್ಞಾನ, ಮಾನವಶಾಸ್ತ್ರ, ಅರ್ಥಶಾಸ್ತ್ರ, ವಿಜ್ಞಾನ ಹೀಗೆ ಹಲವು ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ **ಕರ್ವಾಲೊ, ಅಬಚೂರಿನ ಪೋಸ್ಟಾಫೀಸ್, ಚಿದಂಬರ ರಹಸ್ಯ, ಕಿರಗೂರಿನ ಗಯ್ಯಾಳಿಗಳು, ತಬರನ ಕಥೆ, ಜುಗಾರಿ ಕ್ರಾಸ್, ಮಾಯಾಲೋಕ, ಪರಿಸರದ ಕತೆ, ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್, ಅಣ್ಣನ ನೆನಪು**. ಮೊದಲಾದ ಅನೇಕ ಕೃತಿಗಳನ್ನು ರಚಿಸಿದ್ದಾರೆ. ತೇಜಸ್ವಿಯವರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ ದೊರೆತಿವೆ. ಇವರ ಸಮಗ್ರ ಸಾಹಿತ್ಯಕ್ಕಾಗಿ ಪಂಪ ಪ್ರಶಸ್ತಿ ನೀಡಲಾಗಿದೆ.

## ಓದಿ ತಿಳಿಯಿರಿ

ವರ್ಗ–ಗುಂಪು,ಸಮೂಹ; ವರ್ಣನೆ–ಬಣ್ಣನೆ; ಸಂಕೀರ್ಣ–ಜಟಿಲವಾದ, ನಾನಾವಿಧವಾದ; ಅಂಚು–ಕೊನೆ, ತುದಿ; ಸ್ರವಿಸು–ಒಸರು, ಜಿನುಗು; ಬೆಸೆ–ಕೂಡಿಸು, ಸೇರಿಸು; ಮಾಳಿಗೆ–ಮಹಡಿ; ಹಿಮ್ಮೆಟ್ಟಿಸು–ಹಿಂದಕ್ಕೆ ಸರಿಸು, ಸೋಲಿಸು; ಸಿಂಪರಿಸು–ಚಿಮುಕಿಸು, ಲೇಪಿಸು; ಆಜುಬಾಜು–ಅಕ್ಕಪಕ್ಕ, ನೆರೆಹೊರೆ; ಸನ್ನದ್ಧ–ಸಿದ್ಧವಾಗು; ಉಚ್ಛಿಷ್ಟ–ಎಂಜಲು; ಮಧು–ಸಿಹಿ; ವಾಹಕ–ಸಾಗಿಸುವ; ಒಸರು–ಜಿನುಗು;



## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕೊಟ್ಟೆ ಎಂದರೇನು?

೨. ಚಗಳಿ ಇರುವೆಗಳು ಎಲೆಗಳನ್ನು ಅಂಟಿಸಲು ಏನನ್ನು ಬಳಸುತ್ತವೆ?

೩. ಇವು ತಮ್ಮ ಸಂಗಡಿಗರಿಗೆ ಯಾವ ರಾಸಾಯನಿಕದ ಮೂಲಕ ಸಂದೇಶಗಳನ್ನು ತಲುಪಿಸುತ್ತವೆ?

೪. ಚಗಳಿ ಇರುವೆಗಳಂತೆಯೇ ಸಂಘಜೀವನವನ್ನು ನಡೆಸುವ ಇತರ ಜೀವಿಗಳು ಯಾವುವು?

**ಆ) ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಚಗಳಿ ಇರುವೆಗಳ ಶಿಸ್ತಿಗೆ ಒಂದು ಉದಾಹರಣೆ ಕೊಡಿ.

೨. ಕೆಲಸಗಾರ ಇರುವೆಗಳ ಕೆಲಸವೇನು?

೩. ಚಗಳಿ ಇರುವೆಗಳನ್ನು ಹಿಮ್ಮೆಟ್ಟಿಸುವುದು ಮನುಷ್ಯರಿಗೂ ಏಕೆ ಕಷ್ಟ?

**ಇ) ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಚಗಳಿ ಇರುವೆಗಳು ತಮ್ಮ ಗೂಡನ್ನು ಹೇಗೆ ನಿರ್ಮಿಸುತ್ತವೆ?

೨. ಚಗಳಿ ಇರುವೆಗಳು ಉಪಕಾರಿಗಳೂ ಹೌದು ಉಪದ್ರವಕಾರಿಗಳೂ ಹೌದು. ಈ ಹೇಳಿಕೆಯನ್ನು ವಿವರಿಸಿ

೩. ಕಷ್ಟಕ್ಕೆ ಹೆದರಿ ಓಡಬಾರದು, ತಿರುಗಿ ನಿಂತು ಎದುರಿಸಬೇಕೆಂಬ ಸಂದೇಶವನ್ನು ನಾವು ಇವುಗಳ ಜೀವನದಿಂದ ಹೇಗೆ ಕಲಿಯಬಹುದು?

**ಈ) ಖಾಲಿ ಜಾಗವನ್ನು ಸೂಕ್ತ ಪದಗಳಿಂದ ಭರ್ತಿ ಮಾಡಿ.**

೧. ಚಗಳಿ ಇರುವೆಗಳಿಗೆ ಮೂಲ ______________ ಇರುವೆ.

೨. ದನ ಸಾಕುವ ಗೋಪಾಲಕರನ್ನು ಹೋಲುವ ಇರುವೆಗಳು ______________

೩. ಚಗಳಿ ಇರುವೆಗಳ ಗೂಡನ್ನು ______________ ಎಂದು ಕರೆಯುತ್ತಾರೆ.

೪. ಒಂದು ಚಗಳಿ ಇರುವೆ ಗೂಡಿನಲ್ಲಿ ಸುಮಾರು ______________ ಇರುವೆಗಳು ಇರುತ್ತವೆ.

೫. ಇರುವೆಗಳಿಂದ ಒಸರುವ ರಾಸಾಯನಿಕ ______________

## ಭಾಷಾ ಚಟುವಟಿಕೆ



**ಅ) ಕೆಳಗಿನ ಪಟ್ಟಿಯಲ್ಲಿ ಅನೇಕ ವಾಕ್ಯಗಳನ್ನು ಒಳಗೊಂಡಿರುವ ಪದಗಳಿವೆ. ನಿಮ್ಮಿಂದ ಎಷ್ಟು ವಾಕ್ಯಗಳನ್ನು ಪತ್ತೆ ಹಚ್ಚಲು ಸಾಧ್ಯ? ಪ್ರಯತ್ನಿಸಿ.**

| ರಮೇಶ | ಸೂರ್ಯ | ಕೋಳಿಯು | ವಿಮಲ |
|---|---|---|---|
| ಭಾನುವಾರ | ಮುಂಜಾನೆ | ಬೇಗ | ಏಳಬೇಕು |
| ಕೂಗುತ್ತದೆ | ಬೆಳಕು | ಶಾಲೆಗೆ | ಸಲೀಮ |
| ರಜೆ | ಬೀರುತ್ತದೆ | ಒಳ್ಳೆಯವನು | ಹೋದನು |

**ಮಾದರಿ :** ಮುಂಜಾನೆ ಬೇಗ ಏಳಬೇಕು.

**ಆ) ಕೆಳಗಿನ ವಾಕ್ಯಗಳನ್ನು ಗಮನಿಸಿ ಓದಿ. ಅಲ್ಲಿ ಯಾವ ಭಾವನೆ ಪ್ರಮುಖವಾಗಿ ವ್ಯಕ್ತವಾಗಿದೆ ಎಂಬುದನ್ನು ಗಮನಿಸಿ. ಅಂತಹದ್ದೇ ಇನ್ನೊಂದು ವಾಕ್ಯವನ್ನು ನೀವು ರಚಿಸಿರಿ.**

೧. ಸ್ವಾಮಿ! ಈ ಕುರ್ಚಿಯಲ್ಲಿ ದಯಮಾಡಿ ಕುಳಿತುಕೊಳ್ಳಿ ( ಗೌರವ)____________

೨. ದೇವ ! ದೇವ! ನಮಗೆ ಒಳಿತನ್ನು ಮಾಡು. ( ಪ್ರಾರ್ಥನೆ)____________

೩. ಅಯ್ಯಯ್ಯೋ! ಮಗು ಎಡವಿ ಬಿದ್ದಿದೆ. (ಕಾಳಜಿ)____________

೪. ಭಲೇ ! ಭಲೇ! ನೀನು ನಮ್ಮ ಊರಿನ ಮಾನ ಕಾಪಾಡಿದೆ.( ಮೆಚ್ಚುಗೆ)____________

ಇ) ಯಾವ ರೀತಿ ಓದಿದರೂ ಅರ್ಥ ವ್ಯತ್ಯಾಸವಾಗದ ಪದಗಳನ್ನು ಗಮನಿಸಿ. ನೀವೂ ಇಂತಹ ಪದಗಳನ್ನು ಸಂಗ್ರಹಿಸಿ.

| ಗದಗ | ಕಿಟಕಿ | ನವೀನ |
|---|---|---|
| ವಿಕಟಕವಿ | ಮದ್ರಾಸಿನ ಸಿದ್ರಾಮ | ಕುಟುಕು |

## ಭಾಷಾಭ್ಯಾಸ

### ಲೇಖನ ಚಿಹ್ನೆಗಳು-೧

೧. ವಿರಾಮಗಳು :

ಅ) ಪೂರ್ಣವಿರಾಮ (.)

- ಅರ್ಥಪೂರ್ಣವಾಕ್ಯದ ಕೊನೆಯನ್ನು ಸೂಚಿಸಲು ಬಳಸುವ ಚಿಹ್ನೆ
  ಉದಾ : ನನ್ನ ಊರು ಚೆಂದ.
- ಅಂಕಿ, ಅಕ್ಷರಗಳನ್ನು ಒಂದೊಂದಾಗಿ ಪಟ್ಟಿ ಮಾಡುವಾಗ ಅಂಕಿ, ಅಕ್ಷರದ ನಂತರ ಪೂರ್ಣವಿರಾಮ ಹಾಕಬೇಕು.
  ೧.ಅ.  ೨.ಇ.  ೩.ಉ.
- ಸಂಕ್ಷೇಪಗಳನ್ನು ಬಳಸುವಾಗ ಪ್ರತಿ ಸಂಕ್ಷೇಪಾಕ್ಷರದ ನಂತರ ಪೂರ್ಣವಿರಾಮ ಬಳಸುವುದು ವಾಡಿಕೆ.
  ಕ.ಸಾ.ಪ.(ಕನ್ನಡ ಸಾಹಿತ್ಯ ಪರಿಷತ್ತು)  ಕ್ರಿ.ಪೂ.(ಕ್ರಿಸ್ತ ಪೂರ್ವ)
- ಕೆಲವು ಸಂಕ್ಷೇಪಗಳನ್ನು ಪೂರ್ಣವಿರಾಮವಿಲ್ಲದೇ ಬರೆಯುವುದೂ ರೂಢಿಯಲ್ಲಿದೆ.
  ಕುವೆಂಪು (ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ)  ವಿಸೀ (ವಿ.ಸೀತಾರಾಮಯ್ಯ)
  ಚಂಪಾ(ಚಂದ್ರಶೇಖರ ಪಾಟೀಲ)  ಪಾಪು(ಪಾಟೀಲ ಪುಟ್ಟಪ್ಪ)

ಆ) ಅಲ್ಪವಿರಾಮ (,)

- ಮಾತಿನಲ್ಲಿ ಧ್ವನಿವಿರಾಮ ಇರುವ ಕಡೆ, ವಾಕ್ಯಗಳಲ್ಲಿ ಅರ್ಥಸ್ಪಷ್ಟತೆಗಾಗಿ, ದೀರ್ಘ ವಾಕ್ಯದಲ್ಲಿ ಅರ್ಥದ ಗೊಂದಲವನ್ನು ಹೋಗಲಾಡಿಸಲು, ಸರಿಯಾದ ಅರ್ಥ ತಿಳಿಯುವಂತೆ ಮಾಡಲು ಬಳಸುವ ಚಿಹ್ನೆ
  ಉದಾ. ಬಲಮುರಿ ಪುಟ್ಟದಾದ, ಸುಂದರ, ಆಕರ್ಷಣೀಯ ಸ್ಥಳ.
- ಸಂಬೋಧನೆಯ ನಂತರ ಅಲ್ಪವಿರಾಮ ಬಳಸಬೇಕು.
  ಮಾನ್ಯರೆ, ನಿಮ್ಮ ಪತ್ರ ತಲುಪಿದೆ.
  ವಿದ್ಯಾರ್ಥಿ ವಿದ್ಯಾರ್ಥಿನಿಯರೇ, ಬರೆಯಲು ಸಿದ್ಧವಾಗಿರಿ.

### ಇ) ಅರ್ಧ ವಿರಾಮ (;)

- ಇದು ಅಲ್ಪವಿರಾಮದಂತೆ ಬಳಕೆಯಾದರೂ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಬಳಕೆಯಾಗುತ್ತದೆ. ವಾಕ್ಯ ಅಥವಾ ವಾಕ್ಯಾಂಶ ದೊಡ್ಡ ವಾಕ್ಯವೊಂದರ ಭಾಗವಾಗಿದ್ದು, ಅರ್ಥಪೂರ್ಣತೆ ಹೊಂದಿ ಮುಂದುವರೆಯುವಂತಿದ್ದರೆ ಅಂತಹ ವಾಕ್ಯ ಅಥವಾ ವಾಕ್ಯಾಂಶದ ನಂತರ ಅರ್ಧವಿರಾಮ ಬಳಸುವುದು ರೂಢಿ.

**ಉದಾ:** ಸಾಲು ಮರದ ತಿಮ್ಮಕ್ಕ ಮರಗಳನ್ನು ಬೆಳೆಸಿದರು; ಈಗ ಅವರಿಗೆ ವಯಸ್ಸಾಗಿದೆ; ಮರವನ್ನು ನೋಡುವುದರಲ್ಲಿ ಅವರಿಗೆ ಸಂತೋಷ; ಮುಂದೆ ಹೀಗೆ ಮರಗಳನ್ನು ನೆಡುವವರು ಯಾರು ಎಂಬುದೇ ಯೋಚನೆ; ಮುಂದಿನ ಜನಾಂಗ ಈ ಬಗ್ಗೆ ಚಿಂತಿಸಬೇಕು.

### ಈ) ವಿವರಣ ವಿರಾಮ (:)

- ವಿಷಯಕ್ಕೆ ವಿವರಣೆ ನೀಡಲು ವಿವರಣ ವಿರಾಮ ಬಳಕೆಯಾಗುತ್ತದೆ. ಇದು ಪೂರ್ಣವಿರಾಮದಂತೆ ವಾಕ್ಯದ ಕೊನೆಯಲ್ಲಿ ಬಳಕೆಯಾಗುತ್ತದೆ.
  ನಗರ ಜೀವನ ಹಾಳಾಗಲು ಕಾರಣಗಳು : ವಾಯು ಮಾಲಿನ್ಯ, ಶಬ್ದ ಮಾಲಿನ್ಯ, ಕಾನೂನು ಬಾಹಿರವಾಗಿ ನಡೆಯುವ ನಿರ್ಮಾಣಗಳು ಮುಂತಾದುವು.
- ಕೆಲವು ನಮೂನೆ, ವೈಯಕ್ತಿಕ ವಿವರ ಮುಂತಾದ ಬಳಕೆಯಲ್ಲಿ ವಿವರಣವಿರಾಮ ನೀಡಬೇಕು.

  ಹೆಸರು: ಹುಟ್ಟಿದ ದಿನಾಂಕ:

  ಸ್ಥಳ : ಸೂಚನೆ:



### ಸಮಾನಾಂತರ ಚಟುವಟಿಕೆ

- ನಿಮ್ಮ ಮನೆಯ ಸುತ್ತಮುತ್ತ ಇರುವ ವಿವಿಧ ಬಗೆಯ ಕೀಟಗಳ ಜೀವನಕ್ರಮವನ್ನು ನಿರಂತರವಾಗಿ ಗಮನಿಸಿ ದಾಖಲಿಸಿ.
- ನೀವು ಇರುವೆಗಳ ಜೀವನದಿಂದ ಏನನ್ನು ಕಲಿಯಬಯಸುತ್ತೀರಿ?
- ಸಾಮಾನ್ಯವಾಗಿ ಇರುವೆಗಳು ಎಲ್ಲೆಲ್ಲಿ ಜೀವಿಸುತ್ತವೆ? ಅವುಗಳ ಹೆಸರುಗಳೇನು? ಎಷ್ಟು ಇರುವೆಗಳು ಆ ಗೂಡಿನಲ್ಲಿರಬಹುದೆಂಬುದನ್ನು ಅಂದಾಜು ಮಾಡಿ. (ಅವಶ್ಯಕತೆ ಬಿದ್ದಲ್ಲಿ ಹಿರಿಯರ ಸಹಾಯ ಪಡೆಯಿರಿ.)
- ನಿಮ್ಮ ಮನೆಯಲ್ಲಿ ಆಹಾರವಾಗಿ ಬಳಸುವ ವಿವಿಧ ವಸ್ತುಗಳನ್ನು ಪಟ್ಟಿಮಾಡಿ ಸ್ನೇಹಿತರೊಂದಿಗೆ ಹಂಚಿಕೊಳ್ಳಿ.

## ಪೂರಕ ಪಾಠ

(ಈ ಪದ್ಯವನ್ನು ತರಗತಿಯಲ್ಲಿ ಸಾಮೂಹಿಕವಾಗಿ ಹಾಡಿರಿ.)

# ಇರುವೆ

ಎಲ್ಲಾ ಕಡೆಯಲಿ ಕಾಣುವ ಇರುವೆ
ಮೂಸುತ ತಿಂಡಿಯ ಹುಡುಕುವ ಇರುವೆ
ಬೆಲ್ಲವನೆಲ್ಲವ ಮೆಲ್ಲುವ ಇರುವೆ
ಎಲ್ಲಾ ಕಡೆಯಲಿ ನೀನಿರುವೆ ।

ಕಣ್ಣುಗಳಿಲ್ಲದೆ ಕಾಣುವ ಇರುವೆ
ಸಾಹಸದಿಂದಲಿ ಜೀವಿಪ ಇರುವೆ
ಒಗ್ಗಟ್ಟಿನ ಗುಟ್ಟನು ನೀನರಿತಿರುವೆ
ಎಲ್ಲಾ ಕಡೆಯಲಿ ನೀನಿರುವೆ ।

ಕಾಲಕಾಲದಿ ಗೇಯುವ ಇರುವೆ
ಗುಟ್ಟಿನ ತಿಂಡಿಯ ಕದಿಯುವ ಇರುವೆ
ಗೂಡಿಗೆ ತಿಂಡಿಯ ಸಾಗಿಪ ಇರುವೆ
ಎಲ್ಲಾ ಕಡೆಯಲಿ ನೀನಿರುವೆ ।

ಕೆಂಪು ಬಣ್ಣದಾ ಮರದಾ ಇರುವೆ
ಕಪ್ಪು ಬಣ್ಣದಾ ಕಚ್ಚುವ ಇರುವೆ
ಕಂದು ಬಣ್ಣದಾ ಬೆಲ್ಲದ ಇರುವೆ
ಎಲ್ಲಾ ಕಡೆಯಲಿ ನೀನಿರುವೆ ।

ತತ್ತಿಯ ಹೊತ್ತಿಹ ಗುಂಪಿರುವೆ
ಕಣ್ಣಿಗೆ ಕಾಣದ ಸಣ್ಣಿರುವೆ
ದೊಡ್ಡತಲೆಯ ಯಜಮಾನಿರುವೆ
ಎಲ್ಲಾ ಕಡೆಯಲಿ ನೀನಿರುವೆ ।

–ಸಿದ್ದಕಟ್ಟೆ ಚಂದ್ರರಾಜ ಶೆಟ್ಟಿ
(ತಟ್ಟು ಚಪ್ಪಾಳೆ ಪುಟ್ಟಮಗು)

## ವ್ಯಾಕರಣ

### ವಿಭಕ್ತಿ ಪ್ರತ್ಯಯ

**ಕೆಳಗಿನ ವಾಕ್ಯಗಳನ್ನು ಓದಿ ವ್ಯತ್ಯಾಸ ಗುರುತಿಸಿ.**

ಅ) ಇರುವೆ**ಯು** ಬಂದಿತು. (ಇರುವೆ+ಉ=ಇರುವೆಯು)

ಆ) ಇರುವೆ ಬಂದಿತು.

**ಮೇಲಿನ ವಾಕ್ಯಗಳಲ್ಲಿ ಎರಡೂ ವಾಕ್ಯಗಳೂ ಸರಿ. ಆದರೆ,**

**(ಅ)** ಎಂಬ ವಾಕ್ಯದಲ್ಲಿರುವ **ಯು** ಎಂಬ ಅಕ್ಷರವನ್ನು ಸೇರಿಸಲಾಗಿದೆ.

**(ಆ)** ಎಂಬ ವಾಕ್ಯದಲ್ಲಿ **'ಯು'** ಅನ್ನು ಬಿಡಲಾಗಿದೆ. **(ಆ)** ಎಂಬ ವಾಕ್ಯದಲ್ಲಿ **'ಯು'** ಅನ್ನು ಬಿಟ್ಟರೂ ಅರ್ಥ ವ್ಯತ್ಯಾಸವಾಗುವುದಿಲ್ಲ ಎಂಬುದನ್ನು ಗಮನಿಸಿ.

(ಕ) ಇರುವೆ **ಗೂಡನ್ನು** ಬಂದಿತು. (ಗೂಡು + ಅನ್ನು =ಗೂಡನ್ನು)

(ಗ) ಇರುವೆ **<u>ಗೂಡಿನಿಂದ</u>** ಬಂದಿತು. (ಗೂಡು+ನ+ಇಂದ=ಗೂಡಿನಿಂದ)

(ಚ) ಇರುವೆ **<u>ಗೂಡಿಗೆ</u>** ಬಂದಿತು. (ಗೂಡು+ಇಗೆ=ಗೂಡಿಗೆ)

(ಜ) ಇರುವೆ **<u>ಗೂಡಿನಲ್ಲಿ</u>** ಬಂದಿತು. (ಗೂಡು+ನ+ಅಲ್ಲಿ=ಗೂಡಿನಲ್ಲಿ, ಇದನ್ನು ಗೂಡು+ಅಲ್ಲಿ=ಗೂಡಲ್ಲಿ ಎಂದೂ ಬಳಸಬಹುದು)

ಮೇಲಿನ ನಾಲ್ಕು ವಾಕ್ಯಗಳಲ್ಲಿ (ಕ) ಮತ್ತು (ಜ) ವಾಕ್ಯಗಳಲ್ಲಿ ಅರ್ಥ ಸ್ಪಷ್ಟವಾಗುವುದಿಲ್ಲ. ಇಂಥ ವಾಕ್ಯ ಸರಿಯಲ್ಲ. ಈ ವಾಕ್ಯವನ್ನು ಬದಲಾಯಿಸಿ ಬರೆಯೋಣ.

(ಕ) ಇರುವೆ **ಗೂಡನ್ನು** ನೋಡಿತು.

(ಚ) ಇರುವೆ **<u>ಗೂಡಿನಲ್ಲಿ (ಗೂಡಲ್ಲಿ)</u>** ಇದೆ.

ಈಗ ಈ ವಾಕ್ಯಗಳು ಅರ್ಥವತ್ತಾಗಿ ಕಾಣಿಸುತ್ತವೆ.

ಮೇಲಿನ ನಾಲ್ಕು ವಾಕ್ಯಗಳಲ್ಲಿ (ಗ) ಮತ್ತು (ಚ) ವಾಕ್ಯಗಳಲ್ಲಿ ಅರ್ಥ ಸ್ಪಷ್ಟವಾಗುತ್ತದೆ. ಆದರೆ ಈ ವಾಕ್ಯಗಳಲ್ಲಿ ಬಳಕೆಯಾಗಿರುವ ಗೆ ಮತ್ತು ಇಂದ ಇವುಗಳನ್ನು ಸೇರಿಸಿರುವುದರಿಂದ ಅರ್ಥ ವ್ಯತ್ಯಾಸವಾಗಿದೆ. ಇರುವೆ **<u>ಗೂಡಿನಿಂದ</u>** ಬಂದಿತು. (ಹೊರಗೆ ಬಂದಿತು) ಇರುವೆ **<u>ಗೂಡಿಗೆ</u>** ಬಂದಿತು (ಒಳಗೆ ಬಂದಿತು) ಎಂಬ ಅರ್ಥವಾಗುತ್ತದೆ.

- ಕೊಟ್ಟೆ ಕಟ್ಟಲು **<u>ಕೊಂಬೆಗಳನ್ನು</u>** ಬಗ್ಗಿಸುತ್ತವೆ.
- ರಾಜು **<u>ಗಿಡವನ್ನು</u>** ನೆಟ್ಟನು.

- ಕೆಲಸಗಾರ ಇರುವೆಗಳು **ರಾಣಿಗೆ** ಆಹಾರ ತಿನ್ನಿಸುತ್ತವೆ.
- ಕಮಲ **ಮನೆಗೆ** ಹೋದಳು.
- ಜಗಳಿ ಇರುವೆಗಳು **ಮರದಲ್ಲಿ** ಕೊಟ್ಟೆ ಕಟ್ಟುತ್ತವೆ.
- ಪೂರ್ಣಿಮ **ಪೇಟೆಯಲ್ಲಿ** ಆಟಿಕೆ ಕೊಂಡಳು.

**ಗಮನಿಸಿ :**

ಅ. ಇರುವೆಗಳು ಲಾರ್ವಾವನ್ನು ಬಾಯಿಯಿಂದ ಸ್ರವಿಸುತ್ತವೆ.

ಆ. ರಾಜು ಮನೆಯಿಂದ ಬಂದನು.

ಮೇಲಿನ ವಾಕ್ಯಗಳಲ್ಲಿ ಗೆರೆ ಎಳೆದಿರುವ ಪದಗಳನ್ನು ಗಮನಿಸಿ. ಮೊದಲೆರಡು ವಾಕ್ಯಗಳಲ್ಲಿ **ಬಾಯಿಯಿಂದ** ಮತ್ತು **ಮನೆಯಿಂದ** ಪದಗಳನ್ನು ನೋಡಿದಾಗ ಬಾಯಿ ಮತ್ತು ಮನೆ ಎಂಬ ಮೂಲ ಪದಗಳಿಗೆ 'ಇಂದ' ಎಂಬ ಪ್ರತ್ಯಯ ಸೇರಿರುವುದು ಕಂಡು ಬರುತ್ತದೆ. ಇಂದ ಎಂಬ ಪ್ರತ್ಯಯವನ್ನು ಬಿಟ್ಟು ವಾಕ್ಯ ಓದಿದರೆ ಲಾರ್ವಾಗಳು ನೂಲನ್ನು ಬಾಯಿ ಸ್ರವಿಸುತ್ತವೆ, ರಾಜು ಮನೆ ಬಂದನು ಎಂದಾಗುತ್ತವೆ. ಇದರಿಂದ ವಾಕ್ಯ ನಮಗೆ ಸರಿಯಾಗಿ ಅರ್ಥವಾಗುವುದಿಲ್ಲ.

ಹೀಗೆಯೇ ಸುಮ ಪೇಟೆ ಬಟ್ಟೆ ತಂದಳು ಎಂದರೆ ನಮಗೆ ಈ ವಾಕ್ಯ ಸರಿಯಾಗಿ ಅರ್ಥವಾಗುವುದಿಲ್ಲ. ಇದಕ್ಕೆ ಕೆಲವು ಅಕ್ಷರಗಳನ್ನು ಸೇರಿಸಿ ಸುಮ ಪೇಟೆಯಿಂದ ಬಟ್ಟೆಯನ್ನು ತಂದಳು ಎಂದು ಓದಿದಾಗ ನಮಗೆ ವಾಕ್ಯವು ಸಂಪೂರ್ಣವಾಗಿ ಅರ್ಥವಾಗುತ್ತದೆ.

ಈ ರೀತಿ ವಾಕ್ಯಗಳಲ್ಲಿ ಬಳಕೆಯಾಗುವ ವಿವಿಧ ಪದಗಳ ನಡುವೆ ಪರಸ್ಪರ ಸಂಬಂಧ ಕಲ್ಪಿಸುವ ಶಬ್ದಗಳೇ 'ವಿಭಕ್ತಿ ಪ್ರತ್ಯಯಗಳು' ಪ್ರಮುಖವಾದ ಪ್ರತ್ಯಯಗಳು ಹೀಗಿವೆ.

೧. ಅನ್ನು　　　　೨. ಇಂದ

೩. ಗೆ　　　　೪. ಅಲ್ಲಿ

ಇದೇ ರೀತಿ ಪಾಠದಲ್ಲಿ ಬಂದಿರುವ ಈ ವಿಭಕ್ತಿ ಪ್ರತ್ಯಯ ಸಹಿತವಾಗಿರುವ ಪದಗಳನ್ನು ಪಟ್ಟಿ ಮಾಡಿ.



**ಚೆನ್ನುಡಿ**

**'ಬೇರೆಯವರ ವಿಚಾರಗಳನ್ನು, ಬೇರೆಯವರ ಧರ್ಮವನ್ನು ಸಹಿಸಿಕೊಂಡು ಬಾಳಲು ಸಾಧ್ಯವಾದಲ್ಲಿ ಅದು ಕಸವರ (ಚಿನ್ನ,ಸಂಪತ್ತು). ಹೀಗಲ್ಲದೆ ಕಸ ಮತ್ತು ಕಸವರ ಎರಡೂ ಒಂದೇ ಎಂದು ತಿಳಿದವರು ದುಃಖವನ್ನು ಅನುಭವಿಸುತ್ತಾರೆ.** (ಹೊಸಗನ್ನಡ ಭಾವಾನುವಾದ)

–ಶ್ರೀವಿಜಯ (ಈತ ಕ್ರಿ ಶ. ೯ನೆಯ ಶತಮಾನದಲ್ಲಿ ನೃಪತುಂಗನ ಆಸ್ಥಾನದಲ್ಲಿದ್ದ ವಿದ್ವಾಂಸ. ಈತ ಬರೆದಿರುವ 'ಕವಿರಾಜಮಾರ್ಗ' ಎಂಬ ಕೃತಿಯು ಕನ್ನಡದ ಮೊದಲ ಶಾಸ್ತ್ರಗ್ರಂಥವಾಗಿದೆ)

# ಸುಖ

–ಪು. ತಿ. ನರಸಿಂಹಾಚಾರ್

**ಪ್ರವೇಶ :** ಹಣವಿದ್ದರೆ ಸುಖ ಎಂಬುದು ಕೆಲವರ ಅನಿಸಿಕೆ. ನಿದ್ದೆ ಮಾಡುವುದು ಸುಖ ಎಂಬುದು ಮತ್ತೆ ಕೆಲವರ ಅನಿಸಿಕೆ. ಸುಖ ಎನ್ನುವುದು ಮನಸ್ಸಿನ ಸ್ಥಿತಿಯೇ ಹೊರತು ಹೊರಗಿಂದ ಬರುವಂತಹುದಲ್ಲ. ಸುಖ ಎಂದರೇನು ಎಂಬುದನ್ನು ಅನುಭವಿಸಿಯೇ ತಿಳಿಯಬೇಕು. ನಮ್ಮ ಓದಿನಲ್ಲಿ, ನಮ್ಮ ಕೆಲಸಕಾರ್ಯಗಳಲ್ಲಿ, ನಮ್ಮ ಗೆಳೆತನವನ್ನು ಅನುಭವಿಸುವಲ್ಲಿ, ನಾವು ಆಡುವ ಆಟದಲ್ಲಿ, ನೋಡುವ ನೋಟದಲ್ಲಿ ಸುಖವನ್ನು ಕಾಣಬೇಕು.

ಕೆಸರಿನ ಹೊಂಡದಿ ಮೈಗಳನದ್ದುತ<br>
ಮುಸುಡನೆತ್ತಿ ಹಾಯಾಗಿದೆ ಎಮ್ಮೆ

ಮುಳ್ಳಿನ ಹೊದರೊಳಗೋತಿಕೇತಗೆ<br>
ಬಣ್ಣವ ಮೆರೆಸುವುದೇ ಹೆಮ್ಮೆ.



ಕಡು ಇಕ್ಕಟ್ಟಿನ ಹುತ್ತದ ಬಾಯೊಳು<br>
ಹೆಡೆಯಾಡಿಸೆ ಹಾವಿಗೆ ಚೆಂದ

ಬೂದಿಯ ಮೇಗಡೆ ಹೊರಳಾಡುವುದೇ<br>
ಕತ್ತೆಗೆ ಬಿಡುವಿನ ಆನಂದ



ಬಚ್ಚಲ ನೀರನು ಲೊಚಲೊಚ ನೆಕ್ಕುತ<br>
ನಾಯಿ ಪಡುತಿದೆ ಸೊದೆಕುಡಿತ<br>
ಊರಿನ ನಾರುವ ಕೇರಿ ಕೇರಿಗಳ<br>
ಹೊಲಸಿನತ್ತ ಹಂದಿಗೆ ತುಡಿತ



ಯಾರಾರಿಗೆ ಏನೆಂಥದು ಹಿತವೋ<br>
ಅವರವರಿಗೆ ಅದೆ ಅದೆ ವಿಹಿತ<br>
ಒಂದನು ಹೊಗಳೆ ಒಂದನು ತೆಗಳೆ<br>
ಬರಿದೊಡ್ಡಸ್ತಿಕೆ ಮತ್ತೇನು?

ತುಷ್ಟಿಯನೀ ತೆರ ಬಟ್ಟೆಯಿಳಿಸುವೀ<br>
ಸುಖಿಗಳ ಸಖವರಿವುದೆ ಜಾಣು.

**ಕ್ಷೇತ್ರ :** ಓದುವುದು.

**ಸಾಮರ್ಥ್ಯ : ಓದಿದ ವಿಷಯಗಳ ಬಗ್ಗೆ ಆಲೋಚಿಸಿ ತಾರ್ಕಿಕವಾಗಿ ತೀರ್ಮಾನಿಸುವುದು.**

**ಆಶಯ :** ಸುಖ ಎಂದರೇನು ? ಈ ಪ್ರಶ್ನೆಗೆ ಉತ್ತರಿಸುವುದು ಸುಲಭವಲ್ಲ. ಸುಖ ಎನ್ನುವುದು ಅನುಭವದಿಂದ ಬರುವಂತಹುದು. ಕೆಲವರಿಗೆ ಹಣದಿಂದ, ಮತ್ತೆ ಕೆಲವರಿಗೆ ಒಡವೆ ವಸ್ತ್ರ ಗಳಿಂದ, ಕೆಲವರಿಗೆ ತಿಂಡಿ ತಿನಿಸುಗಳಿಂದ, ಕೆಲವರಿಗೆ ಮಲಗುವುದರಿಂದ ಕೆಲವರಿಗೆ ಅಧಿಕಾರದಿಂದ, ಕೆಲವರಿಗೆ ವಿದ್ಯೆಯಿಂದ, ಕೆಲವರಿಗೆ ಧ್ಯಾನದಿಂದ ಹೀಗೆ ಹಲವರಿಗೆ ಹಲವುರೀತಿಯಲ್ಲಿ ಸುಖ ಸಿಗುವುದೆಂಬ ಕಲ್ಪನೆಯಿರುತ್ತದೆ. ಆದರೂ ಸುಖ ಎನ್ನುವುದು ಇದ್ಯಾವುದರಿಂದಲೂ ಸಿಗದಿರಬಹುದು. ಆದುದರಿಂದ ಸುಖ ಎನ್ನುವುದು ಅನುಭವ ಮೂಲವಾದದ್ದು. ಕೆಲವರಿಗೆ ಸುಖ ಸಿಗುವ ಸ್ವರೂಪವನ್ನು ನೋಡಿದಾಗ ಇತರರಿಗೆ ಅಸಹ್ಯವಾಗಬಹುದು. ಆದರೆ ಸುಖ ಪಡುತ್ತಿರುವವರಿಗೆ ಅವರು ಯಾವುದರಲ್ಲಿ ಸುಖ ಕಾಣುತ್ತಾರೋ ಅದರಲ್ಲಿ ಸುಖವನ್ನು ಅನುಭವಿಸುತ್ತಿರುತ್ತಾರೆ. ಅಂದರೆ, ಸುಖ ಎಂಬುದು ಎಲ್ಲಿಂದಲೋ ಬರುವುದಲ್ಲ, ಅದು ನಮಗೆ ನಾವೇ ಕಂಡುಕೊಳ್ಳುವುದು.)

## ಲೇಖಕರ ಪರಿಚಯ



ಪು.ತಿ.ನ. ಎಂಬ ಸಂಕ್ಷಿಪ್ತ ನಾಮದಿಂದಲೇ ಪ್ರಸಿದ್ಧರಾದ ಪುರೋಹಿತ ತಿರುನಾರಾಯಣ ಅಯ್ಯಂಗಾರ್ ನರಸಿಂಹಾಚಾರ್ ಅವರು ೧೯೦೫ರಲ್ಲಿ ಮಂಡ್ಯ ಜಿಲ್ಲೆಯ ಮೇಲುಕೋಟೆಯಲ್ಲಿ ಜನಿಸಿದರು. ಕನ್ನಡ ನವೋದಯ ಸಂದರ್ಭದ ಪ್ರಮುಖ ಕವಿಗಳಲ್ಲೊಬ್ಬರು. ಕಛೇರಿ ನಿರ್ವಹಣೆ ಮತ್ತು ಗೋಸಂರಕ್ಷಣೆಯ ನಿರೀಕ್ಷಕರಾಗಿ ವೃತ್ತಿಜೀವನ ಆರಂಭಿಸಿದರು. ಮೈಸೂರಿನ ವಿಶ್ವವಿದ್ಯಾನಿಲಯದ ಇಂಗ್ಲಿಷ್ – ಕನ್ನಡ ನಿಘಂಟಿನ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು.



'ಶ್ರೀ ಹರಿಚರಿತೆ' ಮಹಾಕಾವ್ಯ ರಚಿಸಿರುವ ಪು.ತಿ.ನ. ಭಾವಗೀತೆ, ಗೀತನಾಟಕ, ಸಂಗೀತ ರೂಪಕ, ಭಾವನಾಚಿತ್ರ, ರಸಚಿತ್ರ, ಪ್ರಬಂಧ, ವಿಚಾರ ಸಾಹಿತ್ಯ, ಸಣ್ಣಕತೆ, ಗದ್ಯ ನಾಟಕ ಹೀಗೆ ಹಲವು ಪ್ರಕಾರಗಳಲ್ಲಿ ಕೃಷಿ ನಡೆಸಿದ್ದಾರೆ. ಹಣತೆ, ಮಾಂದಳಿರು, ಶಾರದ ಯಾಮಿನಿ, ಗಣೇಶದರ್ಶನ, ರಸ ಸರಸ್ವತಿ, ಮಲೆ ದೇಗುಲ, ಇರುಳಮೆರುಗು ಇವರ ಪ್ರಮುಖ ಕವನ ಸಂಕಲನಗಳು. ಇವರಿಗೆ ಕೇಂದ್ರ ಸಾಹಿತ್ಯ ಅಕಾಡಮಿ, ಕರ್ನಾಟಕ ಸರಕಾರದ ಪಂಪ ಪ್ರಶಸ್ತಿ ಮುಂತಾದ ಪ್ರಶಸ್ತಿಗಳು ಲಭಿಸಿವೆ.

ಪು.ತಿ.ನ ಅವರ **'ಇರುಳಮೆರಗು'** ಸಂಕಲನದಿಂದ **'ಸುಖ'** ಕವಿತೆಯನ್ನು ಆರಿಸಲಾಗಿದೆ.

## ಓದಿ ತಿಳಿಯಿರಿ

ಹೊಂಡ–ಹಳ್ಳ, ತಗ್ಗು, ಸಣ್ಣಕೆರೆ; ಮುಸುಡು–ಮುಖ; ಹೊದರು–ಪೊದೆ; ಓತಿಕೇತ–ಗೋಸುಂಬೆ,ಊಸರವಳ್ಳಿ, ಆಗಾಗ್ಗೆ ಬಣ್ಣ ಬದಲಾಯಿಸುವ ಒಂದು ಪ್ರಾಣಿ; ಮೆರೆಸು–ಕಾಣುವಂತೆ ಮಾಡು ; ಕಡು ಇಕ್ಕಟ್ಟು–ಅತಿಕಿರಿದಾದ ಜಾಗ; ಮೇಗಡೆ–ಮೇಲುಗಡೆ; ಸೊದೆ–ಅಮೃತ; ನಾರುವ

ಕೇರಿ–ದುರ್ವಾಸನೆ ಹೊಡೆಯುವ ಬೀದಿ; ವಿಹಿತ–ಯೋಗ್ಯ; ತುಷ್ಟಿ–ತೃಪ್ತಿ, ಆನಂದ; ಬಟ್ಟಿಯಿಳಿಸು–ಸಾರ ಸಂಗ್ರಹಿಸು; ಜಾಣು–ಜಾಣತನ, ಬುದ್ಧಿವಂತಿಕೆ; ಸಖ–ಸ್ನೇಹ, ಗೆಳೆತನ.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ :**

೧. ಎಮ್ಮೆ ಎಲ್ಲಿದೆ ?

೨. ಕತ್ತೆಗೆ ಆನಂದ ಯಾವುದು ?

೩. ಬಚ್ಚಲ ನೀರು ನಾಯಿಗೆ ಎಂತಹ ಸುಖ ತಂದಿದೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಒಂದು/ಎರಡು ವಾಕ್ಯಗಳಲ್ಲಿ ಉತ್ತರಿಸಿರಿ :**

೧. ಹಾವು ಎಲ್ಲಿದೆ ಮತ್ತು ಏನು ಮಾಡುತ್ತಿದೆ?

೨. ಓತಿಕೇತ ಎಲ್ಲಿರುತ್ತದೆ?

೩. ಹೊಗಳುವುದರಿಂದ ಲಾಭವೇನು?

**ಇ. ಬಿಟ್ಟ ಸ್ಥಳವನ್ನು ಸೂಕ್ತವಾದ ಪದದಿಂದ ತುಂಬಿರಿ :**

೧. ಕೆಸರಿನ ಹೊಂಡದಿ ಮೈಗಳನದ್ದುತ ಹಾಯಾಗಿರುವ ಪ್ರಾಣಿ ____________.

೨. ಓತಿಕೇತಗೆ ಬಣ್ಣವ ಮರೆಸುವುದೇ ____________.

೩. ಹುತ್ತದ ಬಾಯೊಳು ____________ ಹಾವಿಗೆ ಚೆಂದ.

೪. ಊರಿನ ನಾರುವ ಕೇರಿ ಕೇರಿಗಳ ಹೊಲಸಿನತ್ತ ಹಂದಿಗೆ ____________.



## ಚಟುವಟಿಕೆ

ನಿಮಗೆ ಯಾವುದು ಸುಖ. ನಿನ್ನ ಸ್ನೇಹಿತರೊಂದಿಗೆ ಈ ವಿಷಯವನ್ನು ಚರ್ಚಿಸಿ.

## ಭಾಷಾಭ್ಯಾಸ

**ಅ) ಕೆಳಗೆ ನೀಡಿರುವ ವಾಕ್ಯಗಳನ್ನು ಎಡೆಬಿಡದೆ ಓದಿ, ನಂತರ ವೇಗವಾಗಿ ಓದುವುದನ್ನು ಅಭ್ಯಾಸ ಮಾಡಿ.**

೧. ಗಿಡ ತಳಿರೊಡೆದೆರಡೆಲೆಯಾಯ್ತು.

೨. ಸದ್ದುಗಿದ್ದು ಮಾಡಿಗೀಡಿದರೆ ಮುದ್ದುಗಿದ್ದಾಗಿರುವ ಗುದ್ದುಗಿದ್ದುಗಳು ಬಿದ್ದುಗಿದ್ದಾವು.

೩. ತರಿಕೆರೆ ಕೆರೆಯೇರಿ ಮೇಲೆ ಮೂರು ಕರಿಕುರಿಮರಿ ಮೇಯುತಿತ್ತು.
೪. ಬಸಮ್ಮನ ಮನೆಯಲ್ಲಿ ಬಿಸಿಬಿಸಿ ಗಸಗಸೆ ಪಾಯಸದ ವಾಸನೆ.

## ಪೂರಕ ಪಾಠ

ಡೊಂಕು ಬಾಲದ ನಾಯಕರೆ ನೀವೇನೂಟವ ಮಾಡಿದಿರಿ ॥ಪ॥

ಕಣಕ ಕುಟ್ಟೋ ಅಲ್ಲಿಗೆ ಹೋಗಿ ಹಣಕಿ ಇಣಕಿ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಹೊಡೆದರೆ ಕುಂಯ್ ಕುಂಯ್ ರಾಗವ ಪಾಡುವಿರಿ ॥೧॥

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಲಿ ಹೊಡೆದರೆ ಕುಂಯ್ ಕುಂಯ್ ರಾಗವ ಪಾಡುವಿರಿ॥೨॥

ಹಿರಿಯ ಹಾದಿಲಿ ಓಡುವಿರಿ ಕರಿಯ ಬೂದಿಲಿ ಹೊರಳುವಿರಿ
ಸಿರಿ ಕಾಗಿನೆಲೆಯಾದಿಕೇಶವನ ಸ್ಮರಿಸದವರ ಗತಿ ತೋರುವಿರಿ ॥೩॥

– **ಕನಕದಾಸ**

(ಆಧಾರ : ಕನಕ ಸಾಹಿತ್ಯ ದರ್ಶನ ಸಂಪುಟ–೪; ಸಂಪಾದಕರು:ಸುಧಾಕರ; ಪ್ರಕಾಶಕರು : ಕನ್ನಡ ಮತ್ತು ಸಂಸ್ಕೃತಿ ಇಲಾಖೆ)



### ಓದಿ ತಿಳಿಯಿರಿ

ಕಣಕ–ನಾದಿದ ಗೋದಿ ಹಿಟ್ಟು, ಹಣಕಿ–ಮರೆಯಲ್ಲಿ ನಿಂತು ನೋಡು,

ವಿವರಣೆ : ಮನುಷ್ಯನ ಡೊಂಕುತನವನ್ನು ನಾಯಿಯ ರೂಪಕದ ಮೂಲಕ ಚಿತ್ರಿಸಲಾಗಿದೆ ಮನಸ್ಸಿನ ಚಂಚಲತೆ, ಆಸೆ, ಭಗವಂತನನ್ನು ಸ್ಮರಿಸದೇ ಇರಲು ಕಾರಣವಾಗಿದೆ ಎಂಬ ಆಶಯ ಈ ಕೀರ್ತನೆಯಲ್ಲಿದೆ.

### ಚೆನ್ನುಡಿ

**'ದುಃಖಕ್ಕೆ ಸಿಕ್ಕಷ್ಟು ಬೇಗ ಕಾರಣ ಸುಖಕ್ಕೆ ಸಿಗುವುದಿಲ್ಲ'**

–ಪಿ. ಲಂಕೇಶ (ಕನ್ನಡ ಸಾಹಿತಿ, ಪತ್ರಿಕೋದ್ಯಮಿ, ಚಲನಚಿತ್ರ ನಿರ್ದೇಶಕರು)

**'ಬಂದಸುಖವ ಬಿಡಬೇಡ, ಬಾರದುದ ಬೇಕೆಂದು ಬಯಸಬೇಡ'**

–ರತ್ನಾಕರವರ್ಣಿ ('ಭರತೇಶ ವೈಭವ' ಕೃತಿಯ ಲೇಖಕ ಕಾಲ ಸುಮಾರು ೧೫೦೦)

# ಸಂಕ್ರಾಂತಿಯಂದು ಸುಖ–ದುಃಖ

–ಎ.ಆರ್.ಮಣಿಕಾಂತ್

**ಪ್ರವೇಶ :** ಕ್ರಿಸ್‌ಮಸ್ ಮುಗಿದಿದೆ. ಶಾಲೆಯಲ್ಲಿ ವಾರ್ಷಿಕೋತ್ಸವದ ತಯಾರಿ ನಡೆಯುತ್ತಿದೆ. ಚುಮುಚುಮು ಚಳಿಯ ಆ ದಿನಗಳಲ್ಲಿ ಸಂಕ್ರಾಂತಿ ಹಬ್ಬ ಬಂದಿದೆ. ಸಂಕ್ರಾತಿಯ ಮಹತ್ವವೇನು ಎಂದು ತಿಳಿಯಲು ಮಕ್ಕಳಿಗೆ ಕುತೂಹಲ. ಯುಗಾದಿಯಲ್ಲಿ ಬೇವು–ಬೆಲ್ಲ ತಿನ್ನುವುದು ಸುಖ–ದುಃಖಗಳು ಜೀವನದಲ್ಲಿ ಒಂದೇ ಸಮನಾಗಿರಲಿ ಎನ್ನುವುದಕ್ಕಾಗಿ. ಸಂಕ್ರಾಂತಿಯಲ್ಲಿ ಎಳ್ಳು–ಬೆಲ್ಲ ತಿನ್ನುವುದೇಕೆ? ಅದು ಚಳಿಗಾಲದಲ್ಲೇ ಏಕೆ ಬರುತ್ತದೆ? ಎಳ್ಳು–ಬೆಲ್ಲ ತಿಂದರೆ ಹಬ್ಬ ಮುಗಿಯಿತೆ? ಈ ಎಲ್ಲ ಪ್ರಶ್ನೆಗಳೂ ಮಕ್ಕಳ ಮನಸ್ಸಿನಲ್ಲಿ ಇದ್ದವು. ಇವುಗಳಿಗೆ ಉತ್ತರವೆಂಬಂತೆ ಪತ್ರಿಕೆಯಲ್ಲಿ ಬಂದಿದ್ದ ಲೇಖನವನ್ನು ಅಧ್ಯಾಪಕರು ತರಗತಿಯಲ್ಲಿ ಓದಿದರು.





ಎಳ್ಳು–ಬೆಲ್ಲ ತಿಂದು ಒಳ್ಳೆಯ ಮಾತಾಡಿ.

ಸಂಕ್ರಾಂತಿ ಅಂದಾಕ್ಷಣ ನೆನಪಾಗುವ ಮಾತಿದು. ಎಳ್ಳು, ಬೆಲ್ಲ ಇಲ್ಲದ ಸಂಕ್ರಾಂತಿಯನ್ನು ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ. ನಿಮಗೆ ಗೊತ್ತೆ? ಸಂಕ್ರಾಂತಿಯಲ್ಲಿ ಪುರಾಣ ಕಾಣಿಸುತ್ತದೆ. ವಿಜ್ಞಾನ ಇಣುಕು ಹಾಕುತ್ತದೆ. ಸಂಪ್ರದಾಯ ಮಾತಾಡುತ್ತದೆ. ಕೃತಜ್ಞತಾಭಾವ ಕೈಹಿಡಿಯುತ್ತದೆ. ನಮಗೆ ಒಳಿತಾಗಲಿ, ನಮ್ಮ ಬದುಕಲ್ಲಿ ಸಂ–ಕ್ರಾಂತಿಯಾಗಲಿ ಎಂಬ ಆಶಾವಾದ ಜತೆಗೇ ಇರುತ್ತದೆ.

ಯುಗಾದಿ, ದೀಪಾವಳಿ, ಮೊಹರಂ, ಈದ್–ಮಿಲಾದ್, ಕ್ರಿಸ್‌ಮಸ್, ಗೌರಿ–ಗಣೇಶ, ಮಹಾಲಯ ಅಮಾವಾಸ್ಯೆ ಮುಂತಾದುವೆಲ್ಲ ಜನಗಳ ಹಬ್ಬ. ಆದರೆ, ಸಂಕ್ರಾಂತಿಯ ಸೊಗಸೇ ಬೇರೆ. ಇದು ದನಗಳ ಹಬ್ಬ! ಉಳಿದೆಲ್ಲ ಹಬ್ಬಗಳಲ್ಲೂ ತಾನು ಹೊಸ ಬಟ್ಟೆ ಧರಿಸಿ ಮೆರೆವ

ಮನುಷ್ಯ ಸಂಕ್ರಾಂತಿಯಲ್ಲಿ ಜಾನುವಾರುಗಳ ಅಲಂಕಾರಕ್ಕೆ ನಿಲ್ಲುತ್ತಾನೆ. ವರ್ಷವಿಡೀ ದುಡಿಮೆಯಲ್ಲಿ ತೊಡಗಿದ್ದ ದನ-ಕರುಗಳಿಗೆ ಪೂಜೆ ಮಾಡುತ್ತಾನೆ. ಸಂಕ್ರಾಂತಿಯ ವೇಳೆಗೆ ಇಡೀ ವರ್ಷದ ದುಡಿಮೆ ರೈತಾಪಿ ಜನರ ಕೈಗೆ ಬಂದಿರುತ್ತದಲ್ಲ? ಹಾಗೆ ದುಡಿದದ್ದಕ್ಕೆ ದನ-ಕರುಗಳಿಗೆ ಥ್ಯಾಂಕ್ಸ್(ವಂದನೆ)ಹೇಳಲಿಕ್ಕೆ, ಅವುಗಳನ್ನು ಸಿಂಗರಿಸಿ, ಮೆರವಣಿಗೆ ಮಾಡಿ, ಕಿಚ್ಚು ಹಾಯಿಸಿ ರೈತ ಖುಷಿಪಡುತ್ತಾನೆ!

ಕಿಚ್ಚು ಹಾಯಿಸುವುದು ಎಂದರೆ ದನಕರುಗಳನ್ನು ಬೆಂಕಿಯಲ್ಲಿ ಜಿಗಿಸುವುದು. ಈ ಆಚರಣೆಯ ಗುಟ್ಟು ಗೊತ್ತೆ? ಸಂಕ್ರಾಂತಿ ಬರುವುದು ಗಡಗಡ ಚಳಿಯ ಸಂದರ್ಭದಲ್ಲಿ. ಆ ವೇಳೆಗೆ ಕೃಷಿ ಕೆಲಸವೂ ಆಷ್ಟಾಗಿ ಇರುವುದಿಲ್ಲವಲ್ಲ? ದನ-ಕರುಗಳಿಗೆ ಸ್ವಲ್ಪ ವಿಶ್ರಾಂತಿ ಸಿಕ್ಕಿರುತ್ತೆ. ಅವುಗಳ ಮೈಯಲ್ಲಿ ಜಿಗಣೆಯಂಥ ಕ್ರಿಮಿಗಳು ಅದು ಹೇಗೋ ಸೇರಿರುತ್ತವೆ. ಗುಟ್ಟಾಗಿ ಅಡಗಿ ಕೂತು ಕಾಟ ಕೊಡುತ್ತಿರುತ್ತವೆ. ಇವುಗಳನ್ನು ತೊಲಗಿಸುವ ನೆಪದಲ್ಲೇ ಕಿಚ್ಚು ಹಾಯಿಸಲಾಗುತ್ತದೆ. ಬೆಂಕಿಯ ತಾಪ ಚೂರೇ ಚೂರು ತಾಗಿದರು ಸಾಕು, ಜಿಗಣೆಗಳು ತೊಪ್ಪನೆ ಬೆಂಕಿಗೆ ಬೀಳುತ್ತವೆ. ಮರುಕ್ಷಣದಿಂದಲೇ ಜಾನುವಾರುಗಳ ಬದುಕು ನೆಮ್ಮದಿಯ ಹಾಡಾಗುತ್ತದೆ!

ಸಂಕ್ರಾಂತಿಯಂದು ಎಳ್ಳು-ಬೆಲ್ಲ-ಕಡಲೆ ಮತ್ತು ಕೊಬ್ಬರಿಯನ್ನೇ ಯಾಕೆ ತಿನ್ನಬೇಕು ಅಂದರೆ, ಚಳಿಗಾಲದ ಅವಧಿಯಲ್ಲಿ ಚರ್ಮ ಒಡೆದಿರ್ತದಲ್ಲ? ಆಗ ದೇಹದಲ್ಲಿ ಕೊಬ್ಬಿನ ಅಂಶ ಕಡಿಮೆಯಾಗುತ್ತೆ ಚರ್ಮ ಮತ್ತೆ ಹುರುಪುಗೊಳ್ಳಬೇಕಾದರೆ, ಕಳೆದುಹೋದ ಕೊಬ್ಬಿನ ಅಂಶ ಬೇಗನೆ ಸಿಗಲೇಬೇಕು. ಎಳ್ಳು-ಕೊಬ್ಬರಿ-ಕಡಲೆಯಲ್ಲಿ ಕೊಬ್ಬಿನ ಅಂಶ ವಿಪರೀತ ಎಂಬಷ್ಟಿದೆ. ಸಂಕ್ರಾಂತಿಯ ನೆಪದಲ್ಲಿ ಎಲ್ಲರೂ ಎಳ್ಳು-ಬೆಲ್ಲದ ಮಿಶ್ರಣ ತಿನ್ನುತ್ತಾರಲ್ಲ? ಆಗ ದೇಹವೆಂಬುದು ತಂತಾನೇ ಸರಿಯಾಗಿಬಿಡುತ್ತದೆ.

ಸಂಕ್ರಾಂತಿ ಹಳ್ಳಿಗರ ಮಧ್ಯೆಯೇ ಸೃಷ್ಟಿಯಾದ ಹಬ್ಬ. ಆಗಿಂದಾಗ್ಗೆ ಜಗಳವಾಡಿ 'ಟೂ'ಬಿಡುವುದು ಹಳ್ಳಿಗರ ಹುಟ್ಟುಗುಣ ತಾನೆ? ಊರಿನ ಪಟೇಲರು ವರ್ಷದ ಕೊನೆಯಲ್ಲಿ ಜಗಳಾಡಿದವರನ್ನು ಒಂದೆಡೆ ಸೇರಿಸಿ, ಅವರಿಂದ ಇವರಿಗೆ, ಇವರಿಂದ ಅವರಿಗೆ ಎಳ್ಳು ಬೆಲ್ಲ ಕೊಡಿಸಿ ರಾಜಿ ಮಾಡಿಸುತ್ತಿದ್ದರಂತೆ. ನಂತರ ಇನ್ನು ಮುಂದೆ ಕಿತ್ತಾಡುತ್ತ ಬದುಕಬೇಡಿ ಎಂದು ಒರಟಾಗಿ ಹೇಳುವ ಬದಲು 'ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತಾಡಿ' ಅನ್ನುತ್ತಿದ್ದರಂತೆ! ಪರಿಣಾಮ, ಸಂಕ್ರಾಂತಿ ಬಾಯಿಗೆ ಸಿಹಿ ಕೊಡುತ್ತಿತ್ತು ದ್ವೇಷ ಮರೆಸುತ್ತಿತ್ತು! ಸಂಕ್ರಾಂತಿ ದಿನದಿಂದ ಸೂರ್ಯನು ದಕ್ಷಿಣದಿಂದ ಉತ್ತರ ದಿಕ್ಕಿಗೆ ಸ್ವಲ್ಪ ಸ್ವಲ್ಪ ಸಂಚರಿಸಲು ಶುರುವಿಡುತ್ತಾನೆ. ಸಂಕ್ರಾಂತಿಯ ಮರುದಿನದಿಂದಲೇ ಹಗಲು ದೀರ್ಘವಾಗುತ್ತದೆ. ರಾತ್ರಿಯ ಅವಧಿ ಸಹಜವಾಗಿಯೇ ಕಡಿಮೆಯಾಗುತ್ತದೆ. ಉತ್ತರಾಯಣ ಪುಣ್ಯಕಾಲ ಬರೋದು ವರ್ಷದಲ್ಲಿ ಒಂದು ದಿನ ಮಾತ್ರ. ಅಂದು ಸ್ವರ್ಗದ ಬಾಗಿಲು ತೆರೆದಿರುತ್ತದೆ ಎಂಬ ನಂಬಿಕೆಯಿದೆ.

***

ಇದು ಸಂಕ್ರಾಂತಿಯ ಸೊಗಸಿನ ಮಹತ್ವ. ಹೌದಲ್ಲ? ಈಗ ಅಪ್ಪ-ಅಮ್ಮ ಆಗಿರುವವರು; ಅಂಕಲ್-ಆಂಟಿ ಅನಿಸಿಕೊಂಡಿರುವವರು, ಚಿಕ್ಕವರಿದ್ದಾಗ ಸಂಕ್ರಾಂತಿಯ ಸಡಗರದಲ್ಲಿ ಮೀಯುತ್ತಿದ್ದರು. ದನ-ಕರುಗಳ ಮೈ ತೊಳೆದು, ಕೊರಳಿಗೆ ಗೆಜ್ಜೆ ಕಟ್ಟಿ ಕೊಂಬಿಗೆ ಬಣ್ಣ ಬಳಿದು, ಟೇಪು ಕಟ್ಟಿ, ಹೂ ಮುಡಿಸಿ, ತರಹೇವಾರಿ ಬಲೂನು ಕಟ್ಟಿ ಕುಣಿಯುತ್ತಿದ್ದರು. ಹಬ್ಬದ ನೆಪದಲ್ಲಿ ಪರಿಚಿತರು ಬಂಧುಗಳಿಗೆಲ್ಲ ಎಳ್ಳು ಬೆಲ್ಲ ಕೊಟ್ಟು ಖುಷಿಪಡುತ್ತಿದ್ದರು.

ಈಗ ಏನಾಗಿದೆ ಹೇಳಿ? ಹಬ್ಬವೇನೋ ವರ್ಷವರ್ಷವೂ ಬರುತ್ತಿದೆ. ಆದರೆ ಅವರಲ್ಲಿ ಸಂಭ್ರಮವಿಲ್ಲ. ಸಂಭ್ರಮ ಎಂಬುದು ಎದೆಯಾಳದಿಂದ ಹುಟ್ಟಿಬರುವುದಿಲ್ಲ. ಕೃಷಿಕರ ಮನೆಗಳಲ್ಲಿ ದನ-ಕರುಗಳೇ ನಾಪತ್ತೆ! ಆ ಜಾಗಕ್ಕೆ ಟ್ರಾಕ್ಟರ್‌ಗಳು ಬಂದುನಿಂತಿವೆ! ಕಿಚ್ಚುಹಾಯಿಸುವ ಸಂಪ್ರದಾಯ ಕಣ್ಮರೆಯಾಗುತ್ತಿದೆ. ಯಾಂತ್ರಿಕವಾಗುತ್ತಿದೆ. ನೌಕರಿಯ ನೆಪದಲ್ಲಿ ಪಟ್ಟಣ ಸೇರಿರುವವರು ವಿಪರೀತ ಬ್ಯುಸಿಯಾಗಿದ್ದಾರೆ. ಕಾಸಿಗೆ ಪರದಾಡುತ್ತಿದ್ದಾರೆ. ಸಂಕ್ರಾಂತಿಗೆಂದು ಊರಿಗೆ ಹೋಗಿಬಂದರೆ ಐನೂರು ರೂಪಾಯಿಗೆ ನಾಮ ಬೀಳೋದು ಖಂಡಿತಾ. ಅದರ ಬದಲು ಇನ್ನೂರು ರೂಪಾಯಿ ಖರ್ಚು ಮಾಡಿ ಹೋಟೆಲಿಗೆ ಹೋಗಿ ತಿಂದುಬರೋದೇ ಸರಿ ಎಂದು ಲೆಕ್ಕ ಹಾಕಿ ಹಾಗೆಯೇ ಬದುಕುತ್ತಿದ್ದಾರೆ.

ಕೇಳಿ: ಒಂದು ಕಾಲದಲ್ಲಿ ಎಳ್ಳು-ಬೆಲ್ಲ ನೀಡುವುದು ಬಾಂಧವ್ಯದ ಸಂಕೇತವಾಗಿತ್ತು. ಆದರೆ ಅದೀಗ ಪ್ರತಿಷ್ಠೆಯ ವಿಚಾರವಾಗಿದೆ. ಜಾಸ್ತಿ-ಎಳ್ಳು ಬೆಲ್ಲ ಕೊಟ್ಟವರೇ ಶ್ರೀಮಂತರು ಎಂಬಂತಾಗಿದೆ! ನಾನೇ ಮೇಲು, ನಾನೇ ಶ್ರೇಷ್ಠ ಎಂದು ತೋರಿಸಿಕೊಳ್ಳಲು ಎಲ್ಲರೂ ಮುಂದಾಗಿದ್ದಾರೆ. ದೊಡ್ಡದಾಗಿ ಕಾಣಲೆಂದು ದಪ್ಪ ದಪ್ಪ ಸಕ್ಕರೆ ಅಚ್ಚು ಸೇರಿಸಿ ಎಳ್ಳು-ಬೆಲ್ಲ ಪ್ಯಾಕ್ ಮಾಡುತ್ತಿದ್ದಾರೆ. ರೆಡಿಮೇಡ್ ಎಳ್ಳು ಬೆಲ್ಲದ ಪ್ಯಾಕ್‌ಗಳು ಫ್ಯಾಬ್ ಮಾಲ್‌ಗಳಲ್ಲಿ ಧಾರಾಳವಾಗಿ ದೊರಕುತ್ತಿವೆ. ಕಳಪೆ ಮಾಲು ಎಂಬುದು ಎಳ್ಳು-ಬೆಲ್ಲದ ರೂಪದಲ್ಲೂ ಮಾರುಕಟ್ಟೆಗೆ ಬಂದಿದೆ. ಸದಾ ಮುಖವಾಡದೊಂದಿಗೇ ಬದುಕುವ ನಾವು ಈ ಬದಲಾವಣೆಯನ್ನೂ ಒಪ್ಪಿಕೊಂಡಿದ್ದೇವೆ!

ಇಲ್ಲ. ನಾವೆಲ್ಲ ಬಯಸುವ, ಸಂಕ್ರಾಂತಿ ಇದಲ್ಲವೇ ಅಲ್ಲ. ನಮ್ಮ ಆಚರಣೆಯ ಸಂಕ್ರಾಂತಿಯಲ್ಲಿ ಸಂಸ್ಕೃತಿ ಇರಬೇಕು. ಸಂಪ್ರದಾಯ ಇರಬೇಕು, ಪ್ರೀತಿ ಇರಬೇಕು. ವಿಶ್ವಾಸ-ಕೃತಜ್ಞತೆ ಜತೆಯಾಗಬೇಕು. ಹಬ್ಬದ ನೆಪದಲ್ಲಿ ಸಂ-ಕ್ರಾಂತಿ ನಮ್ಮ ಬದುಕಲ್ಲಿ ನಡೆದು ಹೋಗಬೇಕು. ಸಂಕ್ರಾಂತಿ ಅಂಥದೇ ಆಗಿರಲಿ. ಸಮೃದ್ಧಿ, ಐಶ್ವರ್ಯ, ನೆಮ್ಮದಿ, ಖುಷಿ, ರಂಗು, ಆರೋಗ್ಯ, ನಲಿವು, ತೃಪ್ತಿ, ಹುಮ್ಮಸ್ಸು, ಇಷ್ಟಾರ್ಥ ಎಲ್ಲರಿಗೂ ಸಿದ್ಧಿಸಲಿ. ಸಂಭ್ರಮ, ಸೊಬಗು, ಸಮೃದ್ಧಿ ಎಲ್ಲರ ಬಾಳಿನಲ್ಲೂ ತುಂಬಿ ತುಳುಕಲಿ. ಎಲ್ಲರ ಒಳಿತಿಗಾಗಿ ಹರಕೆ-ಹಾರೈಕೆ.

**ಕ್ಷೇತ್ರ :** ಬರೆಯುವುದು.

**ಸಾಮರ್ಥ್ಯ : ಸರಳ, ಕ್ರಿಯಾತ್ಮಕ ಸಾಂದರ್ಭಿಕ ಭಾಷಾಂಶ ನಿಯಮಗಳನ್ನು ಅರ್ಥಮಾಡಿಕೊಂಡು ಬರವಣಿಗೆಯಲ್ಲಿ ಬಳಸುವುದು.**

**ಆಶಯ :** ನಮ್ಮ ಆಚರಣೆಗಳನ್ನು ಅರ್ಥಪೂರ್ಣವಾಗಿ ಮಾಡಬೇಕು. ಯಾವುದೇ ಹಬ್ಬದಲ್ಲಿ ಸಂಸ್ಕೃತಿ ಇರಬೇಕು. ಅರ್ಥಪೂರ್ಣವಾದ ಸಂಪ್ರದಾಯ ಇರಬೇಕು, ಪ್ರೀತಿ ಇರಬೇಕು. ಹೀಗೆ ಮಾಡಿದಾಗಲೇ ನಮ್ಮ ಆಚರಣೆಗಳಿಗೆ ಅರ್ಥ ಬರುತ್ತದೆ. ಇಲ್ಲದಿದ್ದರೆ ಎಲ್ಲವೂ ಯಾಂತ್ರಿಕವಾಗುತ್ತದೆ. ಆಧುನಿಕ ಬದುಕು ನಮ್ಮ ಆಚರಣೆಗಳ ಮೂಲಸತ್ವವನ್ನು ಮರೆಮಾಚುತ್ತಿದೆ. ಹಾಗಾಗಬಾರದು. ಮನೆಯ ಹಬ್ಬಗಳಿರಲಿ, ಊರಿನ ಹಬ್ಬಗಳಿರಲಿ, ರಾಷ್ಟ್ರೀಯ ಹಬ್ಬಗಳಿರಲಿ, ನಾಡಹಬ್ಬಗಳಿರಲಿ ಇವೆಲ್ಲದರ ಅರ್ಥಪೂರ್ಣ ಆಚರಣೆ ನಡೆಯಲಿ.

## ಓದಿ ತಿಳಿಯಿರಿ

ಸಂ–ಕ್ರಾಂತಿ–ಯಾವುದಾದರೂ ರೀತಿಯ ಕ್ರಾಂತಿ,ಬದಲಾವಣೆ; ಕಿಚ್ಚು–ಬೆಂಕಿ; ಠೂ ಬಿಡು–ಮಾತುಬಿಡು;ಪಟೇಲ–ಹಿಂದೆ ಊರಿನ ಕ್ಷೇಮಸಮಾಚಾರಗಳನ್ನು ನೋಡಿಕೊಳ್ಳುತ್ತಿದ್ದ ಹಿರಿಯ; ಮೀಯು–ಸ್ನಾನ ಮಾಡು;ತರಹೇವಾರಿ–ವಿಧವಿಧವಾದ; ಬ್ಯುಸಿ–ಬಿಡುವಿಲ್ಲದಿರುವುದು; ಪ್ಯಾಕ್ ಮಾಡು–ಪೊಟ್ಟಣ ಕಟ್ಟು; ರೆಡಿಮೇಡ್–ಸಿದ್ಧವಾದ; ಫ್ಯಾಬ್ ಮಾಲ್–ಆಧುನಿಕ ಮಾರುಕಟ್ಟೆಯ ಒಂದು ರೂಪ.



## ಲೇಖಕರ ಪರಿಚಯ



ಶ್ರೀ ಎ.ಆರ್.ಮಣಿಕಾಂತ್ ಅವರು ಮಂಡ್ಯಜಿಲ್ಲೆ ನಾಗಮಂಗಲ ತಾಲ್ಲೂಕಿನ ಆಯಿತನಹಳ್ಳಿಯಲ್ಲಿ ಜನಿಸಿದರು. ಎಂಜಿನಿಯರಿಂಗ್ ಪದವೀಧರರಾದ ಇವರು ಪತ್ರಿಕೋದ್ಯೋಗಿಯಾಗಿ ಕೆಲಸಮಾಡುತ್ತಿದ್ದಾರೆ. 'ಹಾಯ್ ಬೆಂಗಳೂರು', 'ಸಂಯುಕ್ತ ಕರ್ನಾಟಕ','ವಿಜಯ ಕರ್ನಾಟಕ' ಪತ್ರಿಕೆಗಳಲ್ಲಿ ಕೆಲಸಮಾಡಿ ಈಗ 'ಕನ್ನಡಪ್ರಭ' ಪತ್ರಿಕೆಯಲ್ಲಿ ಮುಖ್ಯ ಉಪಸಂಪಾದಕರಾಗಿದ್ದಾರೆ. ಆ ಪತ್ರಿಕೆಯಲ್ಲಿ 'ಭಾವತೀರಯಾನ' ಎಂಬ ಅಂಕಣವನ್ನು ಬರೆಯುತ್ತಿದ್ದಾರೆ. 'ಉಭಯಕುಶಲೋಪರಿ ಸಾಂಪ್ರತ', 'ಹಾಡು ಹುಟ್ಟಿದ ಸಮಯ', 'ಮರೆಯಲಿ ಹ್ಯಾಂಗ', 'ಈ ಗುಲಾಬಿಯು ನಿನಗಾಗಿ' 'ಅಪ್ಪ ಅಂದ್ರೆ ಆಕಾಶ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡಮಿಯ ಪ್ರಶಸ್ತಿಗೆ ಪುರಸ್ಕೃತರಾಗಿದ್ದಾರೆ. 'ಸಂಕ್ರಾಂತಿಯಂದು ಸುಖ–ದುಃಖ' ಈ ಪ್ರಬಂಧವನ್ನು ಶ್ರೀ ಮಣಿಕಾಂತ್ ಅವರ 'ಅಮ್ಮ ಹೇಳಿದ ಎಂಟು ಸುಳ್ಳುಗಳು' ಎಂಬ ಕೃತಿಯಿಂದ ಆರಿಸಲಾಗಿದೆ.

## ಅಭ್ಯಾಸ

**ಅ) ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಸಂಕ್ರಾತಿ ಯಾವ ರೀತಿಯ ಹಬ್ಬ ?

೨. ಕಿಚ್ಚು ಹಾಯಿಸುವುದು ಎಂದರೆ ಏನು?

೩. ಹಳ್ಳಿಗಳಲ್ಲಿ ಪಟೇಲರು ಏನು ಕೊಡಿಸಿ ರಾಜಿ ಮಾಡುತ್ತಿದ್ದರು ?

೪. ಕೃಷಿಕರ ಮನೆಯಲ್ಲಿ ದನಕರುಗಳ ಜಾಗಕ್ಕೆ ಏನು ಬಂದು ನಿಂತಿದೆ?

೫. ನಮ್ಮ ಸಂಕ್ರಾತಿಯಲ್ಲಿ ಏನು ಇರಬೇಕು ?

**ಆ) ಕೆಳಗಿನ ಪ್ರಶ್ನೆಗಳಿಗೆ ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ಸಂಕ್ರಾಂತಿಯಲ್ಲಿ ದನಗಳಿಗೆ ಏನು ಮಾಡಲಾಗುತ್ತದೆ?

## ಭಾಷಾಭ್ಯಾಸ

### ಲೇಖನ ಚಿಹ್ನೆಗಳು–೨

**೧. ಸೂಚಕಗಳು :**

**ಅ) ಪ್ರಶ್ನಸೂಚಕ**

- ಪ್ರಶ್ನಾರ್ಥಕ ವಾಕ್ಯದ ಕೊನೆಯಲ್ಲಿ ಬಳಸಬೇಕು.
  ಉದಾ : ನೀವು ಯಾರು? ನಿಮ್ಮ ಹೆಸರೇನು?
- ಪ್ರಶ್ನಾರ್ಥಕ ವಾಕ್ಯದ ರೂಪದಲ್ಲಿಲ್ಲದಿದ್ದರೂ ಅರ್ಥದ ದೃಷ್ಟಿಯಿಂದ ಪ್ರಶ್ನೆ ಅಡಕವಾಗಿದ್ದರೆ ಅಲ್ಲಿ ಪ್ರಶ್ನಸೂಚಕ ಬಳಸಬಹುದು.

  ಜನವರಿಯಲ್ಲಿ ಏಳನೆಯ ತರಗತಿ ಪರೀಕ್ಷೆ?

**ಆ) ಭಾವಸೂಚಕ**

- ಸಂತೋಷ,ದುಃಖ,ಆಶ್ಚರ್ಯ,ಕೋಪ ಮುಂತಾದ ಭಾವನೆಗಳನ್ನು ಸೂಚಿಸುವ ಪದ ಅಥವಾ ವಾಕ್ಯದ ಕೊನೆಯಲ್ಲಿ ಭಾವಸೂಚಕ ಬಳಕೆಯಾಗುತ್ತದೆ

  ಓ ಬನ್ನೀ,ಬನ್ನೀ !

  ಹೌದಾ !

  ಛೇ !

  ಭಾರತದಲ್ಲಿ ಎಷ್ಟೊಂದು ಭಾಷೆಗಳು!

## ೨. ಉದ್ಧರಣಗಳು :

### ಅ) ಒಂಟಿ ಉದ್ಧರಣ

- ವಾಕ್ಯದಲ್ಲಿ ಯಾವುದಾದರೂ ಅಕ್ಷರ,ಪ್ರತ್ಯಯ,ಪದ, ಪದಪುಂಜವನ್ನು ವಿಶೇಷವಾಗಿ ಹೇಳಬೇಕಾದಾಗ ಒಂಟಿ ಉದ್ಧರಣ ಚಿಹ್ನೆ ಬಳಸಬೇಕು

  ಇಲ್ಲಿ 'ಇಂದ' ಬಳಸಬಾರದು.

  ಶಾಲೆಯ ಮುಂದಿನ ರಸ್ತೆಯಲ್ಲಿ 'ವೇಗವಾಗಿ ಚಲಿಸಬೇಡಿ'ಫಲಕವನ್ನು ಅಳವಡಿಸಬೇಕು.
- ಬರವಣಿಗೆಯಲ್ಲಿ ವಿಷಯದ ಭಾಗವಾಗಿ ಬರುವ ವಿಶಿಷ್ಟ ಪದ,ಪದಪುಂಜ, ಲೇಖನ, ಪುಸ್ತಕ, ಪತ್ರಿಕೆ ಮುಂತಾದುವುಗಳನ್ನು ಒಂಟಿ ಉದ್ಧರಣ ಚಿಹ್ನೆಯೊಳಗೆ ಬರೆಯಬೇಕು.

  'ಬಿಡು ಬಾಹ್ಯದೊಳು ಡಂಬವ' ಎಂಬ 'ತತ್ವಪದ'ದ ಕರ್ತೃ ಸರ್ಪಭೂಷಣ ಶಿವಯೋಗಿ ಅವರು 'ಕೈವಲ್ಯವಲ್ಲರಿ', 'ಜ್ಞಾನಶತಕ'ಎಂಬ ಕೃತಿಗಳನ್ನು ರಚಿಸಿದ್ದಾರೆ.
- ಬರವಣಿಗೆಯಲ್ಲಿ ಯಾವುದಾದರೂ ಭಾಗವೊಂದನ್ನು ಅಳವಡಿಸಿದಾಗ ಅದರ ಪ್ರತ್ಯೇಕತೆ ಸೂಚಿಸಲು ಆಭಾಗವನ್ನು ಒಂಟಿ ಉದ್ಧರಣ ಚಿಹ್ನೆಯೊಳಗೆ ಬರೆಯಬೇಕು.

  'ಭಾರತ ಜನನಿಯ ತನುಜಾತೆ'ಯಾದ 'ಕರ್ನಾಟಕ ಮಾತೆ' ಇಂದು ಭಾರತದ ಭೂಪಟದಲ್ಲಿ ತನ್ನದೇ ಆದ ವೈಶಿಷ್ಟ್ಯತೆಗಳಿಂದ ರಾರಾಜಿಸುತ್ತಿದ್ದಾಳೆ.

### ಅ) ಜೋಡಿ ಉದ್ಧರಣ

- ನಮ್ಮ ಬರವಣಿಗೆಯಲ್ಲಿ ಮತ್ತೊಬ್ಬರ ಮಾತುಗಳನ್ನು ಬಳಸಿದಾಗ ಅವರ ಮಾತುಗಳನ್ನು'ಎಂದು'ಎಂಬ ಪದದ ಸಹಾಯದಿಂದ ಅವರ ಮಾತುಗಳನ್ನು ಉದ್ಧರಿಸಬಹುದು.

  ದುಃಖ ಮತ್ತು ಸುಖದ ಬಗ್ಗೆ ಹೇಳುವಾಗ "ದುಃಖಕ್ಕೆ ಕಾರಣ ಸಿಕ್ಕಷ್ಟು ಬೇಗ ಸುಖಕ್ಕೆ ಕಾರಣ ಸಿಗುವುದಿಲ್ಲ" ಎಂದು ಸಾಹಿತಿ ಪಿ. ಲಂಕೇಶ ಅವರು ಹೇಳಿದ್ದಾರೆ.



## ವ್ಯಾಕರಣ

### ಬಹುವಚನ

**ಕೆಳಗಿನ ವಾಕ್ಯಗಳನ್ನು ಗಮನಿಸಿ ವ್ಯತ್ಯಾಸ ತಿಳಿಯಿರಿ :**

೧) ನನ್ನ ಬಳಿ ಒಂದು **ಚೆಂಡು** ಇದೆ.

೨) ಅನ್ವರನ ಬಳಿ ನಾಲ್ಕು **ಚೆಂಡುಗಳು** ಇವೆ.

೩) ಬೆಂಗಳೂರಿನಿಂದ ನಮ್ಮ ಶಾಲೆಗೆ ಒಬ್ಬಳು **ಹುಡುಗಿ ಬಂದಿದ್ದಾಳೆ.**

೪) ಮೈಸೂರಿನಿಂದ ನಮ್ಮ ಶಾಲೆಗೆ ಮೂವರು **ಹುಡುಗಿಯರು ಬಂದಿದ್ದಾರೆ.**

೫) ನಾಳೆ ಬಿಜಾಪುರಕ್ಕೆ ಚೆಸ್ ಪಂದ್ಯದಲ್ಲಿ ಭಾಗವಹಿಸಲು ಒಬ್ಬ **ಹುಡುಗ ಹೋಗುತ್ತಾನೆ.**

೬) ನಾಳೆ ಬಾದಾಮಿಗೆ ಕ್ರಿಕೆಟ್ ಪಂದ್ಯದಲ್ಲಿ ಭಾಗವಹಿಸಲು ಹದಿನಾರು **ಹುಡುಗರು ಹೋಗುತ್ತಾರೆ.**

೧ನೇ ವಾಕ್ಯ ಗಮನಿಸಿ. ಇಲ್ಲಿ **ಚೆಂಡು** ಎಂಬುದು ನಾಮಪದ. **ಇದೆ** ಎಂಬುದು ಕ್ರಿಯಾಪದ. ೨ನೇ ವಾಕ್ಯ ಗಮನಿಸಿ **ಚೆಂಡುಗಳು** ಎಂಬುದು ನಾಮಪದ. **ಇವೆ** ಎಂಬುದು ಕ್ರಿಯಾಪದ. ಮೊದಲ ವಾಕ್ಯದಲ್ಲಿ ಚೆಂಡು ಒಂದು ಇದೆ. ಇದರಿಂದ ಚೆಂಡು ಎಂಬ ಪದ ಬಳಕೆಯಾಗಿದೆ. ಆದರೆ ಎರಡನೆಯ ವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚು(ನಾಲ್ಕು) ಚೆಂಡುಗಳಿವೆ. ಇದರಿಂದ ಚೆಂಡುಗಳು ಎಂಬ ಪದ ಬಳಕೆಯಾಗಿದೆ. ಇಲ್ಲಿ **–ಗಳು** ಎಂಬುದು ಬಹುವಚನ ಸೂಚಿಸುವ ಪ್ರತ್ಯಯ.

೩ನೇ ವಾಕ್ಯ ಗಮನಿಸಿ ಇಲ್ಲಿ **ಹುಡುಗಿ** ಎಂಬುದು ನಾಮಪದ. **ಬಂದಿದ್ದಾಳೆ** ಎಂಬುದು ಕ್ರಿಯಾಪದ. ೪ನೇ ವಾಕ್ಯ ಗಮನಿಸಿ **ಹುಡುಗಿಯರು** ಎಂಬುದು ನಾಮಪದ **ಬಂದಿದ್ದಾರೆ** ಎಂಬುದು ಕ್ರಿಯಾಪದ. ಮೊದಲ ವಾಕ್ಯದಲ್ಲಿ ಒಬ್ಬಳು ಹುಡುಗಿ ಎಂದಿರುವುದರಿಂದ ಹುಡುಗಿ ಎಂಬ ಪದ ಬಳಕೆಯಾಗಿದೆ. ಆದರೆ ಎರಡನೆಯ ವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚು ಹುಡುಗಿಯರಿರುವುದರಿಂದ ಹುಡುಗಿಯರು ಎಂಬ ಪದ ಬಳಕೆಯಾಗಿವೆ. ಇಲ್ಲಿ **–ಅರು** ಎಂಬುದು ಬಹುವಚನ ಸೂಚಿಸುವ ಪ್ರತ್ಯಯ.



೫ನೇ ವಾಕ್ಯ ಗಮನಿಸಿ. ಇಲ್ಲಿ **ಹುಡುಗ** ಎಂಬುದು ನಾಮಪದ. **ಹೋಗುತ್ತಾನೆ** ಎಂಬುದು ಕ್ರಿಯಾಪದ. ೬ನೇ ವಾಕ್ಯ ಗಮನಿಸಿ. **ಹುಡುಗರು** ಎಂಬುದು ನಾಮಪದ. **ಹೋಗುತ್ತಾರೆ** ಎಂಬುದು ಕ್ರಿಯಾಪದ. ಮೊದಲ ವಾಕ್ಯದಲ್ಲಿ ಒಬ್ಬ ಹುಡುಗ ಎಂದಿರುವುದರಿಂದ ಹುಡುಗ ಎಂಬ ಪದ ಬಳಕೆಯಾಗಿದೆ. ಆದರೆ ಎರಡನೆಯ ವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚು(ಹದಿನಾರು) ಹುಡುಗರಿರುವುದರಿಂದ ಹುಡುಗರು ಎಂಬ ಪದ ಬಳಕೆಯಾಗಿವೆ. ಇಲ್ಲಿ **–ರು** ಎಂಬುದು ಬಹುವಚನ ಸೂಚಿಸುವ ಪ್ರತ್ಯಯ.

**ಈಗ ಈ ನಿರ್ಧಾರಕ್ಕೆ ಬರೋಣ :**

- ಒಂದಕ್ಕಿಂತ ಹೆಚ್ಚು ವ್ಯಕ್ತಿ ಅಥವಾ ವಸ್ತುವನ್ನು ಕುರಿತು ಮಾತನಾಡುವಾಗ ಬಹುವಚನ ಪ್ರತ್ಯಯ ಬಳಕೆಯಾಗುತ್ತದೆ.
- ಬಹುವಚನ ಪ್ರತ್ಯಯ ಬಳಕೆಯಾದಾಗ ಕ್ರಿಯಾಪದದ ರೂಪದಲ್ಲಿ ವ್ಯತ್ಯಾಸವಾಗಿ ಅಲ್ಲಿಯೂ ಬಹುವಚನದ ರೂಪ ಬಳಕೆಯಾಗುತ್ತದೆ.

## ಅಭ್ಯಾಸ

**ಮುಂದೆ ನೀಡಿರುವ ವಾಕ್ಯಗಳಲ್ಲಿ ಖಾಲಿ ಬಿಟ್ಟಿರುವ ಸ್ಥಳದಲ್ಲಿ ಆವರಣದಲ್ಲಿ ನೀಡಿರುವ ಪದಗಳ ಬಹುವಚನ ರೂಪ ಬರೆಯಿರಿ.**

೧. ನಮ್ಮ ಮನೆಯಲ್ಲಿ ಎಂಟು __________ (ದನ, ಇದೆ)

೨. ನಮ್ಮ ತರಗತಿಯಲ್ಲಿ ಅರವತ್ತು __________ (ಹುಡುಗ, ಇದ್ದಾನೆ)

೩. ಆರನೆಯ ತರಗತಿಯಲ್ಲಿ ಇಪ್ಪತ್ತು __________ (ಹುಡುಗಿ, ಇದ್ದಾಳೆ)

**ಕೆಳಗೆ ಬಹುವಚನದ ಪದಗಳನ್ನು ಕೊಡಲಾಗಿದೆ. ಇವುಗಳನ್ನು ಗಮನಿಸಿ.**

### ಉದಾಹರಣೆ : ೧

| ಏಕವಚನ | ಬಹುವಚನ |
|---|---|
| • ಪುಸ್ತಕ | • ಪುಸ್ತಕಗಳು |
| • ದನ | • ದನಗಳು |
| • ಮನೆ | • ಮನೆಗಳು |
| • ಬಸ್ಸು | • ಬಸ್ಸುಗಳು |
| • ರಾಜ್ಯ | • ರಾಜ್ಯಗಳು |
| • ಶಾಲೆ | • ಶಾಲೆಗಳು |
| • ತರಗತಿ | • ತರಗತಿಗಳು |

### ಉದಾಹರಣೆ : ೨

| ಏಕವಚನ | ಬಹುವಚನ |
|---|---|
| • ಯುವಕ | • ಯುವಕರು |
| • ಮುದುಕ | • ಮುದುಕರು |
| • ಆಟಗಾರ | • ಆಟಗಾರರು |
| • ಚಾಲಕಿ | • ಚಾಲಕಿಯರು |
| • ಬಾಲಕಿ | • ಬಾಲಕಿಯರು |
| • ಶಾಸಕಿ | • ಶಾಸಕಿಯರು |

### ಉದಾಹರಣೆ : ೩

| ಏಕವಚನ | ಬಹುವಚನ |
|---|---|
| • ಅಕ್ಕ | • ಅಕ್ಕಂದಿರು |
| • ತಾಯಿ | • ತಾಯಂದಿರು |
| • ಚಿಕ್ಕಪ್ಪ | • ಚಿಕ್ಕಪ್ಪಂದಿರು |
| • ದೊಡ್ಡಪ್ಪ | • ದೊಡ್ಡಪ್ಪಂದಿರು |
| • ತಂಗಿ | • ತಂಗಿಯಂದಿರು |

ಮೇಲಿನ ಉದಾಹರಣೆಗಳನ್ನು ಗಮನಿಸಿ. **ಉದಾಹರಣೆ ೧**ರಲ್ಲಿ ನಪುಂಸಕ ಪದಗಳಿವೆ. ಇವುಗಳಲ್ಲಿ –ಗಳು ಎಂಬ ಬಹುವಚನ ಪ್ರತ್ಯಯ ಬಳಕೆಯಾಗಿದೆ. **ಉದಾಹರಣೆ ೨**ರಲ್ಲಿ ಸ್ತ್ರೀಲಿಂಗ ಪುಲ್ಲಿಂಗ ಪದಗಳಿವೆ. ಇಲ್ಲಿ ಸ್ತ್ರೀಲಿಂಗದಲ್ಲಿ **–ಅರು** ಎಂಬ ಬಹುವಚನ ಪ್ರತ್ಯಯ, ಪುಲ್ಲಿಂಗದಲ್ಲಿ **–ರು** ಅನ್ನುವ ಪ್ರತ್ಯಯ ಬಳಕೆಯಾಗಿದೆ. **ಉದಾಹರಣೆ ೩**ರಲ್ಲಿ ಸಂಬಂಧವಾಚಿ ಪದಗಳಿವೆ. ಇಲ್ಲೆಲ್ಲ **–ಅಂದಿರು** ಎಂಬ ಬಹುವಚನ ಪ್ರತ್ಯಯ ಬಳಕೆಯಾಗಿದೆ. ಮೇಲಿನ ಸೂತ್ರದ ಆಧಾರದ ಮೇಲೆ ಕೆಳಗಿನ ಅಭ್ಯಾಸ ಭಾಗದ ಏಕವಚನ ಪದಗಳಿಗೆ ಬಹುವಚನ ಪದಗಳನ್ನು ಬರೆಯಿರಿ.

### ಅಭ್ಯಾಸ ೧

| ಏಕವಚನ | ಬಹುವಚನ | ಏಕವಚನ | ಬಹುವಚನ |
|---|---|---|---|
| • ಜಿಲ್ಲೆ | ________ | • ಹಕ್ಕಿ | ________ |
| • ಊರು | ________ | • ನದಿ | ________ |
| • ಕೊಠಡಿ | ________ | • ಬೆಟ್ಟ | ________ |
| • ನಾಯಿ | ________ | • ಗುಡ್ಡ | ________ |



### ಅಭ್ಯಾಸ ೨

| ಏಕವಚನ | ಬಹುವಚನ | ಏಕವಚನ | ಬಹುವಚನ |
|---|---|---|---|
| • ಅಣ್ಣ | ________ | • ಅತ್ತೆ | ________ |
| • ಚಿಕ್ಕಮ್ಮ | ________ | • ತಮ್ಮ | ________ |
| • ದೊಡ್ಡಮ್ಮ | ________ | • ಭಾವ | ________ |



## ಗದ್ಯಪಾಠ – ೫

# ನನ್ನ ಬಾಲ್ಯ

– ಏಣಗಿ ಬಾಳಪ್ಪ

ನಿರೂಪಣೆ : ಡಾ. ಗಣೇಶ ಅಮೀನಗಡ

**ಪ್ರವೇಶ :** ಕಲೆಗಳಲ್ಲಿ ರಂಗಕಲೆಯ ಸ್ಥಾನ ಬಲು ಹಿರಿದು. ಮಾತುಗಾರಿಕೆ, ನಟನೆ, ವೇಷಭೂಷಣ ಇಲ್ಲಿ ಮುಖ್ಯ. ನಾಟಕದ ಕಲಾವಿದರು ನೋಡುಗರ ಮನಸ್ಸನ್ನು ತಿಳಿದವರಾಗಿರುತ್ತಾರೆ. ಇಲ್ಲಿ ಸ್ನೇಹ, ಆರಾಧನೆಗೆ ಮೊದಲ ಸ್ಥಾನ. ರಂಗಕಲಾವಿದರು ರಾಗಋಷಿಗಳು. ಕಷ್ಟದಲ್ಲೂ ಸಂತೋಷವನ್ನು ಕಾಣುತ್ತಾ ಕಲಾರಸಿಕರನ್ನು ಸಂತೋಷಪಡಿಸುತ್ತಾ ಬಾಳುತ್ತಾರೆ. ಜನಮನದಲ್ಲಿ ಶಾಶ್ವತವಾಗಿ ಉಳಿಯುತ್ತಾರೆ.

ನಾನೊಬ್ಬ ರಂಗಭೂಮಿಯ ಸಾಮಾನ್ಯ ನಟ. ನಟನು ಯಾವಾಗಲೂ ಸಮುದಾಯದ ಎದುರಿನಲ್ಲಿಯೇ ನಟನಾಗಿ ಬಾಳುತ್ತಾನೆ. ಈ ಸಮುದಾಯದ ಆಶ್ರಯ ತಪ್ಪಿದರೆ ನಟ ಬದುಕಿರಲಾರ. ಮೀನಿಗೆ ನೀರಿನ ಸಂಗವಿದ್ದಂತೆ ನಟನಿಗೆ ಪ್ರೇಕ್ಷಕರ ಸಂಗವಿರುತ್ತದೆ.



ನಟನಾಗಿರುವುದು ನಿಂತು ಹೋಗಿ ಪ್ರೇಕ್ಷಕರ ಸಮ್ಮುಖತೆ ತಪ್ಪಿ ಬಹಳ ದಿನಗಳಾಗಿದ್ದರೂ ನನ್ನನ್ನು ಇಂದಿಗೂ ಸಮುದಾಯದ ಎದುರಿಗೆ ರಂಗಕರ್ಮಿಯಾಗಿ ನಿಲ್ಲಿಸುತ್ತಿರುವುದರಿಂದ ಜೀವನವು ನನ್ನ ಪಾಲಿಗೆ ಎಷ್ಟೊಂದು ಉದಾರವಾಗಿ ವರ್ತಿಸಿದೆ ಎಂದು ಗೊತ್ತಾಗುತ್ತದೆ. ಜನರು ನನಗೆ ತೋರಿರುವ ಮತ್ತು ಈಗಲೂ ತೋರುತ್ತಿರುವ ಪ್ರೀತಿಯಿಂದ ನನ್ನ ಕಂಠ ಕೃತಜ್ಞತೆಯಿಂದ ಬಿಗಿದು ಬರುತ್ತದೆ. ಈ ಪ್ರಸಂಗದಲ್ಲಿ ಏನೇನೋ ಹೇಳಬೇಕು ಎನಿಸಿದರೂ ಸಮಾಜದ ಋಣಭಾರದಿಂದ ನನಗೆ ಮಾತೇ ಬರದಂತಾಗಿದೆ. ಎಷ್ಟೊಂದು ಜನರ ಋಣ ನನ್ನ ಮೇಲಿದೆ. ಅವರ ಪ್ರೀತಿ ಅಪಾರವಾದುದು. ಅದನ್ನು ಸ್ವೀಕರಿಸಲು ನನ್ನ ಜೋಳಿಗೆ ಚಿಕ್ಕದು. ನನ್ನನ್ನು ಕಲಾವಿದನನ್ನಾಗಿ ಮಾಡಿದ ಪರಿಯು ಚಿತ್ರಪಟದಂತೆ ನನ್ನ ಕಣ್ಮುಂದೆ ನಿಂತಿದೆ.

ನಾನು ಒಂದು ತೀರ ಸಾದಾ ಕುಟುಂಬದಲ್ಲಿ ೧೯೧೪ರಲ್ಲಿ ಹುಟ್ಟಿದವ. ತಾರೀಖು ಗೊತ್ತಿಲ್ಲ. ಅವ್ವ ಬಾಳಮ್ಮ, ತಂದೆ ಕರಿಬಸಪ್ಪ. ಇವರಿಗೆ ನಾವು ಮೂರು ಮಕ್ಕಳು. ಅಣ್ಣ ಬಸಪ್ಪ, ಅಕ್ಕ ವೀರವ್ವ ಮತ್ತು ನಾನು. ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಏಣಗಿ ನನ್ನೂರು. ನಮಗೆ ಪೂರ್ವಾರ್ಜಿತವಾಗಿ ಹದಿನಾಲ್ಕು ಎಕರೆ ಹೊಲವಿತ್ತು. ಅದು ಬಾಗಾಯತಲ್ಲ ಅಥವಾ ನೀರಾವರಿಯಲ್ಲ. ತಂದೆ ಇದ್ದಿದ್ದರೆ ಅಷ್ಟರಲ್ಲಿಯೇ ಉಂಡುಟ್ಟು ಬದುಕಬಹುದಿತ್ತೇನೋ. ಆದರೆ ನನ್ನ ಬಾಲ್ಯದಲ್ಲಿ ಆ ಭಾಗ್ಯ ನನಗಿಲ್ಲವಾಯಿತು. ನಾನು ಹುಟ್ಟಿದ ಮೂರು ವರ್ಷಕ್ಕೆ  ತಂದೆ ತೀರಿಕೊಂಡರು. ೧೨-೧೩ ವರ್ಷದವನಿದ್ದಾಗ ಅಕ್ಕ, ಅಣ್ಣನು ತೀರಿಕೊಂಡರು. ಹೊಲವು ಸಾಲದಲ್ಲಿ ಒತ್ತೆ ಬಿತ್ತು.

ನನ್ನ ತಾಯಿ ಸ್ವಲ್ಪ ಸ್ಥಿತಿವಂತರ ಮನೆಯಿಂದ ಬಂದವಳು. ಅದರಿಂದ ಅವಳಿಗೆ ಹೊಲದಲ್ಲಿ ಕೂಲಿಮಾಡುವ ಅಭ್ಯಾಸವಿರಲಿಲ್ಲ. ಆದರೆ ದುರ್ದೈವ ಆಕೆಯಿಂದ ಅದನ್ನೂ ಮಾಡಿಸಿತು.

ನನ್ನ ಅವ್ವ ಬೇರೆಯವರ ಹೊಲದಲ್ಲಿ ಕೆಲಸಕ್ಕೆ ಹೋಗಲು ಮನಸ್ಸು ಗಟ್ಟಿ ಮಾಡಿದಳು. ದುಡೀಲಿಕ್ಕೂ ಹೋದಳು. ಆದರೆ ಬೇರೆ ಆಳುಗಳಂತೆ ಇವಳಿಂದ ಕೆಲಸವಾಗುವುದಿಲ್ಲವೆಂದು ಕಂಡ ಸಾಹುಕಾರರು ನಾಳೆಯಿಂದ ಕೆಲಸಕ್ಕೆ ಬರಬೇಡವೆಂದು ಹೇಳಿದರು. ಕಣ್ಣೀರು ಹಾಕುತ್ತಿದ್ದ ಅವ್ವನಿಗೆ ಆಗ ನಾನು ನನ್ನ ಬಾಲಬುದ್ಧಿಗೆ ತಕ್ಕಂತೆ ಹೇಳಿದೆ.

'ಅವ್ವ, ನಾನೂ ನಿನ್ನ ಕೂಡ ಕೆಲಸಕ್ಕೆ ಬರ್ತೀನಿ. ಇಬ್ಬರೂ ದುಡಿದ್ರೆ ಒಂದೇ ಆಳಿನ ಲೆಕ್ಕ ಸಾಹುಕಾರರು ಕೊಡ್ಲಿ' ಎಂದೆ.

ಅವ್ವನಿಗೆ ನನ್ನನ್ನು ದುಡಿಸಲು ಮನಸ್ಸಿರಲಿಲ್ಲ. ನನ್ನ ಒತ್ತಾಯಕ್ಕೆ ಒಪ್ಪಿದಳು. ಇಬ್ಬರೂ ದುಡಿಯಲು ಯತ್ನಿಸಿದೆವು. ಆದರೆ ದುಡಿದು ಗೊತ್ತೇ ಇಲ್ಲದ ನನ್ನ ಕೈ ತುಂಬ ಗುಳ್ಳೆಗಳೆದ್ದವು. ಹಾಗಾಗಿ ಅದೂ ಸಾಗಲಿಲ್ಲ. ಒಮ್ಮೆಯಂತೂ ಕಿತ್ತು ತಿನ್ನುವ ಬಡತನ ನಮ್ಮ ಮೇಲೆ ಎಂತಹ ಸ್ಥಿತಿ ತಂದಿತೆಂದರೆ ಅದು ನೆನಪಾದರೆ ಈಗಲೂ  ಕಣ್ಣಲ್ಲಿ ನೀರು ಬರುತ್ತದೆ. ಒಂದು ದಿನ ರಾತ್ರಿ ಅವ್ವ ನನಗೆ ಊಟ ಬಡಿಸಿದಳು. ನಾನು ಉಂಡೆ. ಕೂಡಲೆ ಆಕೆ ಮಲಗಲು  ಹಾಸಿಗೆ ತಯಾರಿಸಿದಳು. ಆಗ ನಾನು 'ಅವ್ವಾ, ನೀ ಊಟಮಾಡುವಂಗಿಲ್ಲೇನು?' ಅಂತ ಕೇಳಿದೆ.

ಆಕೆ ಏನೇನೋ ಹಾರಿಕೆ ಉತ್ತರ ಕೊಟ್ಟಳು. ಅಂದು ಇಬ್ಬರಿಗೂ ಆಗುವಷ್ಟು ರೊಟ್ಟಿ ಮನೆಯಲ್ಲಿರಲಿಲ್ಲವೆಂಬ ಸತ್ಯ ಸಂಗತಿ ನನಗೆ ತಿಳಿಯಿತು.

'ಅವ್ವಾ, ನಾಳೆಯಿಂದ ನಾವಿಬ್ರೂ ಕೂಡಿಯೇ ಊಟ ಮಾಡೋಣ. ಒಂದೇ ರೊಟ್ಟಿ ಇದ್ದರೆ ಅರ್ಧ ಅರ್ಧ ತಿನ್ನೋಣ' ಎಂದು ಹೇಳಿದೆ.

ಆಗ ಆಕೆ ನನ್ನನ್ನು ತಬ್ಬಿಕೊಂಡು ಅತ್ತಾಗ ನಾನೂ ಅತ್ತುಬಿಟ್ಟೆ.

ಇದಕ್ಕೂ ಮೊದಲು ಒಂದು ಘಟನೆ ಹೇಳ್ತೀನಿ. ನಾನು ಆರೇಳು ವರ್ಷದವನಿದ್ದಾಗ ನಡೆದ ಘಟನೆಯಿದು. ನಮ್ಮೂರಿನ ಸಮೀಪ ಸಂತಿಯಾಗೋ ಊರು ಅಂದ್ರೆ ಬೈಲಹೊಂಗಲ. ಆ ಸಂತಿಗೆ ಪ್ರತಿ ಶುಕ್ರವಾರ ಎಲ್ಲಾರೂ ಹೋಗ್ತಿದ್ರು. ಅದ್ರಂತೆ ನಮ್ಮವ್ವನೂ ಹೋಗಿದ್ಲು. ಸಂತಿಯಿಂದ ಬರೋವಾಗ ಮಕ್ಕಳಿಗೆ ತಿನ್ನಲಾಕ ಏನಾದ್ರೂ ತರ್ತಾಳೆಂಬ ಆಸೆಯಿಂದ ಕಾಣಲು ಹೊಂಟೆ. ಆದರೆ ದೊಡ್ಡ ಮಳೆಯಿಂದಾಗಿ ಮುಂದೆ ಹೋಗಲಾರದೆ ಕಾಲುವೆಯಲ್ಲಿ ಜಾರಿ ಬಿದ್ದೆನಂತೆ. ಮ್ಯಾಲೆ ಬರಾಕ ತ್ರಾಣವುಳಿದಿರಲಿಲ್ಲ. ತೇಲುತ್ತ ತೇಲುತ್ತ ಹೊಂಟಾಗ ಹಿರಿಯರೆಲ್ಲ ಕೂಡುವ ಮಠಪತಿಯವರ ಕಟ್ಟೆಯಲ್ಲಿ ಕುಂತವರು ನೋಡಿ ಮ್ಯಾಲ ಎತ್ತಿ ಉಪಚರಿಸಿದರಂತೆ.

ಇಂತಹ ಅನೇಕ ಪ್ರಸಂಗಗಳನ್ನು ದಾಟಿ ಬಂದಿರುವ ನನ್ನ ಬದುಕಿನಲ್ಲಿ ನನಗೆ ಐಶ್ವರ್ಯವೂ ಲಭಿಸಿತು. ಆದರೆ ಗರ್ವ ಬರಲಿಲ್ಲ. ದುಡ್ಡಿನಿಂದ ನನಗೆ ಮದ ಬರಲಿಲ್ಲ. ಅದರಿಂದ ಯಾವ ವ್ಯಸನಕ್ಕೂ ನಾನು ತುತ್ತಾಗಲಿಲ್ಲ. ಇದು ನನ್ನ ಅವ್ವಳ ಸ್ಮರಣೆಯ ಫಲ ಎಂದು ಇಲ್ಲಿ ನೆನಸಿಕೊಳ್ಳಲಾರದೆ ಇರಲಾರೆ.

ಇನ್ನು ನಾನು ಓದಿದ್ದು ನಾಲ್ಕನೇ ಇಯತ್ತೆಯವರೆಗೆ ಮಾತ್ರ. ನನ್ನ ಬಡತನ, ಅಜ್ಞಾನ– ಇವನ್ನು ಮುಚ್ಚಿಡಲು ನಾನು ಬಯಸುವುದಿಲ್ಲ. ಇಂಥಾದ್ದರಲ್ಲಿ ದೈವದತ್ತವಾಗಿ ನನಗೆ ಇದ್ದದ್ದು ಒಳ್ಳೆಯ ಕಂಠ. ಅದರಿಂದ ಶಾಲೆಯಲ್ಲಿ ನನ್ನಿಂದ ಕವಿತೆಗಳನ್ನು ಹಾಡಿಸಿ, ಗುರುಗಳು ಸಂತೋಷಪಡುತ್ತಿದ್ದರು. ಭಜನೀ ಮೇಳದಲ್ಲಿ ನನ್ನಿಂದ ಹಾಡಿಸಿ ನಮ್ಮೂರವರು ಸಂತೋಷ ಪಡುತ್ತಿದ್ದರು. ನಮ್ಮೂರ ರಸಿಕರು ಬಯಲಾಟ ಮಾಡಿದರೆ ಅದರಲ್ಲಿ ನನಗೆ ಬಾಲ ಪಾತ್ರ ಕೊಡುತ್ತಿದ್ದರು. ನನ್ನ ಬಾಲಪಾತ್ರವನ್ನು ಮೆಚ್ಚಿ ಬೆನ್ನು ತಟ್ಟುತ್ತಿದ್ದರು.

ಅಲ್ಲಿಯವರೆಗೂ ಆಟ ಆಡ್ತಿದ್ರು. ನಾಟಕ ಆಡಿರಲಿಲ್ಲ. ಗರುಡ ಸದಾಶಿವರಾಯರು ಬರೆದ 'ಪಾದುಕಾ ಪಟ್ಟಾಭಿಷೇಕ' ನಾಟಕ ಪ್ರಾರಂಭ ಮಾಡಿದ್ರು. ಅದರಲ್ಲಿ ನನಗೆ ಭರತನ ಪಾತ್ರ ಕಟ್ಟಿಟ್ಟಿದ್ದು. ಜನರ ಮೆಚ್ಚಿಗೆಯಂತೂ ಇದ್ದದ್ದೇ.

ಈ ಮೆಚ್ಚಿಗೆಯಿಂದ ಆಗ ನನ್ನನ್ನು ಕಂಪನಿಯವರು ಪಾತ್ರ ಮಾಡಾಕ ಕರ್‍ಯಾಕ ಬಂದ್ರು. ನಮ್ಮೂರವರೆಲ್ಲರಿಗೂ ಸಂತೋಷ. ಹೆಮ್ಮೆ. ನಮ್ಮೂರ ಹಿರಿಯರ ಜೊತೆಗೆ ಹೋಗಿ ಭರತನ ಪಾತ್ರ ಮಾಡಿದೆ. ಜನ ಮೆಚ್ಚಿದರು. ವಿಶೇಷವೆಂದರೆ, ಆ ನಾಟಕದಲ್ಲಿ ದಶರಥನ ಪಾತ್ರ ವಹಿಸಿದವರು ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು. ನನ್ನ ಪಾತ್ರ ನೋಡಿ ಬೆನ್ನು ತಟ್ಟಿದರು. ಮುಂದೆ ಕೆಲವು ದಿನಗಳ ನಂತರ ಧಾರವಾಡದಿಂದ ಶಿವಲಿಂಗ ಸ್ವಾಮಿಗಳು ನನ್ನನ್ನು ತಮ್ಮ ಲಿಂಗರಾಜ ನಾಟ್ಯ ಸಂಘಕ್ಕೆ ಕರೆಸಿಕೊಂಡರು. ಅದು ೧೯೨೮ನೇ ಇಸವಿ. ಅವರು ಕಲ್ಲಾಗಿದ್ದ ನನ್ನನ್ನು ಕಟೆದು ಮೂರ್ತಿ ಮಾಡಿದರು. ಎಲ್ಲೋ ಬಿದ್ದು ಹೋಗಬಾರದೆಂದು ರಂಗಭೂಮಿ ಗುಡಿಯ ಒಂದು ಮೂಲೆಯಲ್ಲಿ ನನ್ನನ್ನು ನಿಲ್ಲಿಸಿದರು.



**ಕ್ಷೇತ್ರ :** ಓದುವುದು

**ಸಾಮರ್ಥ್ಯ : ಸುಮಾರು 2000 ಪದಗಳನ್ನು ಸ್ವತಂತ್ರವಾಗಿ ಓದಿ ಗ್ರಹಿಸುವುದು**

**ಆಶಯ :** ಆತ್ಮಕತೆಯು ಸಾಹಿತ್ಯದ ಒಂದು ಪ್ರಕಾರ. ಜೀವನದ ಪದರಗಳು ಇಲ್ಲಿ ಬಿಚ್ಚಿಕೊಳ್ಳುತ್ತವೆ. ಇಂತಹ ಆತ್ಮಕತೆಯನ್ನು ಓದುವಾಗ ಕಥಾನಾಯಕನ ನೋವು ನಲಿವುಗಳು ಅನುಭವಕ್ಕೆ ಬರುತ್ತವೆ. ಸುಖದುಃಖಗಳು ಅರ್ಥವಾಗುತ್ತವೆ. ಇವು ಯುವ ಜನರಲ್ಲಿ ಆತ್ಮಸ್ಥೈರ್ಯವನ್ನು ತುಂಬುತ್ತವೆ. ಈ ಆತ್ಮಕಥೆಯು ರಂಗಭೂಮಿಯ ಮೇರುನಟ ಏಣಗಿ ಬಾಳಪ್ಪನವರದು. ನಾಟಕದ ಮಜಲಿನ ಏಣಿಯನ್ನು ಏರುತ್ತಾ ಆಗಸದೆತ್ತರಕ್ಕೆ ಏರಿ ನಿಂತ ಈ ರಂಗನಟನ ಸಾಧನೆ ಮಹತ್ತರ.

## ನಿರೂಪಕರ ಪರಿಚಯ

ಡಾ. ಗಣೇಶ ಅಮೀನಗಡ ಅವರು ಬಾಗಲಕೋಟೆ ಜಿಲ್ಲೆಯ ಅಮೀನಗಡದವರು. ಹಂಪಿ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಪತ್ರಿಕೋದ್ಯಮದಲ್ಲಿ ವಿಶೇಷ ಆಸಕ್ತಿಯುಳ್ಳ ಇವರು ಪ್ರಸ್ತುತ ಮೈಸೂರಿನಲ್ಲಿ ಪ್ರಜಾವಾಣಿ ಪತ್ರಿಕೆಯ ಮುಖ್ಯ ವರದಿಗಾರರಾಗಿರುತ್ತಾರೆ. 'ಕೈದಿಗಳ ಕಥನ' ಮುಂತಾಗಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವರ 'ಏಣಿಯಿಂದ ರಂಗದ ಏಣಿಗೆ' ಎಂಬ ಕೃತಿಯಿಂದ ಪ್ರಸ್ತುತ ಭಾಗವನ್ನು ಆರಿಸಲಾಗಿದೆ.

## ಓದಿ ತಿಳಿಯಿರಿ

ಸಮುದಾಯ–ಗುಂಪು, ಸಮೂಹ; ಸಮ್ಮುಖ–ಎದುರು, ಮುಂಭಾಗ; ಋಣ–ಸಾಲ, ಹಂಗು; ಪರಿ–ರೀತಿ, ಬಾಗಾಯತ–ತೆಂಗು, ಅಡಿಕೆ ಮೊದಲಾದ ಬೆಳೆ ಬೆಳೆಯುವ ನೀರಾವರಿ ಜಮೀನು, ಒತ್ತೆ–ಅಧಾರವಾಗಿ ಕೊಡುವ ವಸ್ತು, ಅಡವು; ಹಾರಿಕೆ ಉತ್ತರ–ವಿಷಯವನ್ನು ಮರೆಮಾಚುವ ಉತ್ತರ; ವ್ಯಸನ–ಚಾಳಿ, ದುರಭ್ಯಾಸ ; ಸಂಗ–ಸಹವಾಸ; ರಂಗಕರ್ಮಿ–ನಾಟಕ ಕಲಾವಿದ; ಅಪಾರ–ಎಲ್ಲೆ ಇಲ್ಲದ, ಅಧಿಕವಾದ; ಪಿತ್ರಾರ್ಜಿತ–ತಂದೆಯಿಂದ ಅಥವಾ ಹಿರಿಯರಿಂದ ಸಂಪಾದಿಸಿದುದು; ನೀರಾವರಿ–ವ್ಯವಸಾಯಕ್ಕೆ ನೀರು ಒದಗಿಸಲು ಮಾಡಿರುವ ವ್ಯವಸ್ಥೆ; ದುರ್ದೈವ–ದೌರ್ಭಾಗ್ಯ; ತ್ರಾಣ–ಶಕ್ತಿ ; ಇಯತ್ತೆ–ತರಗತಿ;



## ಅಭ್ಯಾಸ

**ಅ. ಈ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಏಣಗಿ ಬಾಳಪ್ಪನವರು ತಮ್ಮನ್ನು ಏನೆಂದು ಗುರುತಿಸಿಕೊಂಡಿದ್ದಾರೆ?

೨. 'ಪಾದುಕಾ ಪಟ್ಟಾಭಿಷೇಕ' ನಾಟಕವನ್ನು ಬರೆದವರು ಯಾರು?

೩. ಪಾದುಕಾ ಪಟ್ಟಾಭಿಷೇಕ ನಾಟಕದಲ್ಲಿ ಏಣಗಿಯವರು ಯಾವ ಪಾತ್ರ ವಹಿಸುತ್ತಿದ್ದರು?

೪. ರಂಗಕಲಾವಿದ ಬಾಳಪ್ಪನವರ ಹುಟ್ಟೂರು ಎಲ್ಲಿದೆ?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ನಟನಿಗೂ ಸಮುದಾಯಕ್ಕೂ ಇರುವ ಸಂಬಂಧದ ಬಗ್ಗೆ ಏಣಗಿ ಬಾಳಪ್ಪನವರು ಏನು ಹೇಳುತ್ತಾರೆ?

೨. ಏಣಗಿ ಬಾಳಪ್ಪನವರ ಕುಟುಂಬವನ್ನು ಕುರಿತು ಬರೆಯಿರಿ.

೩. ಅವ್ವನ ಸ್ಮರಣೆಯ ಫಲ ಎಂದು ಬಾಳಪ್ಪನವರು ಏನನ್ನು ನೆನಸಿಕೊಳ್ಳುತ್ತಾರೆ?

ಇ. ಕೆಳಗಿನ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಏಣಗಿ ಬಾಳಪ್ಪನವರು ತಮ್ಮ ಮೇಲೆ ಜನರಿಗಿರುವ ಪ್ರೀತಿಯನ್ನು ಯಾವ ರೀತಿಯಲ್ಲಿ ತಿಳಿಸಿದ್ದಾರೆ?

೨. ಬಾಳಪ್ಪನವರ ಬಾಲ್ಯದಲ್ಲಿ ಅವರ ತಾಯಿ ಬಡತನದಿಂದ ಪಟ್ಟ ಕಷ್ಟವನ್ನು ಅವರು ಹೇಗೆ ವಿವರಿಸಿದ್ದಾರೆ?

ಈ. ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ.

೧. ಮೀನಿಗೆ ನೀರಿನ ಸಂಗವಿರುವಂತೆ, ನಟನಿಗೆ ಇರುವ ಸಂಗ__________

೨. ಬಾಳಪ್ಪನವರು ಹುಟ್ಟಿದ ಇಸವಿ__________

೩. ಲೇಖಕರ ಊರಲ್ಲಿ ಸಂತೆಯಾಗುವ ಸ್ಥಳದ ಹೆಸರು__________

೪. ಬಾಳಪ್ಪನವರಿಗೆ ಐಶ್ವರ್ಯ ಬಂದರೂ ಬಾರದೇ ಇದ್ದ ಅಂಶ ಎಂದರೆ__________

## ಭಾಷಾಭ್ಯಾಸ



### ಪ್ರಾದೇಶಿಕ ಶಬ್ದಗಳು

ಮಾಡುವಂಗಿಲ್ಲೇನು–ಮಾಡುವ ಹಾಗೆ ಇಲ್ಲವೇನು ; ಸಂತಿ–ಸಂತೆ; ಹೊಂಟೆ–ಹೊರಟೆ; ಮ್ಯಾಲೆ–ಮೇಲೆ; ಬರಾಕ–ಬರಲಿಕ್ಕೆ; ಭಜನೀ–ಭಜನೆ; ಇಯತ್ತೆ–ತರಗತಿ, ವರ್ಗ.

## ಇವುಗಳನ್ನು ವಾಕ್ಯಗಳಲ್ಲಿ ಬಳಸಿ

ಉತ್ತರ ಕರ್ನಾಟಕ ಭಾಗದಲ್ಲಿ ನಿತ್ಯ ಪ್ರಯೋಗವಾಗುವ ಪದಗಳನ್ನು ಕೆಳಗೆ ಅರ್ಥಸಹಿತವಾಗಿ ನೀಡಲಾಗಿದೆ. ಈ ಪ್ರಾದೇಶಿಕ ಭಾಷಾ ಪದಗಳನ್ನು ಬಳಸಿ ನಿಮ್ಮದೇ ವಾಕ್ಯಗಳನ್ನು ರಚಿಸಿ.

ಶಾಣ್ಯಾ–ಜಾಣ; ಕರ್‍ಯಾಕ–ಕರೆಯಲಿಕ್ಕೆ; ಪಟಗಾ–ತಲೆರುಮಾಲು; ಬಕ್ರಿ–ರೊಟ್ಟಿ; ಶೇಂಗಾ–ಕಡಲೆಕಾಯಿ; ಒಣಗಿ–ಪಲ್ಯ; ಸನಿಕೆ–ಗುದ್ದಲಿ; ಹಟ್ಟಿ–ಕೊಟ್ಟಿಗೆ; ದಡ್ಡಿ–ಹುಲ್ಲಿನ ಗುಡಿಸಲು; ಹಚ್ಚು–ಅಂಟಿಸು; ಧ್ಯಾನ–ನೆನಪು.

## ಚಟುವಟಿಕೆ

ನೀವು ನೋಡಿರುವ ನಾಟಕವನ್ನು ಸಂಕ್ಷಿಪ್ತವಾಗಿ ಕಥೆಯ ರೂಪದಲ್ಲಿ ಬರೆಯಿರಿ.

## ಭಾಷಾಭ್ಯಾಸ

### ಲೇಖನ ಚಿಹ್ನೆಗಳು-೩

### ೧. ಗೆರೆಗಳು :

#### ಅ) ಕಿರುಗೆರೆ

- ಎರಡು ಪದಗಳನಡುವೆ ರೂಪ ವ್ಯತ್ಯಾಸವನ್ನು ಸೂಚಿಸಲು ಕಿರುಗೆರೆ ಬಳಸಬಹುದು

  ಬಾಹ್ಯ-ಹೊರಗಿನ; ಡಂಭ- ಮೋಸ; ಮಾನಸ-ಮನಸ್ಸು;

  ಒಡಲು-ಶರೀರ; ಶಂಭು- ಈಶ್ವರ; ಅಂಜಿ-ಹೆದರಿ;

- ಎರಡು ನಾಮಪದಗಳ ನಡುವೆ ಮತ್ತು ಎಂಬ ಅರ್ಥದಲ್ಲಿ ಕಿರುಗೆರೆ ಬಳಸಬಹುದು.

  ಭಾರತ-ಪಾಕ್ ಸಂಬಂಧ ಚರ್ಚೆಯಾಯಿತು.

  ಬೆಂಗಳೂರು-ಮಂಗಳೂರು ನಡುವೆ ಬಸ್ ಸಂಚಾರ ಸ್ಥಗಿತ.

#### ಆ) ಲಂಬಗೆರೆ

- ಹೆಸರಿನ ಮುಂದೆ ಪ್ರಶಸ್ತಿ, ಹುದ್ದೆಗಳ ಸಂಕ್ಷೇಪವನ್ನು ಸೂಚಿಸುವಾಗ ಒಂದು ಅಥವಾ ಎರಡು ಲಂಬಗೆರೆ ಬಳಸಬಹುದು.

  **ಉದಾ: ಡಾ। ಪ್ರೊ। ವಿ। ಡಾ॥ ಪ್ರೊ॥ ವಿ॥**

- ಪದ್ಯಗಳ ಛಂದಸ್ಸು ರೂಪದಲ್ಲಿ ಅನುಪಲ್ಲವಿ, ಸಾಲಿನ ಕೊನೆ ಸೂಚಿಸುವಾಗ ಒಂದು ಪಲ್ಲವಿ ಘಟಕದ ಮುಕ್ತಾಯ ಸೂಚಿಸಲು ಎರಡು ಲಂಬಗೆರೆ ಬಳಸಬಹುದು

  ಕಂದ ವೈರಿವ್ಯೂಹವಸದಳ
  ವೆಂದೆನಿಪುದದರೊಳಗೆ ಕೃಪ ಗುರು
  ನಂದನರು ರಾಧೇಯ ಭೂರಿಶ್ರವ ಜಯದ್ರಥರು।
  ಇಂದುಧರನಡಹಾಯ್ದರೊಮ್ಮೆಗೆ
  ಹಿಂದುಮುಂದೆನಿಸುವರು ನೀಗೆಲು
  ವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ॥

#### ಆ) ಓರೆಗೆರೆ

- ಪದ ಪದಪುಂಜಗಳ ನಡುವೆ ಪರ್ಯಾಯ ಪದ ಸೂಚಿಸಲು ಓರೆಗೆರೆ ಬಳಕೆಯಾಗುತ್ತದೆ

  ಅವನು/ಅವಳು ಗಂಡಸು/ಹೆಂಗಸು ಕನ್ನಡ/ಇಂಗ್ಲಿಷ್/ಹಿಂದಿ

## ವ್ಯಾಕರಣ

### ಸಮಾಸಗಳು ಭಾಗ-೧

**ಕೆಳಗೆ ನೀಡಿರುವ ವಾಕ್ಯವೃಂದವನ್ನು ಗಮನಿಸಿ.**

*ಮೈಸೂರಿನಲ್ಲಿ **ಅರಸಿನ ಮನೆ** ಇದೆ. ಅರಸಿನ ಮನೆಯಲ್ಲಿ **ಬಿಳಿದು ಕೊಡೆಯೂ** ಇದೆ. ಅರಸಿನ ಮನೆಯನ್ನು **ನಾಲ್ಕು ಮಡಿ** ಕೃಷ್ಣರಾಜರು ಕಟ್ಟಿಸಿದರು. **ಅರಸಿನ ಮನೆಯಲ್ಲಿ** ಓಡಾಡಿ ನನಗೆ **ಕಾಲ ಅಡಿ** ನೋವು ಬಂದಿತು. **ಅರಸಿನ ಮನೆಯಲ್ಲಿ ಆನೆಯೂ ಕುದುರೆಯೂ ದನವೂ ಇವೆ.** ಅರಸಿನ ಮನೆಯನ್ನು ನೋಡು ನನ್ನ ಜೊತೆ **ಚಕ್ರವನ್ನು ಕೈಯಲ್ಲಿ ಹಿಡಿದವನು** ಇದ್ದ. ಇಬ್ಬರೂ ಅರಸಿನ ಮನೆಯನ್ನು **ಮೈಯನ್ನು ಮರೆತು** ನೋಡಿದೆವು.*

ಮೇಲಿನ ವಾಕ್ಯವೃಂದದಲ್ಲಿ **ಅರಸಿನ ಮನೆ, ಬಿಳಿದು ಕೊಡೆ, ನಾಲ್ಕು ಮಡಿ, ಕಾಲ ಅಡಿ, ಆನೆಯೂ ಕುದುರೆಯೂ ಚಕ್ರವನ್ನು ಕೈಯಲ್ಲಿ ಹಿಡಿದವನು** ಎಂಬ ಪದಗಳನ್ನು ಬಿಡಿಸಿ ಬರೆಯಲಾಗಿದೆ. ಈ ಪದಗಳನ್ನು ಕೂಡಿಸಲು ಸಾಧ್ಯ. ಹೀಗೆ ಕೂಡಿಸುವುದರಿಂದ ಅಕ್ಷರಗಳ ಅನಗತ್ಯ ಬಳಕೆ ಮತ್ತು ಉಚ್ಚಾರಣೆಯ ಕಾಲ ಕಡಿಮೆಯಾಗುತ್ತದೆ ಮತ್ತು ಉಚ್ಚಾರಣೆ ಮತ್ತಷ್ಟು ಸುಲಭವಾಗುತ್ತದೆ. ಈಗ ಕೂಡಿಸಿ ನೋಡೋಣ :

*ಮೈಸೂರಿನಲ್ಲಿ **ಅರಮನೆ** ಇದೆ. ಅರಮನೆಯಲ್ಲಿ **ಬೆಳ್ಗೊಡೆಯೂ** ಇದೆ. ಅರಮನೆಯನ್ನು **ನಾಲ್ವಡಿ** ಕೃಷ್ಣರಾಜರು ಕಟ್ಟಿಸಿದರು. **ಅರಮನೆಯಲ್ಲಿ** ಓಡಾಡಿ ನನಗೆ **ಅಂಗಾಲು** ನೋವು ಬಂದಿತು. **ಅರಮನೆಯಲ್ಲಿ ಆನೆ ಕುದುರೆ ದನಗಳು ಇವೆ.** ಅರಮನೆಯನ್ನು ನೋಡುವಾಗ ನನ್ನ ಜೊತೆ **ಚಕ್ರಪಾಣಿ** ಇದ್ದ. ಇಬ್ಬರೂ ಅರಮನೆಯನ್ನು **ಮೈಮರೆತು** ನೋಡಿದೆವು.*

*ಹೀಗೆ ಕೂಡಿಸುವುದು ಎಂದರೆ ಸಮಾಸಮಾಡುವುದು ಎಂದು ಅರ್ಥ.* ಹೀಗೆ ಕೂಡಿಸಿದ ಪದದಲ್ಲಿ ಎರಡು ಭಾಗಗಳಿವೆ. ಒಂದನ್ನು ಪೂರ್ವಪದ ಅದರ ಎದುರಿಗೆ ಬರುವುದನ್ನು ಉತ್ತರಪದ ಎಂದೂ ಕರೆಯಲಾಗುತ್ತದೆ. ಕೂಡಿಸಿದ ಪದವನ್ನು ಮತ್ತೆ ಬಿಡಿಸಿ ಬರೆದರೆ ಅದು ವಿಗ್ರಹವಾಕ್ಯ. ಸಮಾಸವಾದ ಪದವನ್ನು ವಾಕ್ಯದಲ್ಲಿ ಬಳಸಿದಾಗ ಯಾವ ಪದದ ಅರ್ಥ ಮುಖ್ಯವಾಗುತ್ತದೆ ಎಂಬುದರ ಆಧಾರದ ಮೇಲೆ ವಿವಿಧ ಸಮಾಸಗಳನ್ನು ಗುರುತಿಸಲಾಗುತ್ತದೆ.

ಉದಾ : **(ಅರಮನೆ=ಅರಸಿನ ಮನೆ; ಪೂರ್ವಪದ =ಅರಸಿನ; ಉತ್ತರಪದ =ಮನೆ) ಅರಸಿನ ಮನೆಯಲ್ಲಿ ಸಿಂಹಾಸನವಿದೆ.** ಈ ವಾಕ್ಯದಲ್ಲಿ ಸಿಂಹಾಸನ ಇರುವುದು ಮನೆಯಲ್ಲಿ ಆ ಮನೆ ಯಾರದು ಎಂದಾಗ ಅದು **ಅರಸನದು** ಎಂಬ ಉತ್ತರ ದೊರೆಯುತ್ತದೆ. ಇಲ್ಲಿ ಮನೆ ಎಂಬ ಪದದ ಅರ್ಥ ಮುಖ್ಯ. ಆದುದರಿಂದ ಇದು ಉತ್ತರ ಪದದ ಅರ್ಥ ಪ್ರಧಾನವಾದ ಸಮಾಸ.

## ಸಮಾಸಗಳು

**ಉತ್ತರ ಪದದ ಅರ್ಥ ಪ್ರಧಾನವಾದ ಸಮಾಸಗಳು :**
೧. ತತ್ಪುರುಷ ಸಮಾಸ
೨. ಕರ್ಮಧಾರೆಯ ಸಮಾಸ
೩. ದ್ವಿಗು ಸಮಾಸ

**ಪೂರ್ವ ಪದದ ಅರ್ಥ ಪ್ರಧಾನವಾದ ಸಮಾಸ :**
೪. ಅಂಶಿ ಸಮಾಸ

**ಎರಡೂ ಪದಗಳ ಅರ್ಥ ಪ್ರಧಾನವಾದ ಸಮಾಸ :**
೫. ದ್ವಂದ್ವ ಸಮಾಸ

**ಬೇರೆಯದೆ ಆದ ಅರ್ಥ ಪ್ರಧಾನವಾದ ಸಮಾಸ :**
೬. ಬಹುವ್ರೀಹಿ ಸಮಾಸ



### ತತ್ಪುರುಷ ಸಮಾಸ

೧. ಮಳೆಯ ಕಾಲ–ಮಳೆಗಾಲ

೨. ತಲೆಯಲ್ಲಿ ನೋವು–ತಲೆನೋವು

೩. ಮಲ್ಲಿಗೆಯ ಹೂವು–ಮಲ್ಲಿಗೆ ಹೂವು

೪. ಮನೆಯ ಕೆಲಸ–ಮನೆಗೆಲಸ

೫. ಅರಸಿನ ಮನೆ–ಅರಮನೆ

ಈ ಮೇಲಿನ ಪದಗಳನ್ನು ಗಮನಿಸಿದಾಗ 'ಮಳೆಯ' ಮತ್ತು 'ಕಾಲ' ಎಂಬ ಎರಡು ಪದಗಳನ್ನು ಸೇರಿಸಿ ಮಳೆಗಾಲ ಎಂದು ಹೇಳಲಾಗುತ್ತದೆ. ಹೀಗೆ ಕಾಲದ ಉಳಿತಾಯ ಹಾಗೂ ಸ್ಪಷ್ಟ ಅರ್ಥೈಸುವಿಕೆಗಾಗಿ ಪದಗಳನ್ನು ಕೂಡಿಸಿ ಬಳಸುತ್ತೇವೆ. ಹೀಗೆ ಎರಡು ನಾಮಪದಗಳು ಸೇರಿ ಸಮಾಸವಾದಾಗ ಉತ್ತರಪದದ ಅರ್ಥವು ಪ್ರಧಾನವಾಗಿದ್ದರೆ ಅಂತಹ ಸಮಾಸಗಳಿಗೆ ತತ್ಪುರುಷ ಸಮಾಸ ಎಂದು ಹೆಸರು.

### ಕರ್ಮಧಾರಯ ಸಮಾಸ

೧. ಹಿರಿದು ಮರ–ಹೆಮ್ಮರ

೨. ಕೆಂಪಾದ ತಾವರೆ–ಕೆಂದಾವರೆ

೩. ಮೆಲ್ಲಿತು ನುಡಿ–ಮೆಲ್ನುಡಿ

ಹೀಗೆ ಪೂರ್ವೋತ್ತರ ಪದಗಳು ವಿಶೇಷಣ–ವಿಶೇಷ್ಯ ಸಂಬಂಧದಿಂದ ಕೂಡಿ ಆಗುವ ಸಮಾಸಕ್ಕೆ ಕರ್ಮಧಾರಯ ಸಮಾಸ ಎಂದು ಹೆಸರು.

## ಪಾಠ ಪೂರಕ ಮಾಹಿತಿ

# ಏಣಗಿ ಬಾಳಪ್ಪ

ಕರ್ನಾಟಕದ ವೃತ್ತಿ ರಂಗಭೂಮಿ ಕಲಾವಿದರಲ್ಲಿ 'ನಾಟ್ಯಭೂಷಣ' ರೆಂಬ ಗೌರವಕ್ಕೆ ಪಾತ್ರರಾದವರು ಏಣಗಿ ಬಾಳಪ್ಪ. ಏಣಗಿ ಎಂಬುದು ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನಲ್ಲಿರುವ ಒಂದು ಸಣ್ಣ ಹಳ್ಳಿ. ಬಾಳಪ್ಪನವರು ಹುಟ್ಟಿ ಬೆಳೆದದ್ದು ಇಲ್ಲಿಯೇ. ವಯಸ್ಸಿನ ಆಧಾರದ ಮೇಲೆ ಹೇಳುವುದಾದರೆ ಇವರು ಹುಟ್ಟಿದ್ದು ೧೯೧೪ರಲ್ಲಿ. ತಂದೆ ಕರಿಬಸಪ್ಪ, ತಾಯಿ ಬಾಳಮ್ಮ. ಮನೆತನದ ಹೆಸರು ಲೋಕೂರ. ಇವರು ಓದಿದ್ದು ನಾಲ್ಕನೆಯ ಇಯತ್ತೆವರೆಗೆ. ೮–೧೦ವರ್ಷದವರಿದ್ದಾಗಲೇ ಬಾಳಪ್ಪನವರು ಮುಖಕ್ಕೆ ಬಣ್ಣ ಹಚ್ಚಿದರು. 'ಲವ–ಕುಶ' ದೊಡ್ಡಾಟದಲ್ಲಿ 'ಗಣಪತಿ' ಪಾತ್ರದ ಮೂಲಕ ಅವರು ಬಣ್ಣದ ಬದುಕಿಗೆ ನಾಂದಿ ಹಾಡಿದರು.

ಕೆಲವು ಕಾಲ ಜಮಖಂಡಿ ಕಂಪನಿ, ಸಂಪಗಾವಿ ಕಂಪನಿ, ಗೋಕಾಕ ಕಂಪನಿಗಳಲ್ಲಿಯೂ ಒಪ್ಪಂದದ ಆಧಾರದ ಮೇಲೆ ಪಾತ್ರಗಳನ್ನು ನಿರ್ವಹಿಸಿದರು. ಗೋಕಾಕ ಕಂಪನಿಯಿಂದ ಹೊರ ಬಂದ ಮೇಲೆ ೧೯೪೦ರಲ್ಲಿ ಶಾಂತಪ್ಪ ಹಾವೇರಿ, ರಾವಸಾಹೇಬ ಅಮ್ಮಣಗಿ, ಎಲ್, ಎಸ್. ಇನಾಮುದಾರರ ಜೊತೆಗೂಡಿ 'ವೈಭವಶಾಲಿ ನಾಟ್ಯಸಂಘ'ವನ್ನು ಪ್ರಾರಂಭಿಸಿದರು. ಇನಾಮದಾರರೊಂದಿಗೆ ವೈಭವಶಾಲಿಯನ್ನು ಐದಾರು ವರ್ಷ ಮುನ್ನಡೆಸಿದರು. ಆಮೇಲೆ ೧೯೪೭ರಲ್ಲಿ ಸ್ವಂತ ಒಡೆತನದಲ್ಲಿ 'ಕಲಾವೈಭವ ನಾಟ್ಯಸಂಘ ಬೆಳಗಾವಿ' ಹುಟ್ಟು ಹಾಕಿದರು.

೧೯೫೫ರಲ್ಲಿ ಪ್ರದರ್ಶನಕ್ಕೆ ಸಿದ್ಧವಾದ 'ಜಗಜ್ಯೋತಿ ಬಸವೇಶ್ವರ' ನಾಟಕದೊಂದಿಗೆ ಕಲಾವೈಭವದ ವೈಭವಪರಂಪರೆ ಶುರುವಾಯಿತು. ಬಾಳಪ್ಪನವರ ಬಸವಣ್ಣನ ಪಾತ್ರ ಭಾವುಕ ಪ್ರೇಕ್ಷಕರನ್ನು ಭಾವಪರವಶರನ್ನಾಗಿಸಿತು. ಬಾಳಪ್ಪನವರ ಬಣ್ಣದ ಬದುಕಿನಲ್ಲಿ ಈ ಪಾತ್ರ ಒಂದು ಮೈಲಿಗಲ್ಲಾಯಿತು. ಈ ನಾಟಕದಿಂದ ಬಾಳಪ್ಪನವರಿಗೆ ಕೀರ್ತಿ ಸಂಪತ್ತು ಧಾರಾಳವಾಗಿ ಹರಿದು ಬಂದವು. ಕಂಪನಿಯ ನಾಟಕಗಳು ತುಂಬ ಜನಪ್ರಿಯತೆ ಗಳಿಸಿದವು. ರಂಗಕಲೆಯ ಬಗ್ಗೆ ಕನಸು ಕಾಣುತ್ತ, ನನಸು ಮಾಡುತ್ತ ಬಾಳಪ್ಪನವರು ೧೯೮೩ರವರೆಗೆ ಕಲಾವೈಭವ ಮನ್ನಡೆಸಿದರು. ಕಂಪನಿ ನಿಂತ ಮೇಲೂ ಅವರ ರಂಗ ಚಟುವಟಿಕೆಗಳು ನಿಲ್ಲಲಿಲ್ಲ. ತರುಣ ಕಲಾವಿದರನ್ನು ಬೆಳೆಸುತ್ತ, ಹಳೆ–ಹೊಸ ನಾಟಕಗಳನ್ನು ಆಡಿಸುತ್ತ, ರಂಗಸಂಗೀತಕ್ಕೆ ಕಾಯಕಲ್ಪ ಒದಗಿಸುತ್ತ ಏಣಗಿ ಬಾಳಪ್ಪನವರು ಆಗಾಗ ಚಲನಚಿತ್ರಗಳಲ್ಲಿಯೂ ಅಭಿನಯಿಸುತ್ತ ಬಣ್ಣದ ಬದುಕಿನಲ್ಲಿ ಸಾರ್ಥಕತೆ ಪಡೆದಿದ್ದಾರೆ.

ಅವರು ಕರ್ನಾಟಕ ಹಾಗೂ ಮಹಾರಾಷ್ಟ್ರ ಜನರಿಂದ, ಸರಕಾರಗಳಿಂದ ಪಡೆದುಕೊಂಡಿರುವ ಗೌರವ–ಪ್ರಶಸ್ತಿಗಳು ಹೀಗಿವೆ: ಕರ್ನಾಟಕ ರಾಜ್ಯ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನಿಂದ ನಾಟಕಕಲಾ ನಿಪುಣ ಪ್ರಶಸ್ತಿ , ಮಹಾರಾಷ್ಟ್ರ ಬಸವ ಸಮಿತಿಯಿಂದ 'ಬಸವ ಭೂಷಣ' ಪದವಿ, ಹುಬ್ಬಳ್ಳಿ ಮೂರು ಸಾವಿರ ಮಠ ಇವರಿಂದ 'ನಾಟ್ಯಗಂಧರ್ವ' ಬಿರುದು, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯ ಸರಕಾರದ ಪ್ರತಿಷ್ಠಿತ 'ಗುಬ್ಬಿ ವೀರಣ್ಣ ಪ್ರಶಸ್ತಿ' ಹಂಪಿ ವಿಶ್ವವಿದ್ಯಾನಿಲಯದ ನಾಡೋಜ ಪ್ರಶಸ್ತಿ, ಕರ್ನಾಟಕ ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ ಚಂದನ ದೂರದರ್ಶನ ಪುರಸ್ಕಾರ.

## ಪೂರಕ ಪಾಠ

# ರಮಾಬಾಯಿ ಸರಸ್ವತಿ

– ಡಾ. ಉದಯಕುಮಾರ ಇರ್ವತ್ತೂರು



ಮಹಿಳೆಯರ ಸಾಮಾಜಿಕ, ಆರ್ಥಿಕ ಉನ್ನತಿಗಾಗಿ ದುಡಿದವರು ಪಂಡಿತಾ ರಮಾಬಾಯಿ ಸರಸ್ವತಿ. ಉಡುಪಿ ತಾಲ್ಲೂಕು ಮಾಳ ಗ್ರಾಮದ ಗಂಗಾಮೂಲ ಎಂಬ ಸ್ಥಳದಲ್ಲಿ ೧೮೫೮ನೇ ಇಸವಿ ಎಪ್ರಿಲ್ ೨೩ರಂದು ಹುಟ್ಟಿದರು. ಇವರ ತಂದೆ ಅನಂತಶಾಸ್ತ್ರಿ ಡೋಂಗ್ರೆ ಮತ್ತು ತಾಯಿ ಲಕ್ಷ್ಮಿಬಾಯಿ. ಅನಂತಶಾಸ್ತ್ರಿ ದಂಪತಿಗಳು ದೇಶ ಪ್ರವಾಸ ಮಾಡುತ್ತಿದ್ದಾಗ ತಲೆದೋರಿದ ಭೀಕರ ಬರಗಾಲದ ಸಮಯ ನಿಧನರಾದರು. ಮುಂದೆ ರಮಾಬಾಯಿಯವರಿಗೆ ಮದುವೆಯಾಯಿತು. ಆದರೆ ಮದುವೆಯಾಗಿ ಎರಡು ವರ್ಷವಾಗುವುದರೊಳಗೆ ಗಂಡ ಬಿಪಿನ್ ಬಿಹಾರಿ ದಾಸ್ ಕಾಲರಕ್ಕೆ ತುತ್ತಾಗಿ ಮರಣ ಹೊಂದಿದರು. ನಂತರ ರಮಾಬಾಯಿ ಅವರು ವಿದ್ಯಾಭ್ಯಾಸ ಮುಂದುವರಿಸಿ ಸಮಾಜ ಸೇವೆಗೆ ತನ್ನನ್ನು ಅಣಿಗೊಳಿಸಬೇಕೆಂದು ನಿರ್ಧರಿಸಿ ಪುಣೆಗೆ ಬಂದರು.

ಪುಣೆಯಲ್ಲಿ 'ಆರ್ಯ ಮಹಿಳಾ ಸಮಾಜ' ಸ್ಥಾಪಿಸಿದರು. ಶಿಕ್ಷಣ ಪಡೆದು ಜ್ಞಾನವನ್ನು ಮತ್ತು ಆತ್ಮಸ್ಥೈರ್ಯವನ್ನು ಗಳಿಸಿ ಸ್ವಾವಲಂಬಿಗಳಾಗಿ ಬದುಕುವಂತೆ ಹೆಣ್ಣು ಮಕ್ಕಳನ್ನು, ಬಾಲವಿಧವೆಯರನ್ನು ರಮಾಬಾಯಿ ಪ್ರೋತ್ಸಾಹಿಸಿದರು. ಇದಕ್ಕೆ ಪೂರಕವಾಗುವಂತೆ 'ಸ್ತ್ರೀ ಧರ್ಮ ನೀತಿ' ಎನ್ನುವ ಪುಸ್ತಕವನ್ನು ಪ್ರಕಟಿಸಿದರು. ಹಂಟರ್ ಆಯೋಗದ ಎದುರು ಹಾಜರಾದ ರಮಾಬಾಯಿ ಭಾರತದಲ್ಲಿ ಮಹಿಳೆಯರಿಗೆ ಶಿಕ್ಷಣದ ಅವಶ್ಯಕತೆಯ ಕುರಿತು ಸಮರ್ಥವಾದ ರೀತಿಯಲ್ಲಿ ವಾದ ಮಂಡಿಸಿದರು. ಇದು ಇಂಗ್ಲೆಂಡಿನ ರಾಣಿಯ ಗಮನಕ್ಕೆ ಬರುವ ಮೂಲಕ ಭಾರತದಲ್ಲಿ ಮಹಿಳೆಯರ ಪಾಲಿಗೆ ಶಿಕ್ಷಣ, ವೈದ್ಯಕೀಯ ಸೇವೆ ಮುಂತಾದ ಸವಲತ್ತುಗಳು ದೊರೆಯುವಂತಾಯಿತು.



ರಮಾಬಾಯಿಯವರು ದೇಶ ಸಂಚರಿಸುವ ವೇಳೆ ಚಳಿಯಿಂದ ರಕ್ಷಣೆ ಪಡೆಯಲು ಸೂಕ್ತ ಬಟ್ಟೆಗಳಿಲ್ಲದೆ ಜೀಲಂ ನದೀ ತೀರದ ಮರಳಿನಲ್ಲಿ ಹೂತು ತನ್ನನ್ನು ರಕ್ಷಿಸಿಕೊಳ್ಳಬೇಕಾಗಿ ಬಂತು. ಈ ಸಂದರ್ಭದಲ್ಲಿ ಶೀತಗಾಳಿಯಿಂದ ಬಾಧಿತಳಾಗಿ ಕಿವುಡಿಯಾದರು. ಕ್ರೈಸ್ತ ಸನ್ಯಾಸಿನಿಯರ ಸಹಕಾರ ಪಡೆದು ಇಂಗ್ಲಿಷ್ ವಿದ್ಯಾಭ್ಯಾಸ ಪಡೆಯಲು ಇಂಗ್ಲೆಂಡಿಗೆ ತೆರಳಿದರು.

ಮುಂದೆ ರಮಾಬಾಯಿ ಅಮೇರಿಕಾ ಪ್ರವಾಸ ಕೈಗೊಂಡರು. ಅಮೆರಿಕಾದಲ್ಲಿನ ಶಿಕ್ಷಣ ವ್ಯವಸ್ಥೆ, ಆರೋಗ್ಯ ಸೌಕರ್ಯ, ಉದ್ಯೋಗ ವ್ಯವಸ್ಥೆ, ಸಮಾಜ ಸೇವೆ ಇತ್ಯಾದಿ ಚಟುವಟಿಕೆಗಳನ್ನು ಅಭ್ಯಾಸ ಮಾಡಿದರು. ತಾಯ್ನಾಡಿಗೆ ಮರಳಿದ ನಂತರ ಅವರು ಅಭ್ಯಾಸ ಮಾಡಿದುದನ್ನು ಕಾರ್ಯಗತಗೊಳಿಸಲು ನಿರ್ಧರಿಸಿದರು. ಅವರ ಯೋಜನೆಗಳಿಗೆ ನೂರಾರು ಜನ ಸಹಾಯ ಹಸ್ತ ಚಾಚಿದರು.

ಈ ಸಹಕಾರದಿಂದಾಗಿ 'ರಮಾಬಾಯಿ ಅಸೋಸಿಯೇಶನ್' ಎನ್ನುವ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಸಮಾಜ ಸುಧಾರಕ ಕಾರ್ಯಗಳನ್ನು ನಡೆಸಿದರು. ೧೮೯೦ರಲ್ಲಿ ಸಂಭವಿಸಿದ ಕ್ಷಾಮದ ಪರಿಣಾಮವಾಗಿ ಬಡವರ್ಗದ ಮಹಿಳೆಯರು ಬದುಕುವುದು ಕಷ್ಟಕರವಾಯಿತು. ಇಂತಹ ಸಂದರ್ಭದಲ್ಲಿ ಭಾರತದ ಬುಂದೇಲ್‌ಖಂಡ, ಜಬಲ್‌ಪುರ ಮುಂತಾದೆಡೆ ಸಂಚರಿಸಿ ಮಹಿಳೆಯರಿಗೆ ಆಹಾರ, ಬಟ್ಟೆ ಒದಗಿಸಿದರು. ಅಲ್ಲಿನ ನಿರ್ಗತಿಕರನ್ನು ತನ್ನ ಆಶ್ರಮಕ್ಕೆ ಕರೆತಂದು ಆಸರೆ ನೀಡುವ ಕಾರ್ಯಮಾಡಿದರು. ಮುಂದೆ ಖೇಡ್‌ಗಾಂವ್‌ನಲ್ಲಿ 'ಮುಕ್ತಿ ಸದನ' 'ಕೃಪಾ ಸದನ' ಮತ್ತು 'ಪ್ರೀತಿ ಸದನಗಳು' ರಮಾಬಾಯಿಯವರಿಂದ ಸ್ಥಾಪನೆಗೊಂಡವು. ಈ ಸಂಸ್ಥೆಗಳು ಸಮಾಜದಲ್ಲಿ ಅನಾಥರಿಗೆ ಭರವಸೆಯನ್ನು ಹೊಸ ಬದುಕನ್ನು ನೀಡುತ್ತ ಬಂದವು. ರಮಾಬಾಯಿಯ ತ್ಯಾಗ, ಸೇವೆ ಮತ್ತು ಎದೆಗುಂದದೆ ಗುರಿಯೆಡೆಗೆ ಮುನ್ನಡೆದ ವ್ಯಕ್ತಿತ್ವ ಹಲವರಿಗೆ ಸ್ಫೂರ್ತಿಯಾಯಿತು. ಇವರಿಗೆ ಕಲ್ಕತ್ತೆಯಲ್ಲಿ ಸಾರ್ವಜನಿಕ ಮನ್ನಣೆಯಾಗಿ ಪಂಡಿತಾ ಮತ್ತು ಸರಸ್ವತಿ ಎಂಬ ಪ್ರಶಸ್ತಿಗಳನ್ನು ನೀಡಲಾಯಿತು. ಇವರ ಸೇವೆಯನ್ನು ಮೆಚ್ಚಿ ಅಂದಿನ ಸರಕಾರ ೧೯೧೯ರಲ್ಲಿ ಇವರಿಗೆ 'ಕೈಸರ್–ಇ–ಹಿಂದ್' ಎನ್ನುವ ಪದವಿಯನ್ನು ನೀಡಿ ಗೌರವಿಸಿತು. ೧೯೨೨ರಲ್ಲಿ ಇವರು ನಿಧನರಾದರು.



## ಲೇಖಕರ ಪರಿಚಯ



**ಡಾ. ಉದಯಕುಮಾರ್ ಇರ್ವತ್ತೂರು :** ಉಡುಪಿ ಜಿಲ್ಲೆಯ ಕಾರ್ಕಳ ತಾಲೂಕಿನ ಇರ್ವತ್ತೂರಿನವರಾದ ಡಾ. ಉದಯಕುಮಾರ್ ಅವರು ಪ್ರಸ್ತುತ ಮಂಗಳೂರು ವಿಶ್ವವಿದ್ಯಾನಿಲಯ ಕಾಲೇಜಿನಲ್ಲಿ ಸಹ ಪ್ರಾಧ್ಯಾಪಕರು. ಇವರು 'ಅಭಿವೃದ್ಧಿ – ವಾಸ್ತವ ಮತ್ತು ವಿಕಲ್ಪ', 'ಉಡುಪಿ ಜಿಲ್ಲೆ ಆಧುನೀಕರಣ', 'ಅಭಿವೃದ್ಧಿ ಮತ್ತು ಕೈಗಾರಿಕೆಗಳು', 'ವಾಣಿಜ್ಯ ಶಾಸ್ತ್ರ' ಹಾಗೂ "ಅಭಿವೃದ್ಧಿಯ ಅನೇಕಾಂತವಾದ" ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

## ಓದಿ ತಿಳಿಯಿರಿ

ಚೇತನ–ಮನಸ್ಸು, ಚೈತನ್ಯ; ಪಾಂಡಿತ್ಯ–ವಿದ್ವತ್ತು, ಜ್ಞಾನ; ವೇದಾಧ್ಯಯನ– ವೇದಗಳನ್ನು ಓದಿ ತಿಳಿಯುವುದು; ಸ್ಪಂದಿಸು– ಪ್ರತಿಕ್ರಿಯೆ ತೋರಿಸು; ತೀರ್ಥಕ್ಷೇತ್ರ– ಪವಿತ್ರ ಕ್ಷೇತ್ರ; ಭೀಕರ –ಭಯಾನಕ; ಬಳಲಿಕೆ–ಆಯಾಸ; ಚೇತರಿಸು–ಎಚ್ಚರಗೊಳ್ಳು; ಅಣಿಗೊಳಿಸು – ಸಿದ್ಧತೆ ಮಾಡು; ಆತ್ಮಸ್ಥೈರ್ಯ– ಅಂತರಂಗದಲ್ಲಿರುವ ಧೈರ್ಯ; ಬಾಧಿತ–ಪೀಡಿತ; ಕ್ಷಾಮ – ಬರ; ಮೂರಾಬಟ್ಟೆ – ನಾಶ

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ೨-೩ ವಾಕ್ಯಗಳಲ್ಲಿ ಉತ್ತರಿಸಿ.**

೧. ಸ್ತ್ರೀಯರಿಗೆ ಆರೋಗ್ಯ ಸೇವೆ ಒದಗಿಸಲು ರಮಾಬಾಯಿಯವರ ಬಯಕೆ ಏನಾಗಿತ್ತು? ಅದು ಸಾಧ್ಯವಾಗಲಿಲ್ಲವೇಕೆ?

೨. ರಮಾಬಾಯಿಯವರ ಕೀರ್ತಿಯನ್ನು ಪಾಠದಲ್ಲಿ ಹೇಗೆ ತಿಳಿಸಲಾಗಿದೆ?

೩. ರಮಾಬಾಯಿಯವರು ಜನರ ಸೇವೆಗಾಗಿ ಮಾಡಿದ ಕಾರ್ಯಗಳಾವುವು?

**ಇ) ಈ ಕೆಳಗಿನ ಪ್ರಶ್ನೆಗಳಿಗೆ ೩-೪ ವಾಕ್ಯಗಳಲ್ಲಿ ಉತ್ತರಿಸಿ.**

೧. ಪುಣೆಯಲ್ಲಿ ರಮಾಬಾಯಿಯವರು ಮಾಡಿದ ಸಮಾಜಸೇವೆಯನ್ನು ವಿವರಿಸಿ.

೨. ರಮಾಬಾಯಿಯವರು ಕಿವುಡರಾದ ಸಂದರ್ಭವನ್ನು ತಿಳಿಸಿ.

೩. ರಮಾಬಾಯಿಯವರು ಅಮೆರಿಕಾದಲ್ಲಿ ವಿಶೇಷ ಅನುಭವ ಪಡೆದುದು ಹೇಗೆ?



**ಚೆನ್ನುಡಿ**

**'ಜೀವನ ಸುಂದರ ಸ್ವಪ್ನವೂ ಅಲ್ಲ, ಕಹಿ ಬೇವೂ ಅಲ್ಲ; ಬೇವು-ಬೆಲ್ಲಗಳ ಮಿಶ್ರಣ ಅದು. ಅರೆ ಕಹಿ, ಅರೆ ಸಿಹಿ, ಸ್ವಲ್ಪ ನಗು, ಕೊಂಚ ಅಳು; ತುಸು ಕೋಪ, ನಸು ತಾಪ. ನೀನದನ್ನು ನಗುನಗುತ್ತ ನುಂಗಬೇಕು, ನೋವನ್ನು ನಗೆಯಾಗಿ ಪರಿವರ್ತಿಸಿಕೊಳ್ಳಬೇಕು'**

**-ನಾಡಿಗೇರ್ ಕೃಷ್ಣರಾಯರು**

# ಅನಲೆ

ಮೂಲ : ಕುವೆಂಪು

ಗದ್ಯಾನುವಾದ : ದೇಜಗೌ

**ಪ್ರವೇಶ :** ರಾಷ್ಟ್ರಕವಿ ಕುವೆಂಪು ಅವರು ರಚಿಸಿದ 'ಶ್ರೀ ರಾಮಾಯಣ ದರ್ಶನಂ' ಹಲವು ಹೊಸ ಅಂಶಗಳನ್ನು ಒಳಗೊಂಡ ಮಹಾಕಾವ್ಯ. ರಾವಣನಲ್ಲಿರುವ ಮಾನವೀಯ ಗುಣಗಳನ್ನು ಕುವೆಂಪು ಅವರು ಸುಂದರವಾಗಿ ಚಿತ್ರಿಸಿದ್ದಾರೆ. ಅಂತಹ ಚಿತ್ರಣಗಳಲ್ಲಿ ಅನಲೆ ಮತ್ತು ರಾವಣರ ನಡುವಿನ ವಾತ್ಸಲ್ಯವೂ ಒಂದು. ಅನಲೆ ರಾವಣನ ತಮ್ಮ ವಿಭೀಷಣನ ಮಗಳು. ಅವಳಿಗೆ ದೊಡ್ಡಪ್ಪ ರಾವಣನಲ್ಲಿ ಅಪರಿಮಿತವಾದ ಪ್ರೀತಿ. ರಾವಣನಿಗೂ ಅಷ್ಟೇ. ಅವಳನ್ನು ಕಂಡರೆ ವಿಶೇಷ ಮಮತೆ. ಹೆಣ್ಣು ಮಕ್ಕಳಿಲ್ಲದ ರಾವಣ ಅವಳನ್ನು ತನ್ನ ಮಗಳೆಂದೇ ಕಾಣುತ್ತಾನೆ. ಸೀತೆಯನ್ನು ಅಪಹರಿಸಿ ಬಂಧನದಲ್ಲಿ ರಾವಣ ಇಟ್ಟದ್ದಕ್ಕೂ ಆತನಿಗೆ ಹೆಣ್ಣುಮಕ್ಕಳಿಲ್ಲದ್ದೇ ಕಾರಣ ಎಂಬ ಮಾತೂ ಈ ಕಾವ್ಯದಲ್ಲಿ ಬರುತ್ತದೆ. ರಾವಣ ಮತ್ತು ಅನಲೆಯರ ನಡುವಿನ ವಾತ್ಸಲ್ಯ ಯಾವ ರೀತಿಯದು ಎಂಬುದನ್ನು ಮುಂದೆ ನೀಡಿರುವ ಭಾಗದಲ್ಲಿ ಓದಿ ತಿಳಿಯಿರಿ.

**ಪಾಠದ ಹಿನ್ನೆಲೆ :** ರಾಮ ವಾನರ ಸೈನ್ಯವನ್ನು ಕಟ್ಟಿಕೊಂಡು ಲಂಕೆಯ ಮೇಲೆ ಯುದ್ಧಕ್ಕೆ ಬರುತ್ತಾನೆ. ಆಗ ರಾವಣ ತನ್ನ ರಾಜಸಭೆಯನ್ನು ನಡೆಸುತ್ತಾನೆ. ಸಭೆಯಲ್ಲಿ ವಿಭೀಷಣ ಸೀತೆಯನ್ನು ರಾಮನಲ್ಲಿಗೆ ಗೌರವದಿಂದ ಹಿಂದಿರುಗಿ ಕಳುಹಿಸಬೇಕು ಎಂದು ವಾದಿಸುತ್ತಾನೆ. ರಾವಣನಿಗೆ ಅದು ಇಷ್ಟವಾಗುವುದಿಲ್ಲ. ಅವನು ಸಭೆಯನ್ನು ಮೊಟಕುಗೊಳಿಸಿ ತನ್ನ ಮನೆಗೆ ಬರುತ್ತಾನೆ. ಮರುದಿನ ಅಣ್ಣನನ್ನು ಕಾಣಲು ವಿಭೀಷಣ ಅವನು ಮಲಗುವ ಕೋಣೆಗೆ ಬರುತ್ತಾನೆ. ಆ ಕೋಣೆಯಲ್ಲಿ ರಾವಣನ ಹೆಂಡತಿ ಮಂಡೋದರಿ, ವಿಭೀಷಣನ ಮಗಳಾದ ಅನಲೆ ಮತ್ತು ರಾವಣನ ಹಿತೈಷಿಯಾದ ಹಿರಿಯ ಅವಿಂಧ್ಯ ಇದ್ದಾರೆ ಆಗ ಏನು ನಡೆಯಿತು ಎಂಬುದನ್ನು ಮುಂದೆ ಓದಿ.



ಚಾರರಿಂದ ತಂದೆಯ ಬರುವನ್ನು ತಿಳಿದು ಅನಲೆ ಎದ್ದು ಬಂದಳು. ಮಗಳ ಬಾಡಿದ ಮುಖವನ್ನು ನೋಡಿ ವಿಭೀಷಣನು ಅಣ್ಣನ ಕುಶಲವನ್ನು ಕೇಳಿದನು. ಅನಲೆ ಮಾತನಾಡದೆ, ಅಯ್ಯನ ಕೈ ಹಿಡಿದುಕೊಂಡು ಅವಿಂಧ್ಯನೆಡೆಗೆ ಕರೆತಂದಳು. ಹಣ್ಣುಹಣ್ಣಾದ ಅವಿಂಧ್ಯ ಅನಲೆಯ ತಂದೆಯನ್ನು ಕಂಡೊಡನೆ ಸುಯ್ದು, ಮೇಲೆದ್ದು ಅಪ್ಪಿಕೊಂಡನು. ಅಜ್ಜನ ಭಾವಾವೇಗವನ್ನು ಕಂಡ ವಿಭೀಷಣ "ಅಣ್ಣಾ ಎಂತಿದ್ದಾನೆ?" ಎಂದು ಮಾತಾಡಿಸಿದನು. "ನೀನು ಆತನಿಗೆ ಕಾಣಿಸಿಕೊಳ್ಳುವುದೊಳ್ಳೆಯದಲ್ಲ" ಎಂದು ಅವಿಂಧ್ಯ ಹೇಳಿದನು. "ಏಕೆ?" ಎಂಬ ವಿಭೀಷಣನ ಪ್ರಶ್ನೆಗೆ ಅಜ್ಜ ನಿಜವನ್ನು ಹೇಳಲು ಹೆದರಿ, "ರಾತ್ರಿ ನಿದ್ದೆಯಿಲ್ಲ" ಎಂದನು. "ಮಲಗಿದ್ದಾನೆಯೇ? ನಿದ್ರೆ ಬಂದಿದೆಯೆ?" ಎಂಬ ವಿಭೀಷಣನ ಮಾತಿಗೆ "ನಿದ್ರೆ ಬಂದಿದ್ದರೂ ನಡುನಡುವೆ ಕಲಕಿ ಎಚ್ಚರವಾಗುತ್ತಾನೆ." ಎಂದು ಅವಿಂಧ್ಯ ಹೇಳಿದನು. "ಅಲ್ಲಿಗೆ ಹೋಗುತ್ತೇನೆ" ಎಂದು ಮೇಲೆದ್ದ ವಿಭೀಷಣನನ್ನು ಅವಿಂಧ್ಯ ತಡೆದನು. ಆದರೂ ಲೆಕ್ಕಿಸದೆ ಹೆಣ್ಣು ಮಕ್ಕಳಿಲ್ಲದ ಅಣ್ಣನ ಅಕ್ಕರೆಯ ಅರಗಿಳಿಯಾಗಿದ್ದ, ಚೆಲುವಕಣಿಯಾದ ತನ್ನ ಮಗಳ ಹಿಂದೆಯೇ ನಡೆದನು.

ನಮಸ್ಕರಿಸಿದ ಅತ್ತಿಗೆ ಮಂಡೋದರಿಗೆ ಪ್ರತಿಯಾಗಿ ನಮಸ್ಕರಿಸಿದನು. ಮಂಡೋದರಿಯ ಪ್ರೇಮಕೈಂಕರ್ಯದ ಮುದ್ದಿನಿಂದ ಮುಗ್ಧನಾಗಿ ಮಲಗಿದ್ದ, ಮಲಗಿದ್ದರೂ ಲೋಕಾಕ್ರಮಣ ವಿಕ್ರಮವನ್ನು ಬಿಡೆನೆಂಬ ಮುಖಮುದ್ರೆಯಿಂದಿದ್ದ ರಾವಣನನ್ನೇ ನೋಡುತ್ತಾ ವಿಭೀಷಣ ವೇತ್ರಾಸನದಲ್ಲಿ ಕುಳಿತನು. ಯುಗಯುಗಗಳಂತೆ ಕ್ಷಣದ ಮೇಲೆ ಕ್ಷಣ ಉರುಳಿದವು. ವಿಭೀಷಣನ ದೃಷ್ಟಿ ಮಾತ್ರ ರಾವಣನ ಮುಖದಿಂದ ಹೊರಳಲಿಲ್ಲ.





ಒಡನೆಯೆ ರಾವಣ ಕಣ್ಣುಬಿಟ್ಟನು. ಕಿರುನಗೆಯಿಂದ ನಾಚಿಕೆಯನ್ನು ಮರೆಮಾಡಿ ಮೆಲ್ಲನೆ, "ಅನಲಾ" ಎಂದು ಕರೆದನು. ತನ್ನ ನಿಡುಜಡೆಯನ್ನು ಹಿಂದಕ್ಕೆ ಸರಿಸಿ ಮುಖದೆಡೆಗೆ ಬಾಗಿಕೊಂಡಳು. "ಇಲ್ಲೇ ಇದ್ದೀಯಾ?" ಎಂಬ ರಾವಣನ ಪ್ರಶ್ನೆಯ ಭಾವವನ್ನು ಗ್ರಹಿಸಲಾರದೆ "ದೊಡ್ಡಯ್ಯ?" ಎಂದಳು.

"ಏನಿಲ್ಲ! ನನ್ನನ್ನು ನೀನಗಲಿದಂತೆ ಕನಸಾಯಿತಕ್ಕ!" ಎಂದು ನಕ್ಕರೂ ರಾವಣನ ಕಣ್ಣುಗಳಲ್ಲಿ ನೀರು ಮುಕ್ಕುಳಿಸಿತು. "ನಿದ್ದೆ ಹೋಗು, ದೊಡ್ಡಯ್ಯ, ನಾನೆಲ್ಲಿಗೂ ಹೋಗುವುದಿಲ್ಲ. ಇಲ್ಲಿಯೇ ಇರುತ್ತೇನೆ", "ಅಕ್ಕ, ನಿಜವನ್ನೇ ನುಡಿದೆ. ಯಾರು ತೊರೆದರೂ ನೀನು ನನ್ನನ್ನು ತೊರೆವವಳಲ್ಲ" ಎಂದ ರಾವಣ ಚವರಿಯ ಗಾಳಿಗೆ ಮತ್ತೆ ಕಣ್ಮುಚ್ಚಿದನು. ಅನಲೆ ಪರದೆಯ ಕಡೆಗೆ ನೋಡಿದಳು. ವಿಭೀಷಣ ಒಳಗೊಳಗೆ ಬೆಂದು ಹೋದನು.

ಮತ್ತೆ ಅಕ್ಕರೆಯ ಸುಳಿಗೆ ಸಿಕ್ಕಿದ ರಾವಣ ಕಣ್ಣು ಬಿಟ್ಟು ಬಿಕ್ಕಳಿಸುತ್ತಾ.

**ರಾವಣ** : ಅಕ್ಕ, ನಿನ್ನಯ್ಯ ನನ್ನನ್ನು ಬಿಟ್ಟು ಹೋದರೆ ?

**ಅನಲಾ** : ನನ್ನನ್ನು ಪಡೆದ ನಿನ್ನ ತಮ್ಮ ನಿನ್ನನ್ನು ಬಿಡುವನೆ !

**ರಾವಣ** : ಅವನು ಬಿಡುವುದನ್ನು ನೀನೇ ನೋಡುತ್ತೀಯೆ, ಅಕ್ಕಾ

**ಅನಲಾ** : ದೊಡ್ಡಯ್ಯ, ಸುಳ್ಳಾಡಬೇಡ, ಬರಿದೆ ಶಂಕೆ ಏಕೆ?, ಹೊತ್ತಾರೆಯಿಂದ ನಿನ್ನ ಬಳಿಯೇ ಕುಳಿತಿದ್ದಾನೆ, ನೋಡು.

*(ಅನಲೆ ಕೈತೋರಿದ ಕಡೆಗೆ ರಾವಣ ಕಣ್ಣು ಹೊರಳಿಸಿದನು. ರಾವಣನ ಕೋಪಫಣಿ ಬುಸ್ಸೆಂದು ಹೆಡೆಬಿಚ್ಚಿತು.)*

**ರಾವಣ** : ಈ ಕುಲದ್ರೋಹಿಯನ್ನು, ಈ ಗೃಹವೈರಿಯನ್ನು ನನ್ನ ಬಳಿಗೆ ಬಿಟ್ಟವರಾರು? ಮೇಲೆ ಗರುಕೆ ಮುಸುಕಿ ಮನೋಹರವಾಗಿರುವ ತಿಪ್ಪೆ ಇವನು.

*(ಎಂದು ಆರ್ಭಟಿಸಿ "ಅವಿಂಧ್ಯಾ" ಎಂದು ಕೂಗಿದನು. " ಅನಲೆ, ಅವಿಂಧ್ಯನನ್ನು ಕರೆ" ಎಂದನು. ಅಷ್ಟರಲ್ಲಿ ಅವಿಂಧ್ಯ ಅಲ್ಲಿಗೆ ಬಂದನು)*

**ರಾವಣ** : ನೀವೆಲ್ಲರೂ ನನ್ನ ಕೊಲೆಗೆ ಸಂಚು ಮಾಡಿ ಈ ರಾಜದ್ರೋಹಿಯನ್ನು ಅರಮನೆಗೆ ಹೊಗಿಸಿದರಲ್ಲವೇ!

**ಅವಿಂಧ್ಯ** : (ಕೈ ಮುಗಿದು) ಮಹಾಪ್ರಭು, ಅಣ್ಣನ ಕ್ಷೇಮವನ್ನು ವಿಚಾರಿಸಲು ಪುಣ್ಯವೇ ಮೂರ್ತಿವೆತ್ತಂತೆ ಬಂದ ಈ ಅನಲೆಯ ತಂದೆಯನ್ನು ತಡೆಯುವುದು ಅಮಂಗಳವಲ್ಲವೆ?

ರಾವಣ ಅವನ ಮಾತನ್ನು ಕೇಳಿ ಅವನನ್ನೇ ದಿಟ್ಟಿಸುತ್ತ ಸುಯ್ದನು. ಒಮ್ಮೆ ಮಂಡೋದರಿಯನ್ನು, ಒಮ್ಮೆ ತನ್ನ ಬಳಿ ಬಾಗಿ ನಿಂತು ಅಳುತ್ತಿದ್ದ ಅನಲೆಯನ್ನು ನೋಡಿದನು. ಮರುಕವುಕ್ಕಿ ರಾವಣ ಒಡನೆದ್ದು ತನ್ನ ಅಕ್ಕರೆಯ ಅರಗಿಳಿ ಅನಲೆಯನ್ನು ಹಿಡಿದು ಬರಸೆಳೆದು ಅಪ್ಪಿಕೊಂಡು ಮುದ್ದಾಡಿದನು: "ಅಳಬೇಡ, ಅಕ್ಕ. ನನಗೆ ಸಾವೊದಗಿದರೂ ನಿನಗೆ ನೋವಾಗುವುದನ್ನು ಮಾಡೆನು" ಎನ್ನುತ್ತ ತನ್ನ ಹಾಸುಗೆಯ ಮೇಲೆ ಕುಳ್ಳಿರಿಸಿ ಅವಳ ಒತ್ತಿನಲ್ಲಿಯೆ ತಾನೂ ಕುಳಿತು. ಎಲ್ಲವನ್ನು ಮೌನದಿಂದ ನೋಡುತ್ತಿದ್ದ ತಮ್ಮನನ್ನು ಕುರಿತು ಶಾಂತತೆಯಿಂದ ನುಡಿದನು: "ಅನಲೆ ನಿನ್ನ ಮಗಳಲ್ಲ, ನನ್ನವಳು, ಇವಳು ನನ್ನನ್ನು ಕಾಪಾಡುವ ದೇವಿ." ಆ ಮಾತಿನಲ್ಲಿ ಅಣ್ಣನ ಆತ್ಮೋದ್ಧಾರವನ್ನು ಕಂಡು ವಿಭೀಷಣ "ಆ ಪುಣ್ಯ ನನಗಿರಲಿ" ಎಂದನು. ಎಲ್ಲರ ಮುಖಗಳಲ್ಲಿ ತಿಳಿನಗೆ ಸುಳಿಯಿತು: ಮೈತ್ರಿ ಸಂಚಾರವಾಯಿತು. "ಅನಲೆಯ ಮುದ್ದು ಚೆಲುವೊಂದೆ ನನ್ನಲ್ಲಿ ಪುಣ್ಯವನ್ನು ಪ್ರಚೋದಿಸುವ ಶಕ್ತಿ" ಎಂದುಕೊಂಡು ರಾವಣ ಅಂತರ್ಮುಖಿಯಾದನು. ಅವಿಂಧ್ಯ ತನ್ನೊಳಗೆ ತಾನು "ನಿನಗೊಬ್ಬಳು ಮಗಳಿದ್ದಿದ್ದರೆ ನಮಗೆ ಮತ್ತು ನಮ್ಮ ಲಂಕೆಗೆ ಅಮಂಗಳವೊದಗುತ್ತಿತ್ತೆ? ಹೆತ್ತು ಪಡೆಯದಿದ್ದರೂ, ಹೊತ್ತು ತಂದ ಸುಖವೆ ದುಃಖಕ್ಕೆ ಕಾರಣವಾಗಿ ನಿನ್ನ ಪೌರುಷವನ್ನೆಲ್ಲ ಮುಕ್ಕುತ್ತಿದೆ" ಎಂದುಕೊಳ್ಳುತ್ತಿರಲು ವಿಭೀಷಣನ ಕಣ್ಸನ್ನೆ ಕಾಣಿಸಿತು. ಅವಿಂಧ್ಯ ಕೂಡಲೆ ಅಲ್ಲಿಂದ ತೆರಳಿದನು.

"ಮಹೇಂದ್ರಾರಿ, ಮನ್ನಿಸು. ನಿನ್ನೆ ನಾನಾಡಿದ ಮಾತೆ ನಿನ್ನೀಸ್ಥಿತಿಗೆ ಕಾರಣವಾದರೆ ಅದು ಸರಿಯಲ್ಲ. ನಿನ್ನ ಅಭ್ಯುದಯವಲ್ಲದೆ ನನ್ನ ಮಾತಿನ ಗುರಿ ಬೇರೆ ಇರಲಿಲ್ಲ. ನನ್ನ ಮಾತು

ರುಚಿಸದಿದ್ದರೆ ನನ್ನನ್ನು ಶತ್ರುವೆಂದು ತಿಳಿಯುವುದು ತರವೆ? ಭ್ರಾಂತಿಯನ್ನು ತೊಲಗಿಸಿ, ನನ್ನ ಮಾತನ್ನು ಮತ್ತೆ ಮತ್ತೆ ತೂಗಿ ನೋಡಿ ಮುಂದಿನ ದಾರಿಯನ್ನು ನಿರ್ಣಯಿಸು". ತಮ್ಮನ ಮಾತನ್ನು ಕೇಳುತ್ತಿದ್ದಂತೆ ರಾವಣನ ಎದೆಯಲ್ಲಿ ಬೆಂಕಿ ಧಗಧಗಿಸಿದಂತಾಯಿತು. ಹುಬ್ಬು ಗಂಟಿಕ್ಕಿ ನುಡಿದನು: "ಯುದ್ಧವೊದಗಿದೆ. ಸಮುದ್ರವನ್ನು ದಾಟುವ ಉಪಾಯವನ್ನು ಹಗೆ ಆಲೋಚಿಸುತ್ತಿದ್ದಾನೆ. ಯೋಚಿಸಲು ಸಮಯವಿಲ್ಲ. ನೀನು ಶೂರ. ನಾಡು ಕುಲಗಳನ್ನು ಸಂರಕ್ಷಿಸುವುದು ಕಲಿಯ ಕರ್ತವ್ಯ. ನಿನಗೆ ಮನಸ್ಸಿದ್ದರೆ ನೆರವಾಗು. ಇಲ್ಲದಿದ್ದರೆ.... ಇಲ್ಲದಿದ್ದರೆ...." ಏನನ್ನೊ ನಿಶ್ಚಯಿಸುವವನಂತೆ ಒಂದೆರಡು ಕ್ಷಣ ತಡೆದು ಮತ್ತೆ ದೃಢವಾಣಿಯಿಂದ "ಮನಸ್ಸಿದ್ದರೆ ನೆರವಾಗು, ಇಲ್ಲದಿದ್ದರೆ ಲಂಕೆಯನ್ನು ಬಿಟ್ಟು ಹೋಗು. ಈಗ ಬೇರೆ ವಾದಕ್ಕೆ ಎಡೆಯೆ ಇಲ್ಲ. ನನ್ನ ಮಾರ್ಗ ನನಗೆ; ನಿನ್ನ ಮಾರ್ಗ ನಿನಗೆ!" ಎಂದನು. "ಇದೇ ಕಟ್ಟಕಡೆಯ ನಿರ್ಣಯವೊ?" ವಿಭೀಷಣ ಕೇಳಿದನು. "ಖಂಡಿತ" ಎಂದ ರಾವಣ.

**ವಿಭೀಷಣ** : ನಿನಗೆ ಒಳ್ಳೆಯದಾಗಲಿ, ಹೋಗುತ್ತೇನೆ, ಅಪ್ಪಣೆ ಕೊಡಿ.

**ರಾವಣ** : ಎಲ್ಲಿಗೆ?,

**ವಿಭೀಷಣ** : ಅನಿಶ್ಚಿತ,

**ರಾವಣ** : ಕಡಲ ಆಚೆ ಕಡೆಗೊ?

**ವಿಭೀಷಣ** : ನಿನ್ನ ಅಭಿಪ್ರಾಯವೇನು?

**ರಾವಣ** : ನಿನಗೆ ಗೊತ್ತು; ನೀನೆ ಹೇಳು!

**ವಿಭೀಷಣ** : ನೀನಿಷ್ಟು ಕೀಳುಮನದವನೆಂದು ನಾನು ಇಲ್ಲಿಯತನಕ ಅರಿತಿರಲಿಲ್ಲ.

**ರಾವಣ** : ಇಬ್ಬರ ಅರಿವೂ ಒಂದೆಯೆ.

**ವಿಭೀಷಣ** : ನಮಸ್ಕಾರ.

*ಎಂದು ಹೇಳಿ ವಿಭೀಷಣ ಹೊರಡಲು ಅನಲೆಯೂ ಮೇಲೆದ್ದಳು.*

**ರಾವಣ** : ಆಜ್ಞೆಯಿಂದ ತಡೆಯಬಹುದಾದರೂ ಇದೊಂದನ್ನು ಮಾತ್ರ ಬೇಡಿಕೊಳ್ಳುತ್ತೇನೆ, ಈ ಸುಕುಮಾರಿಯನ್ನು ಕರೆದೊಯ್ದು ಕಷ್ಟಕ್ಕೀಡುಮಾಡಬೇಡ.

**ಅನಲಾ** : ಮನ್ನಿಸು, ತಂದೆಯೊಡನಿದ್ದು ಧರ್ಮವನ್ನು ಸೇವಿಸುತ್ತೇನೆ.

**ರಾವಣ** : ಇಲ್ಲಿದ್ದೇ ಧರ್ಮವನ್ನು ಸೇವಿಸು.

**ಅನಲಾ** : ಧರ್ಮವನ್ನು ಹೊರಗಟ್ಟಿದ ಮೇಲೆ ಹೇಗೆ ಸೇವಿಸಲಿ?

**ರಾವಣ** : ನನ್ನಂಥವರನ್ನು ನಿನ್ನಂಥವರು ತೊರೆದರೆ ಧರ್ಮ ಉದ್ಧಾರವಾಗುವುದೆ?

**ಅನಲಾ** : ಅಯ್ಯ ಹೇಳಿದಂತೆ ನಡೆಯುತ್ತೇನೆ.

**ವಿಭೀಷಣ** : ಮಗಳೆ, ದೊಡ್ಡಯ್ಯ ಹೇಳಿದುದು ನಿಜ. ನೀನಿಲ್ಲಿರುವುದೇ ಸರಿ.

**ಅನಲಾ** : ಹಾಗಾದರೆ, ನಿನ್ನ ಸಾನ್ನಿಧ್ಯ ನನಗೆ ಲಭಿಸುವುದೆಂತು?

**ರಾವಣ** : ನಿನಗೆ ತಡೆಯುಂಟೆ ಅಕ್ಕಾ, ಅಯ್ಯ ಎಲ್ಲಿದ್ದರೂ ಯಾವಾಗಲಾದರೂ ಪುಷ್ಪಕವಿಮಾನದಲ್ಲಿ ಹೋಗಿ ಬರಬಹುದು.

(*ವಿಭೀಷಣ ಅಲ್ಲಿಂದ ಬೀಳ್ಕೊಂಡು ಹೊರಟನು.*)

**ಕ್ಷೇತ್ರ :** ಆಲಿಸುವುದು

**ಸಾಮರ್ಥ್ಯ : ಗುಂಪು ಚಟುವಟಿಕೆಗಳ ನಿರ್ದೇಶನಗಳನ್ನು ಆಲಿಸಿ, ಅರ್ಥಮಾಡಿಕೊಂಡು ಆಂಗಿಕವಾಗಿ ಪ್ರತಿಕ್ರಿಯಿಸುವುದು.**

**ಆಶಯ :** ಯಾವುದೇ ಮನುಷ್ಯನನ್ನು ಒಮ್ಮೆಗೆ ಕೆಟ್ಟವನು ಎಂದು ತೀರ್ಮಾನಿಸಬಾರದು. ಅವನಲ್ಲಿರುವ ಒಳ್ಳೆಯತನವನ್ನು, ಅಂತಃಕರಣವನ್ನು ಗುರುತಿಸಬೇಕು. ಅವನಲ್ಲಿರುವ ಈ ಒಳ್ಳೆಯಗುಣಗಳು ಮೇಲಾಗಿ ದುಷ್ಟತನ ಇಲ್ಲವಾಗುವಂತೆ ಮಾಡಲು ಪ್ರಯತ್ನಿಸಬೇಕು. ರಾವಣನ ಅಂತಃಕರಣದ ಪ್ರತಿಬಿಂಬವಾಗಿ ಅನಲಾ ಇದ್ದಾಳೆ. ಅವಳಿಂದಾಗಿ ರಾವಣ ಮೆದುವಾಗುತ್ತಾನೆ, ಮಾನವೀಯ ಗುಣವುಳ್ಳವನಾಗುತ್ತಾನೆ.

## ಲೇಖಕರ ಪರಿಚಯ



ಕುವೆಂಪು ಅವರ ಹೆಸರು ಕೆ.ವಿ. ಪುಟ್ಟಪ್ಪ. **ಕುವೆಂಪು** ಎಂಬುದು ಇವರ ಸಂಕ್ಷಿಪ್ತನಾಮ. ಇವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯ ಕುಪ್ಪಳಿಯವರು. ೨೯-೧೨-೧೯೦೪ರಂದು ಚಿಕ್ಕಮಗಳೂರು ಜಿಲ್ಲೆಯ ಹಿರೇಕೊಡಿಗೆಯಲ್ಲಿ ಜನಿಸಿದರು. ಇವರ ಕೃತಿಗಳು ಅನೇಕ. **ಶ್ರೀರಾಮಾಯಣದರ್ಶನಂ, ಚಿತ್ರಾಂಗದ, ಕೊಳಲು, ಪ್ರೇಮಕಾಶ್ಮೀರ** ಮೊದಲಾದ ಅನೇಕ ಕಾವ್ಯ ಸಂಕಲನಗಳು ಇವರಿಂದ ಮೂಡಿಬಂದಿವೆ. **ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು** ಇವರ ಜನಪ್ರಿಯ ಕಾದಂಬರಿಗಳು. **ರಕ್ತಾಕ್ಷಿ, ಬಲಿದಾನ, ಬೆರಳ್‌ಗೆ ಕೊರಳ್, ಯಮನ ಸೋಲು** ಮೊದಲಾದ ಹಲವಾರು ನಾಟಕಗಳನ್ನು ಇವರು ರಚಿಸಿದ್ದಾರೆ. ಇದಲ್ಲದೆ ವಿಮರ್ಶೆ, ವೈಚಾರಿಕ ಸಾಹಿತ್ಯ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಇವರು ಸಾಹಿತ್ಯ ಸೇವೆ ಸಲ್ಲಿಸಿರುತ್ತಾರೆ. ಇವರಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪದ್ಮಭೂಷಣ ಪ್ರಶಸ್ತಿಗಳು ದೊರೆತಿದ್ದು, ಇವರ ಶ್ರೀರಾಮಾಯಣದರ್ಶನಂ ಮಹಾಕಾವ್ಯಕ್ಕೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ. ಪಂಪ ಪ್ರಶಸ್ತಿ, ಕರ್ನಾಟಕರತ್ನ ಪ್ರಶಸ್ತಿ – ಹೀಗೆ ಅನೇಕ ಪುರಸ್ಕಾರಗಳು ಇವರಿಗೆ ಸಂದಿವೆ. ಇವರು ನವೆಂಬರ್ ೧೯೯೪ ರಂದು ನಿಧನರಾದರು.

**ದೇ. ಜವರೇಗೌಡ** : ಇವರ ಸಂಕ್ಷಿಪ್ತನಾಮ ದೇಜಗೌ. ಇವರು ೧೯೧೮ರ ಜುಲೈ ೬ರಂದು ಚನ್ನಪಟ್ಟಣ ತಾಲ್ಲೂಕು ಚಕ್ಕೆರೆಯಲ್ಲಿ ಜನಿಸಿದರು. ಇವರು ಮೈಸೂರು ವಿಶ್ವವಿದ್ಯಾಲಯದ ಕುಲಪತಿಯಾಗಿ



ಸೇವೆ ಸಲ್ಲಿಸಿದರು. ನೆನಪು ಕಹಿಯಲ್ಲ, ಮೋತಿಲಾಲ ನೆಹರೂ, ತೀನಂಶ್ರೀ, ಕಡುಗಲಿ ಕುಮಾರರಾಮ, ಸಾಹಿತ್ಯಮಾರ್ಗ, ವಚನಚಂದ್ರಿಕೆ ಮೊದಲಾದ ಅನೇಕ ಕೃತಿಗಳನ್ನು ಇವರು ರಚಿಸಿದ್ದಾರೆ. ಇವರಿಗೆ ಸೋವಿಯತ್ ಲ್ಯಾಂಡ್ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಅನೇಕ ಗೌರವಗಳು ಸಂದಿವೆ.

## ಓದಿ ತಿಳಿಯಿರಿ

ಚಾರ–ಸೇವಕರು; ಬರವು–ಬರುವ ವಿಷಯ; ಹಣ್ಣು ಹಣ್ಣಾದ –ವಯಸ್ಸಾಗಿ ಬದುಕನ್ನು ಕಂಡ ವ್ಯಕ್ತಿ; ಸುಯ್ದು–ನಿಟ್ಟುಸಿರು ಬಿಟ್ಟು; ಅಕ್ಕರೆಯ ಅರಗಿಳಿ–ಪ್ರೀತಿಯ ರಾಜಗಿಳಿಯಂಥವಳು; ಪ್ರೇಮ ಕೈಂಕರ್ಯ–ಪ್ರೇಮದಿಂದ ಮಾಡುವ ಸೇವೆ; ಲೋಕಾಕ್ರಮಣ ವಿಕ್ರಮ–ಲೋಕವನ್ನೆಲ್ಲಾ ವಶಪಡಿಸಿಕೊಳ್ಳುತ್ತೇನೆ ಎಂಬ ಸಾಹಸ; ವೇತ್ರಾಸನ – ಬಿದಿರಿನಿಂದ ನಿರ್ಮಿಸಿದ ಆಸನ ; ಯುಗ–ದೀರ್ಘಕಾಲಾವಧಿ ; ಮುಖಮುದ್ರೆ – ಮುಖದ ಭಾವ ; ಓಗೊಡು – ಓ ಎಂದು ಹೇಳು ; ಓಸರಿಸು–ಹಿಂದಕ್ಕೆ ತಳ್ಳು; ಚವರಿ–ಚಾಮರ; ದೈತ್ಯೇಂದ್ರ–ದೈತ್ಯರ ಒಡೆಯ, ರಾಕ್ಷಸರ ಒಡೆಯ; ಇಂಗಿತಾಕ್ಷಿ–ಅಭಿಪ್ರಾಯವನ್ನು ನಿರೀಕ್ಷಿಸಿದವಳು; ಶಂಕೆ–ಸಂದೇಹ; ಕೋಪಫಣಿ–ಕೋಪವೆಂಬ ನಾಗರಹಾವು; ವಂಚನೆ–ಮೋಸ; ಬೆಳ್ನವಿರು–ಬಿಳಿಯ ಕೂದಲು; ಮೈತ್ರಿ–ವಿಶ್ವಾಸ, ಸ್ನೇಹ; ಮಹೇಂದ್ರಾರಿ–ಇಂದ್ರನ ವೈರಿ; ಅಭ್ಯುದಯ–ಏಳಿಗೆ; ಸಾನ್ನಿಧ್ಯ–ಹತ್ತಿರವಿರುವಿಕೆ, ಸಾಮೀಪ್ಯ; ಅವಿಂಧ್ಯ–ರಾವಣನ ಮಂತ್ರಿ ಮತ್ತು ಹಿತೈಷಿ, ಸೇವಿಸು–ಸೇವೆಮಾಡು.



## ಅಭ್ಯಾಸ

### ಅ. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.

೧. ವಿಭೀಷಣನ ಕೈ ಹಿಡಿದು ಅನಲೆ ಯಾರ ಬಳಿಗೆ ಕರೆ ತಂದಳು?

೨. ರಾವಣ ಹೇಗೆ ಮಲಗಿದ್ದ ?

೩. ರಾವಣ ತನಗೆ ಯಾವ ಕನಸಾಯಿತೆಂದು ಅನಲೆಗೆ ಹೇಳಿದನು?

೪. ರಾವಣ ತನ್ನಲ್ಲಿ ಪುಣ್ಯವನ್ನು ಪ್ರಚೋದಿಸುವ ಶಕ್ತಿ ಯಾವುದೆಂದು ಹೇಳಿದನು?

### ಆ. ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ನಿದ್ದೆಯಿಂದ ಕಣ್ಣು ಬಿಟ್ಟ ರಾವಣ ಅನಲೆಗೆ ಏನು ಹೇಳಿದನು?

೨. ಅವಿಂಧ್ಯನನ್ನು ಕರೆದು ರಾವಣ ಕೇಳಿದುದೇನು?

೩. ಅಳುತ್ತಿದ್ದ ಅನಲೆಯನ್ನು ರಾವಣನು ಸಮಾಧಾನ ಮಾಡಿದ ಬಗೆ ಹೇಗೆ?

೪. ವಿಭೀಷಣನು ಏನು ಮಾಡಬೇಕೆಂದು ರಾವಣ ಹೇಳಿದನು?

೫. ವಿಭೀಷಣ ಹೊರಡುವ ಮುನ್ನ ಅನಲೆಗೆ ಹೇಳಿದುದೇನು?

**ಇ. ಕೆಳಗೆ ನೀಡಿರುವ ಪ್ರಶ್ನೆಗಳಿಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ವಿಭೀಷಣ ರಾವಣನ ಅರಮನೆಗೆ ಬಂದಾಗ ಅವಿಂಧ್ಯ ಹೇಳಿದುದೇನು?

೨. ವಿಭೀಷಣ ತನ್ನನ್ನು ಬಿಟ್ಟು ಹೋಗುತ್ತಾನೆ ಎಂದಾಗ ಅನಲೆ ರಾವಣನಿಗೆ ಏನು ಹೇಳಿದಳು?

೩. ರಾವಣ ವಿಭೀಷಣನಿಗೆ ಹೇಗಿರಬೇಕೆಂದು ಹೇಳಿದನು?

೪. ಅನಲೆಯ ಬಗೆಗೆ ರಾವಣ ಹೇಳಿದ ಮಾತುಗಳೇನು?

**ಈ. ಕೆಳಗೆ ರಾವಣ ವಿಭೀಷಣರ ನಡುವೆ ನಡೆದ ಸಂಭಾಷಣೆ ಬರೆಯಲಾಗಿದೆ. ಇವುಗಳಲ್ಲಿ ರಾವಣನ ಮಾತುಗಳಾವುವು? ವಿಭೀಷಣನ ಮಾತುಗಳಾವುವು ಗುರುತಿಸಿ.**

| ಹೇಳಿದವರು | ಮಾತುಗಳು |
|---|---|
| ____________ | 'ನನ್ನ ಮಾರ್ಗ ನನಗೆ, ನಿನ್ನ ಮಾರ್ಗ ನಿನಗೆ!' |
| ____________ | 'ಇದೇ ಕಟ್ಟಕಡೆಯ ನಿರ್ಣಯವೋ' |
| ____________ | 'ಖಂಡಿತ' |
| ____________ | 'ನಿನಗೆ ಒಳ್ಳೆಯದಾಗಲಿ, ಹೋಗುತ್ತೇನೆ ಅಪ್ಪಣೆ ಕೊಡಿ' |
| ____________ | 'ಎಲ್ಲಿಗೆ' |
| ____________ | 'ಅನಿಶ್ಚಿತ' |
| ____________ | 'ಕಡಲ ಆಚೆ ಕಡೆಗೊ' |
| ____________ | 'ನಿನ್ನ ಅಭಿಪ್ರಾಯವೇನು' |
| ____________ | 'ನಿನಗೆ ಗೊತ್ತು ನೀನೇ ಹೇಳು' |



**ಉ. ಸೂಚನೆಯಂತೆ ಉತ್ತರಿಸಿರಿ.**

೧. 'ಅಲ್ಲಿಗೆ ಹೋಗುತ್ತೇನೆ' ಎಂದು ಮೇಲೆದ್ದ ವಿಭೀಷಣನನ್ನು ಅವಿಂಧ್ಯ ತಡೆದನು. ಇಲ್ಲಿ 'ಅಲ್ಲಿಗೆ' ಎಂಬುದಕ್ಕೆ ಎಲ್ಲಿಗೆ ಎಂದರ್ಥವಾಗುತ್ತದೆ?

೨. ದೈತೇಂದ್ರ ಯಾರು?

೩. "ನಿನ್ನ ತಮ್ಮ ನಿನ್ನನ್ನು ಬಿಡುವನೆ?" ಇದು ಯಾರು ಯಾರನ್ನು ಬಿಡುವ ಮಾತಾಗಿದೆ.

೪. 'ಸಮುದ್ರವನ್ನು ದಾಟುವ ಉಪಾಯವನ್ನು ಹಗೆ ಆಲೋಚಿಸುತ್ತಾನೆ' – ಈ ವಾಕ್ಯದಲ್ಲಿರುವ 'ಹಗೆ' ಯಾರು?

**ಊ. ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳವನ್ನು ಸೂಕ್ತ ಪದದಿಂದ ತುಂಬಿರಿ.**

೧. ಅಣ್ಣನ ಅಕ್ಕರೆಯ ಅರೆಗಿಳಿಯಾಗಿದ್ದ ಚೆಲುವ ಕಣಿ __________

೨. ಅಕ್ಕ __________ ನನ್ನನ್ನು ಬಿಟ್ಟು ಹೋದರೆ?

೩. ಅನಲೆ ನಿನ್ನ ಮಗಳಲ್ಲ, __________

೪. ಮನಸ್ಸಿದ್ದರೆ ನೆರವಾಗು, ಇಲ್ಲದಿದ್ದರೆ __________ ಬಿಟ್ಟುಹೋಗು.

**ಋ. ಕೆಳಗೆ ನೀಡಿರುವ ಪದಗಳನ್ನು ನಿಮ್ಮ ವಾಕ್ಯದಲ್ಲಿ ಬಳಸಿ, ವಾಕ್ಯ ರಚಿಸಿರಿ.**

೧. ಕುಶಲ
೨. ಅಕ್ಕರೆ
೩. ಕನಸಾಯಿತು
೪. ಸಂಚು
೫. ಮೈತ್ರಿ
೬. ಕಷ್ಟಕ್ಕೀಡುಮಾಡು
೭. ಧರ್ಮವನ್ನು ಸೇವಿಸು

**ಎ. ಕೆಳಗೆ ನೀಡಿರುವ ಪದಗುಚ್ಛ ಪಾಠದಲ್ಲಿ ಯಾವ ಅರ್ಥದಲ್ಲಿ ಬಂದಿದೆ, ತಿಳಿದು ಬರೆಯಿರಿ.**

೧. ಲೋಕಾಕ್ರಮಣ ವಿಕ್ರಮ __________

೨. ಒಳಗೊಳಗೆ ಬೆಂದುಹೋಗು __________

೩. ಗರುಕಿ ಮುಸುಕಿ ಮನೋಹರವಾಗಿರುವ ವಂಚನೆಯ ತಿಪ್ಪೆ __________

೪. ಅಣ್ಣನ ಆತ್ಮೋದ್ಧಾರ __________

೫. ಧರ್ಮವನ್ನೂ ಸೇವಿಸು __________

೬. ಸಾನ್ನಿಧ್ಯ ಲಭಿಸುವುದು __________



## ಚಟುವಟಿಕೆ

ರಾಮಾಯಣದಲ್ಲಿ ನೀವು ಮೆಚ್ಚುವ ಪಾತ್ರ ಯಾರದ್ದು? ಅವರನ್ನು ಮೆಚ್ಚಲು ಕಾರಣವೇನು ಎಂಬುದನ್ನು ಬರೆದು ಸ್ನೇಹಿತರೊಂದಿಗೆ ಚರ್ಚಿಸಿ.

# ವ್ಯಾಕರಣ

## ಭಾಗ-೨ ಸಮಾಸಗಳು

### ಅಂಶಿ ಸಮಾಸ

೧. ಕೈಯ ಅಡಿ-ಅಂಗೈ

೨. ತಲೆಯ ಮುಂದು-ಮುಂದಲೆ

೩. ಕೆಳಗಿನ ತುಟಿ-ಕೆಳದುಟಿ

೪. ಕಾಲಿನ ಮುಂದು-ಮುಂಗಾಲು

ಪೂರ್ವೋತ್ತರ ಪದಗಳು ಹೀಗೆ ಅಂಶಿ ಅಂಶ ಭಾವದಿಂದ ಸೇರಿ ಸಮಾಸವಾದರೆ ಅಂತಹ ಸಮಾಸಗಳಿಗೆ 'ಅಂಶಿ ಸಮಾಸ' ಎಂದು ಹೆಸರು. 'ಕಾಲು' ಅಂಶಿ, ಅದರ 'ಮುಂದು' ಅದರ ಅಂಶ.

### ದ್ವಂದ್ವ ಸಮಾಸ

೧. ರಾಮನು ಲಕ್ಷ್ಮಣನು – ರಾಮಲಕ್ಷ್ಮಣರು

೨. ಕೃಷ್ಣನು ಅರ್ಜುನನು – ಕೃಷ್ಣಾರ್ಜುನರು

೩. ಗಿಡಗಳು ಮರಗಳು ಬಳ್ಳಿಗಳು – ಗಿಡಮರಬಳ್ಳಿಗಳು

ಹೀಗೆ ಎರಡು ಅಥವಾ ಎರಡಕ್ಕಿಂತಲೂ ಹೆಚ್ಚು ನಾಮಪದಗಳು ಸೇರಿ ಸಮಾಸವಾಗುವಾಗ ಎಲ್ಲ ಪದಗಳ ಅರ್ಥವೂ ಪ್ರಧಾನವಾಗಿದ್ದರೆ ಅಂತಹ ಸಮಾಸಕ್ಕೆ 'ದ್ವಂದ್ವ ಸಮಾಸ' ಎಂದು ಹೆಸರು.



### ಬಹುವ್ರೀಹಿ ಸಮಾಸ

೧. ಮೂರು ಕಣ್ಣುಳ್ಳವನು: ಮುಕ್ಕಣ್ಣ

೨. ಹಣೆಯಲ್ಲಿ ಕಣ್ಣುಳ್ಳವನು: ಹಣೆಗಣ್ಣ

೩. ಚಕ್ರವನ್ನು ಹಿಡಿದಿರುವವನು: ಚಕ್ರಪಾಣಿ

೪. ಚಂದ್ರನಂತೆ ಮುಖವುಳ್ಳವಳು: ಚಂದ್ರಮುಖಿ

ಹೀಗೆ ಸಮಾಸವಾದಾಗ ಪೂರ್ವೋತ್ತರ ಪದಗಳು ಪ್ರಧಾನವಾಗದೆ ಬೇರೊಂದು ಪದ ಪ್ರಧಾನವಾದರೆ ಅಂತಹ ಸಮಾಸಗಳಿಗೆ 'ಬಹುವ್ರೀಹಿ ಸಮಾಸ' ಎಂದು ಹೆಸರು.

### ಕ್ರಿಯಾ ಸಮಾಸ (ಇದು ಕನ್ನಡಕ್ಕೆ ವಿಶಿಷ್ಟವಾದ ಸಮಾಸ)

೧. ಕೈಯನ್ನು ತೊಳೆ – ಕೈತೊಳೆ
೨. ಮರವನ್ನು ಹತ್ತು – ಮರಹತ್ತು
೩. ಕಳೆಯನ್ನು ಕೀಳು – ಕಳೆಕೀಳು
೪. ಊಟವನ್ನು ಮಾಡು – ಊಟಮಾಡು
೫. ತಲೆಯನ್ನು ಬಾಚು – ತಲೆಬಾಚು
೬. ಕಾಲನ್ನು ಎಳೆ – ಕಾಲೆಳೆ

ಸಮಾಸದಲ್ಲಿ ಪೂರ್ವಪದವು ನಾಮಪದವಾಗಿದ್ದು, ಉತ್ತರ ಪದವು ಕ್ರಿಯಾ ಪದವಾಗಿದ್ದರೆ ಅಂತಹ ಸಮಾಸಗಳಿಗೆ 'ಕ್ರಿಯಾ ಸಮಾಸ' ಎಂದು ಹೆಸರು.

## ಅಭ್ಯಾಸ

**ಕೆಳಗಿನ ವಾಕ್ಯಗಳಲ್ಲಿ ಸಮಾಸಪದಗಳನ್ನು ಗುರುತಿಸಿ ವಿಗ್ರಹವಾಕ್ಯವನ್ನು ಬರೆಯಿರಿ.**

| | ಸಮಾಸಪದ | ವಿಗ್ರಹವಾಕ್ಯ |
|---|---|---|
| ೧. ಮುಖಕ್ಕೆ ತಣ್ಣೀರೆರೆಚಿಕೊ, ತಂಪಾಗುತ್ತದೆ | ________ | ________ |
| ೨. ಅರಮನೆಯ ವೈಭವವೇ ಬೇರೆ. | ________ | ________ |
| ೩. ಹಿಂಬಾಗಿಲಿನಿಂದ ಓಡಾಡಬಾರದು | ________ | ________ |
| ೪. ಅವರು ರಾಮಲಕ್ಷ್ಮಣರಂತೆ | ________ | ________ |



**ಚೆನ್ನುಡಿ**

**'ನಡೆವವರು ಎಡವದೆ ಕುಳಿತವರು ಎಡವುತ್ತಾರೆಯೆ?'** (ಹೊಸಗನ್ನಡ ಭಾವಾನುವಾದ)

–ರಾಘವಾಂಕ (ಹದಿಮೂರನೆಯ ಶತಮಾನದಲ್ಲಿದ್ದ ಕವಿ. ಈತನ ಪ್ರಮುಖ ಕೃತಿ 'ಹರಿಶ್ಚಂದ್ರ ಕಾವ್ಯ)

**'ಒಬ್ಬ ಮನುಷ್ಯ, ಆತನ ಸ್ನೇಹಿತರು ಹೊಗಳಿ ಹಾಡುವಷ್ಟು ಒಳ್ಳೆಯವನೂ ಇರುವುದಿಲ್ಲ, ಅವನಿಗಾಗದವರು ತೆಗಳಿ ತಿರಸ್ಕರಿಸುವಷ್ಟು ಕೆಟ್ಟವನೂ ಇರುವುದಿಲ್ಲ'**

–ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಕನ್ನಡ ಸಾಹಿತಿಗಳು)

## ಪದ್ಯಪಾಠ – ೭

# ಬಿಡು ಬಾಹ್ಯದೊಳು ಡಂಭವ

–ಸರ್ಪಭೂಷಣ ಶಿವಯೋಗಿ

**ಪ್ರವೇಶ :** ಕೆಲವರು ಅವರಿವರನ್ನು ಮೆಚ್ಚಿಸಲು ಹೋಗಿ ಪಡಬಾರದ ಕಷ್ಟ ಪಡುತ್ತಾರೆ. ಹಾಗೆ ಮಾಡದೆ ತಮ್ಮ ಮನಸ್ಸು ಮೆಚ್ಚಿದ್ದನ್ನು ಮಾಡುವುದು ಒಳ್ಳೆಯದು. ಸರ್ಪಭೂಷಣ ಶಿವಯೋಗಿಯವರ ಒಂದು ತತ್ವಪದ ಈ ಮಾತನ್ನು ಸರಳವಾಗಿ ಸುಂದರವಾಗಿ ಹೇಳಿದೆ.



ಬಿಡು ಬಾಹ್ಯದೊಳು ಡಂಭವ ಮಾನಸದೊಳ<br>
ಗೆಡವಿಡದಿರು ಶಂಭುವ<br>
ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ<br>
ಪಡೆದರೆ ಶಿವನಿನಗೊಲಿವನೆ ಮರುಳೇ

ಜನಮೆಚ್ಚೆ ನಡೆಕೊಂಡರೇನುಂಟು ಲೋಕದಿ<br>
ಮನಮೆಚ್ಚೆ ನಡಕೊಂಬುವುದೆ ಚೆಂದವು<br>
ಜನರೇನು ಬಲ್ಲರು ಒಳಗಾಗೊ ಕೃತ್ಯವ<br>
ಮನವರಿಯದ ಕಳ್ಳತನವಿಲ್ಲವಲ್ಲ

ಜನರು ಮೆಚ್ಚುತೆ ನಿನ್ನ ಕೈಲಾಸಕೊಯ್ವರೆ<br>
ಜನಮೆಚ್ಚದಿರೆ ಶಿವ ಬಿಡುತಿಹನೇ<br>
ಜನರಿಲ್ಲಿ ನಿನ್ನ ದೊಡ್ಡಾತನೆಂದರೆ<br>
ಚಿನುಮಯ ಶಿವನಲ್ಲೆ ಅರಿಯನೆ ಮರುಳೆ

ಮನದೊಳು ಶಿವತಾನು ಮನೆಮಾಡಿಕೊಂಡಿಹ<br>
ಮನಮೆಚ್ಚೆ ನಡೆದರೆ ಶಿವಮೆಚ್ಚುವ<br>
ಮನಕಂಜಿ ನಡೆಯದೆ ಜನಕಂಜಿ ನಡೆದರೆ<br>
ಮನದಾಣ್ಮ ಗುರುಸಿದ್ಧ ಮರೆಯಾಗನೊಲ್ಲ

**ಕ್ಷೇತ್ರ :** ಆಲಿಸುವುದು.

**ಸಾಮರ್ಥ್ಯ : ವಿಷಯವನ್ನು ಆಲಿಸಿದ ಬಳಿಕ ಏಕೆ? ಹೇಗೆ? ಎಂಬ ಪ್ರಶ್ನೆಗಳಿಗೆ ಕಾರಣ ಸಹಿತ ವಿಶ್ಲೇಷಿಸುವುದು.**

**ಆಶಯ :** ಜನ ಮೆಚ್ಚುವಂತೆ ನಡೆದುಕೊಳ್ಳುವುದಕ್ಕಿಂತ ನಮ್ಮ ಮನಸ್ಸು ಮೆಚ್ಚುವಂತೆ ನಡೆದುಕೊಳ್ಳಬೇಕು. ಮನಸ್ಸಿಗೆ ನಮ್ಮ ಎಲ್ಲ ವಿಷಯ ಚೆನ್ನಾಗಿ ಗೊತ್ತಿರುತ್ತದೆ. ಅದಕ್ಕೆ ಮೋಸಮಾಡಲು ಸಾಧ್ಯವಿಲ್ಲ. ಜನರ ಮೆಚ್ಚುಗೆ ಸಂತೋಷವನ್ನು ಕೊಡಬಹುದು ಆದರೆ, ಮನಸ್ಸು ಮೆಚ್ಚುವ ಕೆಲಸವನ್ನು ಮಾಡಿದರೆ ಬದುಕಿನಲ್ಲಿ ನೆಮ್ಮದಿ, ಸಮಾಧಾನ ಇರುತ್ತದೆ.

## ಕವಿ ಪರಿಚಯ



ಬೆಂಗಳೂರಿಗೆ ಸಮೀಪದ ಬಾಣಾವರ ಸರ್ಪಭೂಷಣ ಶಿವಯೋಗಿಗಳ ಸ್ಥಳ. ೧೭೭೫ರಲ್ಲಿ ಹುಟ್ಟಿದ ಇವರ ಇನ್ನೊಂದು ಜನಪ್ರಿಯ ಹೆಸರು ಸಪ್ಪಣ್ಣ. 'ಕೈವಲ್ಯ ವಲ್ಲರಿ' ಎಂಬ ಕೃತಿಯಿಂದ ಇವರು ಕನ್ನಡ ತತ್ವಪದ ಕಾವ್ಯ ಪರಂಪರೆಯ ಮುಖ್ಯ ಕವಿಯಾಗಿದ್ದಾರೆ. 'ಜ್ಞಾನಶತಕ'ಎಂಬ ಸಂಸ್ಕೃತ ಕೃತಿಯನ್ನೂ ರಚಿಸಿದ್ದಾರೆ.

## ಓದಿ–ತಿಳಿಯಿರಿ

ಬಾಹ್ಯ–ಹೊರಗಿನ; ಡಂಭ– ಮೋಸ, ಸೋಗಿನ ನುಡಿ; ಮಾನಸ–ಮನಸ್ಸು; ಕೃತ್ಯ–ಕೆಲಸ; ಚಿನುಮಯ–ಚಿನ್ಮಯ, ಶುದ್ಧಜ್ಞಾನದಿಂದ ಕೂಡಿದ; ಕೈಲಾಸ–ಶಿವನ ವಾಸಸ್ಥಾನ; ಅರಿ–ತಿಳಿವಳಿಕೆ; ಮರುಳ–ಹುಚ್ಚ; ಒಡಲ್–ಶರೀರ; ಶಂಭು– ಈಶ್ವರ; ಅಂಜಿ–ಹೆದರಿ; ಮನದಾಣ್ಮ–ಮನಸ್ಸಿನ ಒಡೆಯ.



## ಅಭ್ಯಾಸ

**ಅ) ಈ ಪ್ರಶ್ನೆಗಳಿಗೆ ಉತ್ತರಿಸಿ.**

೧. ಬಾಹ್ಯದಲ್ಲಿ ಏನನ್ನು ಬಿಡಬೇಕು?

೨. ಲೋಕದಲ್ಲಿ ಹೇಗಿದ್ದರೆ ಚೆಂದ?

೩. ಮನದಲ್ಲಿ ಮನೆಮಾಡಿಕೊಂಡಿರುವವರು ಯಾರು?

೪. ಒಳಗಾಗುವ ಕೃತ್ಯ ಗೊತ್ತಾಗುವುದಿಲ್ಲವೇಕೆ?

೫. ಸರ್ಪಭೂಷಣ ಶಿವಯೋಗಿಯವರ ಅಂಕಿತನಾಮ ಯಾವುದು?

**ಆ) ಈ ಪದ್ಯಭಾಗವನ್ನು ಪೂರ್ಣಮಾಡಿ.**

ಜನಮೆಚ್ಚೆ ________________________

________________________

________________________

________________ ಕಳ್ಳತನವಿಲ್ಲವಲ್ಲ

**ಇ) ಮಾದರಿಯಂತೆ ಕೊಟ್ಟಿರುವ ಪದಗಳನ್ನು ಬಿಡಿಸಿ ಬರೆಯಿರಿ.**

**ಮಾದರಿ :** ಮಾನಸದೊಳಗೆಡವಿಡದಿರು–ಮಾನಸದ+ಒಳಗೆ+ಎಡೆ+ಬಿಡದೆ+ಇರು

೧. ಶಿವನಿನಗೊಲಿವನೆ

೨. ನಡೆಕೊಂಡರೇನುಂಟು

೩. ಕಳ್ಳತನವಿಲ್ಲದಿಲ್ಲ

೪. ಮರೆಯಾಗನೊಲ್ಲ.

**ಈ) ಕೊಟ್ಟಿರುವ ಮಾದರಿಯಂತೆ ಪದಗಳನ್ನು ಬಳಸಿ ವಾಕ್ಯವೃಂದ ರಚಿಸಿ:**

ಮಾದರಿ: ಒಳ್ಳೆಯ, ಅಚ್ಚುಕಟ್ಟು, ರೂಢಿ, ಅಚ್ಚುಮೆಚ್ಚು, ಅವಗಣನೆ, ಎಚ್ಚರಿಕೆ, ಜಾಗರೂಕತೆ

**ವಾಕ್ಯವೃಂದ :** ನನ್ನ ಅಮ್ಮ ಅತ್ಯಂತ **ಒಳ್ಳೆಯ** ವ್ಯಕ್ತಿ. ಅವರು ಎಲ್ಲಾ ಕೆಲಸದಲ್ಲೂ ಅತ್ಯಂತ **ಅಚ್ಚುಕಟ್ಟು.** ಯಾವಾಗಲೂ ಕೆಲಸ ಮಾಡುತ್ತಲೇ ಇರುವುದು ಅವರಿಗೆ **ರೂಢಿ**ಯಾಗಿಬಿಟ್ಟಿದೆ. ನಮ್ಮನ್ನು ಕಂಡರೆ ಅವರಿಗೆ ಅವರನ್ನು ಕಂಡರೆ ನಮಗೆ ತುಂಬಾ **ಅಚ್ಚುಮೆಚ್ಚು.** ಕೆಲಸ ಮಾಡುವ ಭರದಲ್ಲಿ ಕೆಲವೊಮ್ಮೆ ಅವರು ಅವರ ಆರೋಗ್ಯವನ್ನೂ **ಅವಗಣನೆ** ಮಾಡಿಬಿಡುತ್ತಾರೆ. ನಾವೇ **ಎಚ್ಚರಿಕೆ** ಹೇಳಿ ಅವರ ಆರೋಗ್ಯವನ್ನು **ಜಾಗರೂಕತೆ**ಯಿಂದ ನೋಡಿಕೊಳ್ಳುತ್ತೇವೆ.

ವಾಕ್ಯವೃಂದ ರಚಿಸಲು ಬಳಸಬೇಕಾದ ಪದಗಳು: ಸುಖ, ಉಪಕಾರ, ನಿಂದೆ, ಅಪಾಯ, ಜಾರು, ಕೂಲಂಕಷ, ಪ್ರೀತಿ, ವರದಾನ.



**ಚೆನ್ನುಡಿ**

**'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗೆ ಅಂಜಿದೊಡೆ ಎಂತಯ್ಯ?**
**ಸಮುದ್ರದ ತಡಿಯಲೊಂದು ಮನೆಯಮಾಡಿ ನೊರೆತೆರೆಗಳಿಗೆ ಅಂಜಿದೊಡೆ ಎಂತಯ್ಯ?**
**ಸಂತೆಯೊಳಗೆ ಒಂದು ಮನೆಯಮಾಡಿ ಶಬ್ದಕ್ಕೆ ನಾಚಿದೊಡೆ ಎಂತಯ್ಯ?**
**ಲೋಕದಲ್ಲಿ ಹುಟ್ಟಿಬಂದ ಬಳಿಕ ಸ್ತುತಿ–ನಿಂದೆಗಳು ಬಂದೊಡೆ**
**ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.**

–ಅಕ್ಕಮಹಾದೇವಿ (೧೨ನೆಯ ಶತಮಾನದಲ್ಲಿದ್ದ ವಚನಕಾರ್ತಿ)

**ಅರ್ಥ :**ಅಂಜು–ಹೆದರು; ತಡಿ–ತೀರ,ದಡ;ಸ್ತುತಿ–ಹೊಗಳಿಕೆ; ನಿಂದೆ– ತೆಗಳಿಕೆ; ಬಂದೊಡೆ–ಬಂದರೆ.

## ಗದ್ಯ ಪಾಠ – ೮

# ರಜಾ ದಿನಗಳನ್ನು ಕಳೆಯುವುದು ಹೇಗೆ?

–ಸಾ. ಶಿ. ಮರುಳಯ್ಯ

**ಪ್ರವೇಶ :** ಬೇಸಿಗೆಯ ರಜೆ. ರಜೆಯಲ್ಲಿ ಏನು ಮಾಡುವಿರಿ ಎಂದು ತರಗತಿಯ ಟೀಚರ್ ಕೇಳಿದರು. ಒಬ್ಬೊಬ್ಬರದು ಒಂದೊಂದು ಉತ್ತರ. ಕೆಲವರು ಟಿವಿ ನೋಡುವ ಯೋಜನೆ, ಕೆಲವರಿಗೆ ಪುಸ್ತಕ ಓದುವ ಆಲೋಚನೆ, ಕೆಲವರಿಗೆ ಸಿನೆಮಾ, ಕೆಲವರಿಗೆ ವಿಡಿಯೋ ಗೇಮ್, ಕೆಲವರಿಗೆ ನೆಂಟರ ಮನೆಯ ಭೇಟಿ, ಮತ್ತೆ ಕೆಲವರಿಗೆ ಮದುವೆ ಮುಂತಾದುವುಗಳ ಗೌಜಿ, ಕೆಲವರಿಗೆ ಪ್ರವಾಸದ ಆಲೋಚನೆ. ಟೀಚರ್ ಹೇಳಿದರು "ರಜೆಯನ್ನು ವ್ಯರ್ಥ ಮಾಡಬೇಡಿ ಅದನ್ನು ಸಾರ್ಥಕ ಮಾಡಿ. ಅದಕ್ಕಾಗಿ ಹಿರಿಯರು ಹಾಕಿಕೊಟ್ಟ ಮಾರ್ಗ ಇದೆ. ಈ ಹಾದಿಯಲ್ಲೂ ನೀವು ನಡೆಯಬಹುದು" ಎಂದರು.





ರಜಾದಿನಗಳು ಬರುತ್ತಿವೆ. ನಿಮ್ಮನ್ನು ಕೈಬೀಸಿ ಕರೆಯುತ್ತಿವೆ. ಆ ಕರೆಗೆ ಮೊದಲು ನೀವು ಓಗೊಡಬೇಕು. ಏಕೆಂದರೆ ಇಂತಹ ಆನಂದದ ಸಮಯ ನಿಮಗೆ ಮತ್ತೆ ಸಿಗುವುದು ಬಹುದಿನಗಳು ಕಳೆದ ಮೇಲೆ. ಕೈಗೆ ಸಿಕ್ಕಿದ್ದನ್ನು ಕಳೆದುಕೊಂಡು ಸಂತಾಪಿಸಬೇಡಿ. ಪ್ರಕೃತಿಗೆ ವಸಂತಕಾಲವಿದ್ದಂತೆ ವಿದ್ಯಾರ್ಥಿ ವಿದ್ಯಾರ್ಥಿನಿಯರಾದ ನಿಮಗೆ ರಜಾದಿನಗಳು.

ಮನೆಯ ಹೊರಗೆ ನಿಮಗಾಗಿ ಕಾಯುತ್ತಿರುವ ನಿಸರ್ಗ ನಿಮ್ಮನ್ನು ಹಾರ್ದಿಕವಾಗಿ ಸ್ವಾಗತಿಸುತ್ತಿದೆ. ಅದನ್ನು ಗೌರವಿಸಿ. ಅದರ ಒಳಗೆ ನೀವು ನಡೆಯಿರಿ. ಅಂದರೆ ನಿಸರ್ಗದತ್ತವಾದ ಪ್ರೇಕ್ಷಣೀಯ ಸ್ಥಳಗಳಿಗೆ ನೀವು ಭೇಟಿಕೊಡಿ. ಸಹ್ಯಾದ್ರಿಯ ಶಿಖರಗಳನ್ನೇರಿ ನೆಲದ ಕಡೆಗೆ ದೃಷ್ಟಿ ಹಾಯಿಸಿ. ಓಹ್! ಏನೆಂತಹ ಚೆಲುವು ಅಲ್ಲಿಯದು! ಮೈಹಾಸಿ ಮಲಗಿರುವ ಆ ನಿಸರ್ಗದ ಎದೆಯ ಮೇಲೆ ಹೊರಳಿ ಉರುಳಾಡಬೇಕೆಂದು ಎನಿಸದಿರದು. ಅಲ್ಲಿಗೆ ನೀವು ಹೋಗಲೇಬೇಕಲ್ಲವೇ? ಹೋಗಿ.. ಹೋಗಿ.. ಆನಂದಿಸಿ! ಮರೆಯದಿರಿ.

ಪೇಟೆಯ ಮಕ್ಕಳು ರಜಾದಿನಗಳಲ್ಲಿ ಹಳ್ಳಿಗಳನ್ನು ಭೇಟಿ ಮಾಡಬೇಕು. ಗ್ರಾಮೀಣ ಪ್ರದೇಶದ ಮಕ್ಕಳು ನಗರಗಳನ್ನು ದರ್ಶಿಸಬೇಕು. ತಂದೆ ತಾಯಿಗಳು ಮಕ್ಕಳ ಉಲ್ಲಾಸಕ್ಕೆ ನೆರವಾಗಬೇಕು. ಅವರ ಸ್ವಚ್ಛಂದ ವಿಹಾರಕ್ಕೆ ಪ್ರೋತ್ಸಾಹ ಕೊಡಬೇಕು.



ನಗರದ ಮಕ್ಕಳು ಹಳ್ಳಿಗಳಿಗೆ ಹೋದರೆ ಹೊಲ, ತೋಟ, ಗದ್ದೆಗಳಿಗೆ ಹೋಗುವುದನ್ನು ಮರೆಯಬೇಡಿ. ಅಲ್ಲಿ ಅಡ್ಡಾಡುವುದೇ ಒಂದು ಸುಯೋಗ! ಅಲ್ಲಿನಷ್ಟು ಸ್ವಚ್ಛ ಹವೆಯಾಗಲಿ, ನಿಸರ್ಗದತ್ತ ನೀರಾಗಲಿ, ಕೆನೆಮೊಸರಿನಂಥಾ ಬೆಳದಿಂಗಳಾಗಲಿ ನಿಮಗೆ ನಗರದಲ್ಲಿ ಸಿಗುವುದು ಕಷ್ಟ. ಟ್ಯೂಬಲೈಟಿನ ಬೆಳಕೇ ನಿಮ್ಮ ಪಾಲಿನ ಬೆಳದಿಂಗಳಾಗಿರುವಾಗ ನಿಮಗೆ ಚಂದ್ರನೆಂಬ ಬೋಗುಣಿಯಿಂದ ಬಸಿಯುತ್ತಿರುವ ಹಾಲ್ದಿಂಗಳ ಸವಿ ಎಲ್ಲಿ ಸಿಗಬೇಕು! ಹಳ್ಳಿಗೆ ಹೋದ ರಾತ್ರಿ ನೀವು ಮನೆಯ ಮಾಳಿಗೆಯ ಮೇಲೆ ಹಾಯಾಗಿ ಮಲಗಬೇಕು. ಚುಕ್ಕೆಗಳಿಂದ ಕಿಕ್ಕಿರಿದ ನಭೋಮಂಡಲ ನಿಮಗೆ ಏನೆಲ್ಲ ಬೋಧನೆ ಕೊಟ್ಟೀತು. ಅದನ್ನು ಕೇಳುವ ಕಲಿಯುವ ಅವಕಾಶ ಕಳೆದುಕೊಳ್ಳಬೇಡಿ.



ಹಳ್ಳಿಗರಿಗೆ ಬಿಡುವಿನ ದಿನಗಳು ದೊರೆಯುವುದು ಯುಗಾದಿ ಮುಗಿದ ಮೇಲೆ. ಅದು ಸುಗ್ಗಿಯ ದಿನ ಅವರಿಗೆ. ಮನೆ ತುಂಬ ಕಾಳುಕಡ್ಡಿ ತುಂಬಿಕೊಂಡು ಕೈ ಬಿಡುವು ಮಾಡಿಕೊಂಡಿರುತ್ತಾರೆ. ಆ ದಿನಗಳಲ್ಲಿ ಹಳ್ಳಿಹಳ್ಳಿಯಲ್ಲೂ ಜಾತ್ರೆ. ಬೀದಿ ಬೀದಿಯಲ್ಲೂ ಪರಿಷೆ!. ಬೆಂಡು-ಬತ್ತಾಸು, ಖಾರ- ಮಂಡಕ್ಕಿ ಕೊಳ್ಳಬಹುದು; ಬೇಕಾದಂತೆ ಬಳಸಬಹುದು! ಬಣ್ಣ ಬಣ್ಣದ ಪಟ್ಟೆ-ಪತಾಕೆಗಳಿಂದ ಅಲಂಕೃತವಾದ ಸರ್ವಾಂಗ ಸುಂದರವಾದ, ತುಂಬು ಗಂಭೀರದಿಂದ ಹರಿವ ದೇವರ ತೇರು, ಹಳ್ಳಿಗಳ ಕೋಲಾಟ, ಹಾಡುಗಳು, ವಿವಿಧ ವೇಷಗಳು, ಬಗೆಬಗೆಯ ಮೇಳಗಳು, ಬಾಣ ಬಿರುಸುಗಳನ್ನು ಕಾಣಬಹುದು.



ನೀವು ಇಂದೇ ಹಳ್ಳಿಗಳಿಗೆ ಹೋಗಿ, ಅಲ್ಲಿ ಜಾತ್ರೆಗಳನ್ನು ನೋಡಿ. ಜೊತೆಗೆ ಸೊಗಸಾದ ರಂಗತಾಲೀಮುಗಳು ಅಲ್ಲಿ ನಡೆಯುತ್ತಿರುತ್ತವೆ. ಅವುಗಳನ್ನು ನೋಡಬೇಕು ನೀವು. ಹಳ್ಳಿಹಳ್ಳಿಗೂ ಒಂದೊಂದು ಮೇಳ. ಇಲ್ಲವೇ ಬಯಲಾಟ, ಯಕ್ಷಗಾನ ಕುಣಿತ, ಸಣ್ಣಾಟ. ಇಡೀ ರಾತ್ರಿ ನೀವು ಆ ಜಾನಪದ ಕಲೆಯನ್ನು ನೋಡಿ ಆನಂದಿಸಬಹುದು. ಒಂದು ತಿಂಗಳಾದರೂ ಅದರ ಸವಿನೆನಪನ್ನು ನೀವು ಮತ್ತೆ ಮತ್ತೆ ಮೆಲುಕು ಹಾಕಬಹುದು. ಪಟ್ಟಣದ ಪುಟಾಣಿಗಳೆ, ಮರೆಯದೆ ನೀವು ಹಳ್ಳಿಗಳಿಗೆ ಭೇಟಿಕೊಡಿ.

ಅನಂತರ ನಿಮ್ಮ ನಿಮ್ಮ ಊರುಗಳಿಗೆ ಹಿಂತಿರುಗಿ ಊರು ಸೇರಿದ ಮೇಲೆ ನಿಮ್ಮ ಜೊತೆಗಾರರನ್ನು ಕೂಡಿ, ಕ್ರೀಡೆಗಳನ್ನು ಆರಂಭಿಸಿ, ನಿಮಗೆ ಪ್ರಿಯವಾದ ಆಟ ಆಡಿ. ಇಲ್ಲವೆ ಅಭ್ಯಾಸ ಮಾಡಿ. ಚಿಣ್ಣಿ–ದಾಂಡು, ಗೋಲಿ–ಗಜ್ಜುಗ, ಕಬ್ಬಡಿ–ಕೋಲಾಟ, ಚೌಕಾಬಾರ–ಬಟ್ಟಕುಣಿಮಣೆ ಯಾವುದಾದರೂ ಆಡಿ: ಒಳ್ಳೆ ಆಟ ಆಡಿ. ಬೇಕಾದರೆ ಮರಕೋತಿ ಆಡಿ. ಕೈಕಾಲು ಜೋಪಾನ! ಕ್ರಿಕೆಟ್, ಟೆನ್ನಿಸ್, ಫುಟ್‌ಬಾಲ್, ವಾಲೀಬಾಲ್, ತ್ರೋಬಾಲ್, ಟೆನ್ನಿಕಾಯ್ಟುಗಳನ್ನು ಬೇಡ ಅನ್ನೊಲ್ಲ. ಅನುಕೂಲ ಇದ್ದರೆ ಅವನ್ನೂ ಆಡಿ, ಅಭ್ಯಾಸ ಮಾಡಿ.



ಹಳ್ಳಿಮಕ್ಕಳು ಒಕ್ಕಲಮಕ್ಕಳು ಅನ್ನೋದನ್ನ ಮರೆಯಬಾರದು. ಈ ಬೇಸಗೆ ದಿನಗಳಲ್ಲಿ ನಿಮ್ಮ ತಂದೆ ತಾಯಂದಿರು ಮನೆಯಲ್ಲಿ ಹಗ್ಗ ಹೊಸೆಯುವುದು, ತೋಟದಲ್ಲಿ ಮರಗಳ ಸುತ್ತು ಬಿಡಿಸುವುದು, ಹೊಲಗಳಲ್ಲಿ ಬದು ಹಾಕುವುದು, ಗೋಡುಗೊಬ್ಬರ ಹೊಡೆಯುವುದು ಇವೇ ಮೊದಲಾದ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ನೀವು ಆ ಕೆಲಸಗಳಲ್ಲಿ ನಿಮ್ಮ ತಂದೆ ತಾಯಂದಿರಿಗೆ ನೆರವಾಗಬೇಕು. ಕೆಲವರು ಮನೆಯನ್ನೋ ಗುಡಿಸಿಲನ್ನೋ ಕಟ್ಟುವ ಇಲ್ಲವೇ ರಿಪೇರಿ ಮಾಡುವ ಕೆಲಸದಲ್ಲಿ ತೊಡಗಿರುತ್ತಾರೆ. ನೀವು ಅವರ ಜೊತೆಗೂಡಬೇಕು. ಆಡಿಕೊಂಡು ಕೆಲಸ ಮಾಡಿದರೆ ಹೆತ್ತ ಕರುಳಿಗೆ ಹಿಡಿಸಲಾರದಷ್ಟು ಆನಂದ. ಯಾವುದೇ ಕೆಲಸವನ್ನು ಮಾಡಬೇಕಲ್ಲಪ್ಪ ಅಂತಾ ಮಾಡಬೇಡಿ; ಆಟ ಅಂತಾ ಮಾಡಿ, ವಿನೋದದ ಕ್ರೀಡೆ ಅಂತಾ ಮಾಡಿ. ಆಗ ಕೆಲಸ ಹಗುರ ಆಗುತ್ತೆ. ನಿಮಗೆ ವ್ಯಾಯಾಮವೂ ದೊರೆಯುತ್ತೆ. ಅಂಥ ಕೆಲಸದಲ್ಲಿ ಹಿಮ್ಮೆಟ್ಟಬಾರದು.





ಪೇಟೆ ಮಕ್ಕಳಾಗಲೀ ಹಳ್ಳಿ ಮಕ್ಕಳಾಗಲೀ ನೀವು ಗ್ರಾಮೀಣ ಪ್ರದೇಶಗಳಲ್ಲಿ ತಿರುಗಾಡುವಾಗ ಒಂದು ಒಳ್ಳೆ ಕೆಲಸ ಮಾಡಬಹುದು. ಅದು ಜಾನಪದ ಸಂಗ್ರಹಕಾರ್ಯ ಇಲ್ಲವೇ ಕ್ಷೇತ್ರ ಕಾರ್ಯ. ಅಂದರೆ ಜನಪದಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ಸಂಗ್ರಹಿಸುವುದು. ಉದಾಹರಣೆಗೆ: ಊರ ಹೆಸರುಗಳು, ಸ್ಥಳೀಯ ಐತಿಹ್ಯಗಳು, ನಿಮ್ಮೂರಿನ ತಿಂಡಿ ತಿನಿಸುಗಳು, ಒಡವೆ–ವಸ್ತುಗಳು, ಆಚಾರ–ವಿಚಾರಗಳು, ಮದುವೆ–ಮುಂಜಿ, ಹಬ್ಬ –ಹರಿದಿನ, ದೇವರು–ದಿಂಡರು, ಜಾತ್ರೆ–ಪರಿಷೆ, ಆಟ–ಪಾಠಗಳು, ವಿನೋದ–ವಿಪರ್ಯಾಸಗಳು, ಒಗಟು–ಗಾದೆಗಳು, ಜನಪದ ಕತೆ, ಜನಪದ ಗೀತೆ, ಲಾವಣಿ ಕುಣಿತಗಳು, ಮೇಳ ಮದಾಸಿಗಳು, ಕೈಕಸುಬು, ಮೂಢನಂಬಿಕೆ ಇತ್ಯಾದಿ ಇತ್ಯಾದಿ. ಒಬ್ಬೊಬ್ಬ ವಿದ್ಯಾರ್ಥಿ ತನ್ನ ಕೈಲಾದಷ್ಟು ಶೇಖರಿಸಿದರೆ ಅಳಿಯುತ್ತಿರುವ ನಮ್ಮ ಜಾನಪದ ನಿಮ್ಮ ಕೈಯಲ್ಲಿ ಜೀವಂತಿಕೆ ಪಡೆಯಬಲ್ಲುದು.

ನಮ್ಮ ನಾಡಿನ ಪ್ರತಿ ಕಲ್ಲೂ ಒಂದೊಂದು ಕತೆ ಹೇಳುತ್ತೆ. ಅಂದಮೇಲೆ ಅವೆಷ್ಟು ಐತಿಹ್ಯಗಳು, ಪುರಾಣಗಳು, ಪವಾಡಗಳು ಕಾಲಗರ್ಭದಲ್ಲಿ ಅಡಗಿ ಹೋಗಿವೆಯೋ ತಿಳಿಯದು. ಊರ ನಿರ್ಮಾಣಕ್ಕೆ ಒಂದು ಹಿನ್ನೆಲೆ ಇದ್ದಂತೆ ಅದಕ್ಕಿಟ್ಟ ಹೆಸರಿಗೆ ಒಂದು ಇತಿಹಾಸ ಇರುತ್ತೆ. ನೀವದನ್ನು ಸಂಶೋಧಿಸಿ. ನಿಮ್ಮೂರಿಗೆ ಆ ಹೆಸರು ಹೇಗೆ ಬಂತು? ಆ ಹೆಸರಿನ ಅರ್ಥ ವಿವರಣೆ ಬರೆಯುತ್ತೀರಾ? ಜನಪದ ಗೀತೆಗಳನ್ನು ಟೇಪ್‌ರಿಕಾರ್ಡ್ ಮಾಡಬಹುದು. ಹಳೇ ಕಾಲದವರು ಬಳಸುತ್ತಿದ್ದ ಅಡಕತ್ತರಿ, ಸುಣ್ಣದಡಬ್ಬಿ, ಕೆಲವು ಅಲಂಕಾರದ ವಸ್ತುಗಳು, ಪಾತ್ರೆಗಳು, ಇಂಥವುಗಳನ್ನು ಸಂಗ್ರಹಿಸಬಹುದು. ನಿಮ್ಮಂಥ ತರುಣರು ನಾಲ್ಕು ಜನ ಒಂದೂರಲ್ಲಿದ್ದರೆ ಸಾಕು, ಆ ಊರಿನ ಸಮಗ್ರ ಜೀವನ ದರ್ಶನವನ್ನು ಸಂಗ್ರಹಿಸಿ, ಒಂದು ಪ್ರದರ್ಶನವಾಗಿ ತೋರಿಸಬಹುದು. ರಜೆಯ ದಿನಗಳಿರುವುದು ಬರಿ ಮಜಕ್ಕಲ್ಲ, ಮೋಜಿಗಲ್ಲ, ನಿಮ್ಮ ಭವಿಷ್ಯದ ಬದುಕನ್ನು ರೂಪಿಸಿಕೊಳ್ಳುವುದಕ್ಕಾಗಿನ ತರಬೇತಿ ಕಾಲ! ಅದನ್ನು ನೀವು ಹೇಗೆ ದುಡಿಸಿಕೊಂಡಿದ್ದೀರಿ ಎಂಬ ಬಗ್ಗೆ ಬರೆಯಿರಿ.

**ಕ್ಷೇತ್ರ :** ಬರೆಯುವುದು, ಓದುವುದು.

**ಸಾಮರ್ಥ್ಯ :**
* ಪ್ರಬಂಧ, ಕಥೆ, ಕವಿತೆ, ಪತ್ರ, ಟಿಪ್ಪಣಿ, ಗಾದೆಗಳ ವಿಸ್ತರಣೆ ಮುಂತಾದವುಗಳನ್ನು ಸೂಕ್ತ ಲೇಖನಚಿಹ್ನೆಯೊಂದಿಗೆ ಸಮರ್ಥವಾಗಿ ಬರೆಯುವುದು.
* ಮುದ್ರಿತ ಪಠ್ಯೇತರ ವಿಷಯಗಳು ಮತ್ತು ಕೈಬರಹವನ್ನು ಓದಿ ಕೇಳಿದ ಪ್ರಶ್ನೆಗಳಿಗೆ ಉತ್ತರಿಸುವುದು.

**ಆಶಯ :** ಒಂದು ವರ್ಷದಲ್ಲಿ ಮಕ್ಕಳಿಗೆ ಹಲವು ಬಗೆಯ ರಜೆಗಳು ಬರುತ್ತವೆ. ಈ ರಜೆಯನ್ನು ಸಾರ್ಥಕಗೊಳಿಸುವುದು ಹೇಗೆ? ಅದನ್ನು ಅವರ ವ್ಯಕ್ತಿತ್ವದ ಬೆಳವಣಿಗೆಯ ಅಂಶವಾಗಿ ಹೇಗೆ ಪರಿವರ್ತಿಸಬಹುದು–ಇಂಥ ಹಲವು ಚಿಂತನೆಗೆ ಈ ಪಾಠ ಮಾರ್ಗದರ್ಶಿಯಾಗಬಹುದು



## ಲೇಖಕರ ಪರಿಚಯ



ಸಾ. ಶಿ. ಮರುಳಯ್ಯನವರು, ಕವಿ, ಸಾಹಿತಿಗಳು ವಿಮರ್ಶಕರು. ಸಂಶೋಧಕರು, ಕಾದಂಬರಿಕಾರರು. ಇವರು ವಿಶ್ವಕೋಶದ ಪ್ರಧಾನ ಸಂಪಾದಕರಾಗಿ, ಕಾಲೇಜಿನ ಪ್ರಾಂಶುಪಾಲರಾಗಿ ಕಾರ್ಯ ನಿರ್ವಹಿಸಿದ್ದಾರೆ. ಇವರ ಪೂರ್ಣ ಹೆಸರು ಸಾಸಲು ಶಿವರುದ್ರಯ್ಯ ಮರುಳಯ್ಯ. **ಸೀತಾ ವನವಾಸ ಸಂಗ್ರಹ, ವಿಪರ್ಯಾಸ, ಘೋಷವತಿ, ಬೃಂದಾವನಲೀಲೆ, ರಾಸಲೀಲೆ, ರೂಪಸಿ, ಚೈತ್ರಜ್ಯೋತಿ, ನನ್ನ ಕವನಗಳು, ಬಾರೋ ಮೈಲಾರಕೆ,** ಮೊದಲಾದ ಕವನ ಸಂಕಲನಗಳು, ಪುರುಷಸಿಂಹ, ಹೇಮಕೂಟ ಮೊದಲಾದ ಕಾದಂಬರಿಗಳು, **ಮರಿಬೇಡಿ, ವಿಜಯವಾತಾಪಿ** ಮೊದಲಾದ ನಾಟಕಗಳು **ಹೂವು ತಂದವರು, ಭಾರತರತ್ನ** ಮೊದಲಾದ ವ್ಯಕ್ತಿಚಿತ್ರಗಳು ಇವರ ಕೃತಿಗಳಾಗಿವೆ. **ಬಾರೋ ಮೈಲಾರಕೆ, ಸ್ನೋವೈಟ್,**

**ಗೀತಾಭಾರತಿ** ಮೊದಲಾದ ಕವನಗಳು ಧ್ವನಿಸುರುಳಿಗಳ ರೂಪದಲ್ಲಿಯೂ ಪ್ರಕಟವಾಗಿವೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಸಾಹಿತ್ಯ ಅಕಾಡಮಿ ಪ್ರಶಸ್ತಿ, ಸಂದೇಶ ಪ್ರಶಸ್ತಿ, ಉತ್ತರ ಅಮೆರಿಕಾದ ಉಡುಗೊರೆ ಮುಂತಾದ ಪ್ರಶಸ್ತಿಗಳಿಂದ ಪುರಸ್ಕೃತರಾಗಿದ್ದಾರೆ.

## ಓದಿ ತಿಳಿಯಿರಿ

ವಸಂತಕಾಲ–ಚೈತ್ರ ಮತ್ತು ವೈಶಾಖ ಮಾಸಗಳಕಾಲ; ನಿಸರ್ಗ–ಪ್ರಕೃತಿ; ಶಿಖರ–ತುದಿ; ದರ್ಶಿಸು–ನೋಡು; ಸ್ವಚ್ಛಂದ–ನಿರ್ಬಂಧವಿಲ್ಲದುದು; ಸುಯೋಗ–ಒಳ್ಳೆಯಯೋಗ, ಒಳ್ಳೆಯ ಅವಕಾಶ; ಬೋಗುಣಿ–ದೊಡ್ಡ ಪಾತ್ರೆ; ಹಾಲ್ದಿಂಗಳು–ಹಾಲಿನಂತಹ ಬೆಳದಿಂಗಳು; ಚುಕ್ಕೆ–ನಕ್ಷತ್ರ; ಸುಗ್ಗಿ–ಧಾನ್ಯಗಳ ಕೊಯ್ಲಿನ ಕಾಲ; ಪರಿಷೆ–ಜಾತ್ರೆ; ಬೆಂಡು ಬತ್ತಾಸು– ಒಂದು ಬಗೆಯ ಸಿಹಿತಿಂಡಿ; ಮಂಡಕ್ಕಿ–ಪುರಿ, ಖಾರದ ಅವಲಕ್ಕಿ; ಪತಾಕೆ–ಬಾವುಟ; ಬಾಣ ಬಿರುಸು–ಒಂದು ಬಗೆಯ ಪಟಾಕಿ; ಮೊಳ–ಕೈನ ತುದಿಯಿಂದ ಮೊಳಕೈವರೆಗಿನ ಉದ್ದ; ಕುಣಿತ–ನರ್ತನ; ಚಿಣ್ಣಿದಾಂಡು–ಕೋಲಿನಿಂದ ಆಡುವ ಆಟದ ಒಂದು ಬಗೆ; ಗಜ್ಜುಗ–ಗಿಡದಿಂದ ದೊರಕುವ ಗಟ್ಟಿಯಾದ ಕಾಯಿ; ಒಕ್ಕಲು ಮಕ್ಕಳು–ಬೇಸಾಯಗಾರರ ಮಕ್ಕಳು; ಬದಿ –ಗದ್ದೆ ಅಥವಾ ಹೊಲದ ಸುತ್ತ ಇರುವ ತಡೆ; ಗೋಡು–ರೇವೆ ಮಣ್ಣು, ಹೂಳುಮಣ್ಣು; ಕಾಲಗರ್ಭ–ಇತಿಹಾಸ; ಅಡಕತ್ತರಿ–ಸಣ್ಣಕತ್ತರಿ.

## ಪಾಠ ಪೂರಕ ವಿವರಣೆ

**ಬಯಲಾಟ/ಯಕ್ಷಗಾನ:** ಕರ್ನಾಟಕ ಸಂಸ್ಕೃತಿಯ ಒಂದು ಪ್ರಮುಖ ಅಂಗವಾಗಿ ಬೆಳೆದು ಬಂದಿರುವ ಜನಪದ ರಂಗಸಂಪ್ರದಾಯ. ಇದು ಇಂದು ವಿವಿಧ ಪ್ರಭೇದಗಳೊಡನೆ ಕರ್ನಾಟಕದ ಅನೇಕ ಭಾಗಗಳಲ್ಲಿ ಪ್ರಚಲಿತವಾಗಿದೆ. ಪ್ರಮುಖ ಪ್ರಭೇದಗಳನ್ನು ಹೀಗೆ ಗುರುತಿಸಬಹುದು.

೧. **ಅ) ಯಕ್ಷಗಾನ ಬಯಲಾಟ :** ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು, ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ಗರ್ಭ ಪ್ರದೇಶ. **ಆ) ಪಡುವಲಪಾಯ** (ಬಡಗತಿಟ್ಟು, ತೆಂಕತಿಟ್ಟು) ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಪ್ರದೇಶ; **ಇ) ಮೂಡಲಪಾಯ** (ದೊಡ್ಡಾಟ, ಅಟ್ಟದಾಟ, ಯಕ್ಷಗಾನ ಬಯಲಾಟ್ಗತೆ); **ಈ) ಘಟ್ಟದ ಕೋರೆ.**

೨. **ಬೊಂಬೆಯಾಟಗಳು :** ಅ) ಸೂತ್ರದ ಬೊಂಬೆಯಾಟ ಆ) ತೊಗಲು ಬೊಂಬೆಯಾಟ

೩. **ತಾಳಮದ್ದಲೆ :**

**ಕುಣಿತ:** ದಕ್ಷಿಣ ಕರ್ನಾಟಕದ ಸುತ್ತಮುತ್ತಲ ಪ್ರದೇಶದಲ್ಲಿ ರೂಢಿಯಲ್ಲಿರುವ–ಗೊರವರ ಕುಣಿತ, ಕುರುಬರ ಕುಣಿತ, ಕೀಲು ಕುದುರೆ ಕುಣಿತ, ವೀರಭದ್ರನ ಕುಣಿತ, ಮಾರಿಕುಣಿತ, ಕರಡಿಮಜಲು ಕುಣಿತ, ಲಿಂಗದ ಬೀರನ ಕುಣಿತ, ಸೋಮನ ಕುಣಿತ, ರಂಗದ ಕುಣಿತ,

ಕರಪಾಲ ಮೇಳ, ಕಂಸಾಳೆಯವರ ಕುಣಿತ, ಕೋಲೇ ಬಸವನ ಆಟ, ಕೋಲಾಟ; ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಾಗಿರುವ–ಭೂತದ ಕುಣಿತ, ನಾಗನೃತ್ಯ ಅಥವಾ ನಾಗಮಂಡಲ

**ನೃತ್ಯ :** ಹಾಗೇ ಉತ್ತರ ಕರ್ನಾಟಕದ ಕಡೆಯಲ್ಲಿ ಪ್ರಸಿದ್ಧವಾಗಿರುವ–ಎಲ್ಲಮ್ಮನ ಕುಣಿತ, ಪರವಂತರ ಕುಣಿತ, ಗೊಂದಲಿಗರ ಕುಣಿತ–ಈ ಮೊದಲಾದವುಗಳಲ್ಲಿ ನಾಟಕದ ಬೀಜರೂಪವನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಅಲ್ಲಿಯ ಸಂಭಾಷಣೆಯ ರೀತಿ, ಕುಣಿತದ ಕ್ರಮ, ವೇಷಭೂಷಣಗಳ ಹಾಗೂ ವಾದ್ಯವಿಶೇಷಗಳ ಬಳಕೆ–ಇವುಗಳಲ್ಲೆಲ್ಲ ಜನಪದ ನೃತ್ಯಗಳ ಪ್ರಭಾವವನ್ನು ಕಾಣುತ್ತೇವೆ.

**ಐತಿಹ್ಯ :** ಐತಿಹ್ಯವೆಂದರೆ, ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದನ್ನು ಕುರಿತಂತೆ ಸಾಂಪ್ರದಾಯಿಕ ಮೂಲವಸ್ತುಗಳೊಡನೆ ನಿಜಾಂಶವೊಂದರ ಮೇಲೆ ಆಧಾರಿತವಾಗಿದೆಯೆಂದು ಭಾವಿಸುವ ಕಥನವೇ ಆಗಿದೆ. ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಐತಿಹ್ಯ ಬಹುಶಃ ರೂಪುಗೊಂಡಿರಬೇಕೆಂದು ತೋರುತ್ತದೆ.



## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಪೇಟೆಯ ಮಕ್ಕಳು ರಜಾದಿನಗಳಲ್ಲಿ ಎಲ್ಲಿಗೆ ಭೇಟಿ ನೀಡಬೇಕು?

೨. ಹಳ್ಳಿಗರಿಗೆ ಬಿಡುವಿನ ದಿನಗಳು ದೊರೆಯುವುದು ಯಾವಾಗ?

೩. ಇಡೀ ರಾತ್ರಿ ಯಾವ ಕಲೆಯನ್ನು ನೋಡಿ ಆನಂದಿಸಬಹುದು?

೪. ಯಾವುದೇ ಕೆಲಸವನ್ನು ಹೇಗೆಂದು ತಿಳಿದು ಮಾಡಬೇಕು?

**ಆ. ಕೆಳಗಿನ ಪ್ರಶ್ನೆಗಳಿಗೆ ಎರಡು–ಮೂರು ವಾಕ್ಯಗಳಲ್ಲಿ ಉತ್ತರಿಸಿ.**

೧. ನಿಸರ್ಗವನ್ನು ನೋಡಿದಾಗ ಏನು ಅನ್ನಿಸುತ್ತದೆ?

೨. ನಗರದ ಬೆಳದಿಂಗಳು ಹೇಗಿರುತ್ತದೆ?

೩. ಹಳ್ಳಿಯ ಮಕ್ಕಳು ಹಿರಿಯರಿಗೆ ಹೇಗೆ ನೆರವಾಗಬಹುದು?

೪. ನಾಡಿನ ಚರಿತ್ರೆಯನ್ನು ಹೇಗೆ ಸಂಗ್ರಹಿಸಬಹುದು?

**ಇ. ಕೆಳಗಿನ ಪ್ರಶ್ನೆಗಳಿಗೆ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

೧. ಹಳ್ಳಿಯ ಪರಿಸರ ಹೇಗಿರುತ್ತದೆ?

೨. ಹಳ್ಳಿಯ ಜಾತ್ರೆಗಳಲ್ಲಿ ಏನು ಸಿಗುತ್ತದೆ?

೩. ಯಾವ ಯಾವ ಆಟಗಳನ್ನು ಆಡಬೇಕು?

## ಚಟುವಟಿಕೆ

ಅ) ಚಿಣ್ಣಿ–ದಾಂಡು, ಗೋಲಿ–ಗಜ್ಜುಗ, ಕಬ್ಬಡಿ–ಕೋಲಾಟ, ಚೌಕಾಬಾರ–ಬಟ್ಟಕುಣಿಮಣೆ, ಮರಕೋತಿ, ಕ್ರಿಕೆಟ್, ಟೆನ್ನಿಸ್, ಫುಟ್‌ಬಾಲ್, ವಾಲೀಬಾಲ್, ತ್ರೋಬಾಲ್, ಟೆನ್ನಿಕಾಯಿಟ್– ಮೇಲಿನ ಆಟಗಳನ್ನು ಗ್ರಾಮೀಣ ಆಟಗಳು ನಗರದ ಆಟಗಳು ಎಂದು ವಿಂಗಡಿಸಬಹುದೇ ಯೋಚಿಸಿ ಪಟ್ಟಿಮಾಡಿ

ಆ) ನಿಮಗೆ ಗೊತ್ತಿರುವ ಆಟಗಳಾವುವು? ಪಟ್ಟಿಮಾಡಿ.

ಇ) ಬೆಂಡು ಬತ್ತಾಸು, ಖಾರ ಮಂಡಕ್ಕಿ : ಇದರಂತೆ ನಿಮಗೆ ತಿಳಿದಿರುವ ತಿಂಡಿಗಳನ್ನು ಪಟ್ಟಿಮಾಡಿ.

ಈ) ಕಳೆದ ರಜೆದಿನಗಳನ್ನು ಹೇಗೆ ಕಳೆದಿರಿ? ಬರುವ ರಜೆದಿನಗಳನ್ನು ಹೇಗೆ ಕಳೆಯುತ್ತೀರಿ? ಎಂಬುದನ್ನು ಕುರಿತು ನಿಮ್ಮ ಮಾತುಗಳಲ್ಲಿ ಪ್ರಬಂಧ ಬರೆಯಿರಿ.

## ಭಾಷಾಭ್ಯಾಸ

ಅ) ಚಿಣ್ಣಿ–ದಾಂಡು, ಗೋಲಿ–ಗಜ್ಜುಗ, ಕಬ್ಬಡಿ–ಕೋಲು, ಚೌಕಾಬಾರ, ಬಟ್ಟಕುಣಿಮಣೆ, ಮರಕೋತಿ, ಕ್ರಿಕೆಟ್, ಟೆನ್ನಿಸ್, ಫುಟ್ ಬಾಲ್, ವಾಲೀಬಾಲ್, ಥ್ರೋಬಾಲ್, ಟೆನ್ನಿಕಾಯಿಟ್ –ಇವುಗಳಲ್ಲಿ ಕನ್ನಡದ ಹೆಸರಿರುವ ಆಟಗಳು, ಇಂಗ್ಲಿಷ್ ಹೆಸರಿರುವ ಆಟಗಳನ್ನು ಪ್ರತ್ಯೇಕ ಪಟ್ಟಿಮಾಡಿ.

ಆ) ಯಕ್ಷಗಾನ, ನಾಟಕ, ಸಿನಿಮಾ, ಸಂಗೀತ, ನೃತ್ಯ, ಭಾಷಣ, ರೇಡಿಯೋ, ಟಿವಿ, ಪತ್ರಿಕೆ, ಪುಸ್ತಕ, –ಇವುಗಳಲ್ಲಿ ನೋಡುವ, ಕೇಳುವ, ಓದುವ ಮಾಧ್ಯಮಗಳನ್ನು ಪಟ್ಟಿಮಾಡಿ.



## ವ್ಯಾಕರಣ

### ಕ್ರಿಯಾಪದ

ನಮ್ಮ ದಿನನಿತ್ಯದ ಮಾತುಗಳನ್ನು ಗಮನಿಸಿ. 'ನೀನು ಊಟ ಮಾಡು', ನನ್ನ ಶಾಲೆ ಚೆನ್ನಾಗಿದೆ' –ಹೀಗೆ ನಾವು ಪದಗಳ ಗುಂಪುಗಳನ್ನು ಒಂದು ನಿರ್ದಿಷ್ಟ ಸರಣಿಯಲ್ಲಿಟ್ಟು ಬಳಸುತ್ತೇವೆ. ಆಗ ಮಾತ್ರ ನಾವು ಆಡುವ ಮಾತುಗಳಿಗೆ ಅರ್ಥ ಬರುತ್ತದೆ. 'ನೀನು ಶಾಲೆಯಿಂದ' ನಾನು ಬಸ್ಸಿನಲ್ಲಿ' –ಈ ರೀತಿಯ ಪದಗಳ ಗುಂಪು ಯಾವುದೇ ಅರ್ಥ ಕೊಡುವುದಿಲ್ಲ. ಅಂದರೆ ನಿರ್ದಿಷ್ಟ ಸರಣಿಯಲ್ಲಿ ಜೋಡಿಸಿದ ಪದಗಳ ಗುಂಪು ಮಾತ್ರ ಅರ್ಥ ಕೊಡುತ್ತದೆ. ಈ ರೀತಿ ನಿರ್ದಿಷ್ಟ ಅರ್ಥಕೊಡುವಂತೆ ಒಂದು ಸರಣಿಯಲ್ಲಿ ಜೋಡಿಸಿದ ಪದಗಳ ಗುಂಪನ್ನು ವಾಕ್ಯ ಎನ್ನುತ್ತೇವೆ. ಈ ವಾಕ್ಯದಲ್ಲಿ ಯಾವ ಯಾವ ರೀತಿಯ ಪದಗಳಿರುತ್ತವೆ ಎಂಬುದನ್ನು ತಿಳಿಯೋಣ. ಕೆಳಗಿನ ವಾಕ್ಯಗಳನ್ನು ಗಮನಿಸಿ

ವೀಣಾ ಆಟ ಆಡಿದಳು.

ರೋನಾಲ್ಡ್ ಊಟ ಮಾಡಿದನು.

ಈ ವಾಕ್ಯಗಳಲ್ಲಿ 'ಆಡಿದಳು' ಮತ್ತು 'ಮಾಡಿದನು' ಎಂಬ ಪದಗಳು ವೀಣಾ ಮತ್ತು ರೋನಾಲ್ಡ್ ಮಾಡಿದ ಕೆಲಸವನ್ನು ಅಥವಾ ಕ್ರಿಯೆಯನ್ನು ಸೂಚಿಸುತ್ತವೆ. ಹೀಗೆ ಕ್ರಿಯೆಯನ್ನು ಸೂಚಿಸುವ ಪದಗಳನ್ನು 'ಕ್ರಿಯಾಪದಗಳು' ಎನ್ನುತ್ತೇವೆ. ಕ್ರಿಯೆಯನ್ನು ಮಾಡಿದವರನ್ನು 'ಕರ್ತೃ' ಎನ್ನಲಾಗುತ್ತದೆ. ಹಾಗಾಗಿ ಕೆಲಸವನ್ನು ಅಥವಾ ಕ್ರಿಯೆಯನ್ನು ಮಾಡಿದವರನ್ನು ಸೂಚಿಸುವ ಪದಗಳನ್ನು ಕರ್ತೃಪದ ಎನ್ನುತ್ತೇವೆ. ಅವರು ಮಾಡಿದ ಕೆಲಸವನ್ನು ಕುರಿತು ವಿವರ ನೀಡುವ ಪದಗಳಿರುತ್ತವೆ. ಏನು ಆಡಿದಳು? ಏನು ಮಾಡಿದನು? ಹೀಗೆ 'ಏನನ್ನು' ಎಂಬ ಪ್ರಶ್ನೆಗೆ ಉತ್ತರ ಕೊಡುವ ಪದಗಳನ್ನು ಕರ್ಮಪದಗಳೆಂದು ಕರೆಯುತ್ತೇವೆ.

## ಕ್ರಿಯಾಪದದ ವಿಧಗಳು

ಸತೀಶ ಓಡಿದನು, ಮುಕ್ತ ಹಾಡುತ್ತಾಳೆ, ಮಕ್ಕಳು ಓದುವರು.

ಈ ವಾಕ್ಯಗಳನ್ನು ಗಮನಿಸಿ. ಇವುಗಳು ಬೇರೆ ಬೇರೆ ಕ್ರಿಯೆಗಳನ್ನು ಸೂಚಿಸುತ್ತವೆ. ಓಡುವುದು, ಹಾಡುವುದು ಮತ್ತು ಓದುವುದು–ಇವುಗಳೇ ಆ ಕ್ರಿಯೆಗಳು. ಹೀಗೆ ವಾಕ್ಯದಲ್ಲಿ ಕ್ರಿಯೆಯನ್ನು ಸೂಚಿಸುವ ಪದಗಳು ಕ್ರಿಯಾಪದಗಳು.

ಇದೇ ವಾಕ್ಯಗಳನ್ನು ಮತ್ತೊಮ್ಮೆ ಗಮನಿಸಿ. 'ಓಡಿದನು' ಎಂಬುದು ಆಗಿಹೋದ ಕ್ರಿಯೆಯನ್ನು ಸೂಚಿಸುತ್ತದೆ. ಹೀಗೆ ಈಗಾಗಲೇ ನಡೆದುಹೋದ ಕ್ರಿಯೆಯನ್ನು ಸೂಚಿಸುವ ಕ್ರಿಯಾಪದಗಳನ್ನು 'ಭೂತಕಾಲ ಕ್ರಿಯಾಪದ' ಎನ್ನುತ್ತೇವೆ.



ಎರಡನೇ ವಾಕ್ಯವನ್ನು ಗಮನಿಸಿ. 'ಹಾಡುತ್ತಾಳೆ' ಎಂಬ ಪದ ಸದ್ಯದಲ್ಲೇ ಮುಕ್ತ ಹಾಡುವವಳಿದ್ದಾಳೆ ಎಂಬುದನ್ನು ಸೂಚಿಸುತ್ತದೆ. ಅಂದರೆ ಸದ್ಯದಲ್ಲೇ ಆಗುವ ಕ್ರಿಯೆಯನ್ನುಸೂಚಿಸುತ್ತದೆ. ಸದ್ಯದ ಪರಿಸ್ಥಿತಿಯನ್ನು 'ವರ್ತಮಾನ' ಎನ್ನುತ್ತೇವೆ. ಹೀಗಾಗಿ ಸದ್ಯದಲ್ಲೇ ಕ್ರಿಯೆ ನಡೆಯುತ್ತದೆ ಎಂಬುದನ್ನು ಸೂಚಿಸುವ ಕ್ರಿಯಾಪದಗಳನ್ನು 'ವರ್ತಮಾನಕಾಲದ ಕ್ರಿಯಾಪದಗಳು' ಎನ್ನುತ್ತೇವೆ.

ಮೂರನೇ ವಾಕ್ಯವನ್ನು ಗಮನಿಸಿ. 'ಓದುವರು' ಎಂಬುದು ಮುಂದೆ ಯಾವುದೋ ಸಮಯದಲ್ಲಿ ನಡೆಯುವ ಕ್ರಿಯೆಯನ್ನು ಸೂಚಿಸುತ್ತದೆ. ಮುಂದಿನ ಕಾಲವನ್ನು 'ಭವಿಷ್ಯತ್ ಕಾಲ' ಎಂದು ಹೇಳುತ್ತೇವೆ. ಹೀಗೆ ಮುಂದೆ ಆಗುವ ಕ್ರಿಯೆಯನ್ನು ಸೂಚಿಸುವ ಕ್ರಿಯಾಪದಗಳನ್ನು 'ಭವಿಷ್ಯತ್ ಕಾಲದ ಕ್ರಿಯಾಪದ' ಎನ್ನುತ್ತೇವೆ.

## ಅಭ್ಯಾಸ

**ಕೆಳಗಿನ ವಾಕ್ಯಗಳಲ್ಲಿ ಕರ್ಮಪದ, ಕರ್ತೃಪದ ಮತ್ತು ಕ್ರಿಯಾಪದಗಳನ್ನು ಗುರುತಿಸಿ.**

| ಕ್ರ.ಸಂ. | ವಾಕ್ಯಗಳು | ಕರ್ತೃಪದ | ಕರ್ಮಪದ | ಕ್ರಿಯಾಪದ |
|---|---|---|---|---|
| ೧ | ಉಮಾ ಹಾಡನ್ನು ಹಾಡಿದಳು | | | |
| ೨ | ಕೇಶವನು ಕುಂಬಳಕಾಯಿಯನ್ನು ಕೊಯ್ದನು | | | |
| ೩ | ಗಣೇಶ ಗಡಿಗೆಯನ್ನು ಒಡೆದನು | | | |
| ೪ | ಹಸೀನ ಕೊಡೆ ಬಿಡಿಸಿದಳು | | | |
| ೫ | ರಜಿನ ಸಿನಿಮಾ ನೋಡಿದಳು | | | |
| ೬ | ಅಧ್ಯಾಪಕರು ಪಾಠ ಬೋಧಿಸಿದರು. | | | |



**ಕೆಳಗಿನ ವಾಕ್ಯಗಳಲ್ಲಿ ಕ್ರಿಯಾಪದಗಳನ್ನೂ ಕ್ರಿಯಾಪದದ ವಿಧಗಳನ್ನೂ ಸೂಚಿಸಿ.**

| ಕ್ರಮ ಸಂಖ್ಯೆ | ವಾಕ್ಯಗಳು | ಕ್ರಿಯಾಪದ | ಕ್ರಿಯಾಪದದ ವಿಧ (ಕಾಲಕ್ಕನುಗುಣವಾಗಿ) |
|---|---|---|---|
| ೧ | ರೈತರು ಕಾಳುಗಳನ್ನು ಬಿತ್ತಿದರು. | | |
| ೨ | ಅಧ್ಯಾಪಕರು ಸಿನಿಮಾ ತೋರಿಸುತ್ತಾರೆ | | |
| ೩ | ನನ್ನ ಅಕ್ಕ ಭಾವ ಮುಂದಿನ ತಿಂಗಳು ಬರುವರು | | |
| ೪ | ಬೆಳಿಗ್ಗೆ ಕೋಳಿ ಕೂಗುತ್ತದೆ. | | |

**ಚೆನ್ನುಡಿ**

'ಎಲ್ಲರೂ ತಮ್ಮ ತಮ್ಮ ಬುದ್ಧಿಗೆ ತೋಚಿದ್ದನ್ನು, ತಮಗೆ ಉತ್ತಮವೆಂದು ತೋರಿದ ಕ್ರಮದಲ್ಲಿ ಚೆನ್ನಾಗಿಯೇ ಹೇಳುತ್ತಾರೆ. ವಿದ್ಯೆ ಲೋಕದಲ್ಲಿ ಯಾರೋ ಒಬ್ಬರಿಗಾಗಿ ಬಂದುದಲ್ಲ. ಲೋಕವನ್ನು ಮೆಚ್ಚಿಸಲು ಪರಮೇಶ್ವರನಿಗಾದರೂ ಸಾಧ್ಯವೆ? ಆಡುವವರು ತಮ್ಮ ಹಮ್ಮಿಗಾಗಿ ಆಡುತ್ತಾರೆ. ಕೆಟ್ಟ ಮಾತಿನ ಭಯದಿಂದ ಕೆಟ್ಟವನ ಮೇಲೆ ಏಕೆ ಅನುಮಾನ ಪಡಬೇಕು?' (ಹೊಸಗನ್ನಡ ಭಾವಾನುವಾದ)

–ಚೌಂಡರಸ (ಹದಿಮೂರನೆಯ ಶತಮಾನದಲ್ಲಿದ್ದ ಕವಿ ಈತನ ಪ್ರಮುಖ ಕೃತಿ'ನಳಚಂಪು')

# ಅಭಿಮನ್ಯು ಪರಾಕ್ರಮ

–ಕುಮಾರವ್ಯಾಸ

**ಪ್ರವೇಶ:** ನಿಶಾಂತನು ತರಗತಿಯಲ್ಲಿ ಅಧ್ಯಾಪಕರನ್ನು ಕೇಳಿದ "ನಮ್ಮ ಅಮ್ಮನಿಗೆ ಇವತ್ತು ನಾನು ಮನಸ್ಸು ಮಾಡಿದ್ರೆ ೧೦೦ ಕೆ.ಜಿ. ಎತ್ತುತ್ತೇನೆ. ಅಂದೆ, ಅದಕ್ಕೆ ಅವರು ನಿಂದು ಉತ್ತರನ ಪೌರುಷ ಅಂದರು; ಹಾಗೆಂದರೇನು? ಎಂದು ಕೇಳಿದ. ಅಧ್ಯಾಪಕರು"ಉತ್ತರನ ಪೌರುಷ ಒಲೆಮುಂದೆ, ನಿನ್ನ ಪೌರುಷ ಎಲೆಮುಂದೆ" ಅಂತ ಗಾದೆ ಇದೆ. ಮಹಾಭಾರತದಲ್ಲಿ ಉತ್ತರಕುಮಾರ ಅಂತ ಒಬ್ಬ ಇದ್ದ . ತನ್ನ ರಾಜ್ಯದ ಹಸುಗಳನ್ನು ವೈರಿ ಸೈನಿಕರು ಮುತ್ತಿದ್ದಾರೆ ಎಂದು ತಿಳಿದಾಗ ಮನೆ ಒಳಗೆ ಕುಳಿತು, ನಾನು ಯುದ್ಧ ಮಾಡಿದರೆ ಹೇಗೆ ಗೆಲ್ಲುತ್ತೇನೆ ಎಂದೆಲ್ಲ ಜಂಭ ಕೊಚ್ಚಿಕೊಂಡ, ಆದರೆ ಯುದ್ಧರಂಗಕ್ಕೆ ಬಂದಾಗ ಅಪಾರ ಸೈನ್ಯ ನೋಡಿ ಹೆದರಿ ಓಡಿದ. ಅದಕ್ಕೆ ಯಾರಾದ್ರೂ ಕೊಚ್ಚಿಕೊಂಡರೆ ಉತ್ತರನ ಪೌರುಷ ಎನ್ನುತ್ತಾರೆ" ಎಂದು ಹೇಳಿದರು. ಅದಕ್ಕೆ ಸಿದ್ದಿಕ್ "ಟೀಚರ್, ಮಹಾಭಾರತದಲ್ಲಿ ಸಾಹಸಿ ಯುವಕರು ಇರಲಿಲ್ವೇ?"ಎಂದು ಕೇಳಿದ. ಟೀಚರ್" ಯಾಕಿರಲಿಲ್ಲ, ಅಭಿಮನ್ಯು ಕುಮಾರ ಅಂತ ಇದ್ದ. ಅವನು ಸುಭದ್ರೆ ಮತ್ತು ಅರ್ಜುನರ ಮಗ. ಮಹಾ ಸಾಹಸಿ. ಮಹಾಭಾರತ ಯುದ್ಧದಲ್ಲಿ ದ್ರೋಣರು ಪದ್ಮವ್ಯೂಹ ರಚಿಸಿದಾಗ ಅದನ್ನು ಒಡೆಯಲು ತಾನೇ ಹೋಗುತ್ತೇನೆ ಅಂದ, ಹಾಗೆಯೇ ಹೋದ. ಆದರೆ ದುರದೃಷ್ಟ ಅವನಿಗೆ ಪೂರ್ಣವಾಗಿ ಪದ್ಮವ್ಯೂಹಒಡೆಯಲು ಆಗಲಿಲ್ಲ. ಆದರೆ ಅವನ ಧೈರ್ಯ, ಸಾಹಸ ಮೆಚ್ಚುವಂಥದ್ದು. ಹೇಳಿದ್ದನ್ನು ಸಾಧಿಸಲು ಅವನು ಮಾಡಿದ ಪ್ರಯತ್ನವನ್ನು ಮೆಚ್ಚಲೇಬೇಕು" ಅಂದರು. ಸಿಂಧು "ಅದನ್ನು ಸ್ವಲ್ಪ ವಿವರಿಸಿ ಟೀಚರ್" ಅಂದಳು. ಟೀಚರ್ ಎಲ್ಲ ವಿವರಿಸಲು ಸಮಯ ಕಡಿಮೆಯಿದೆ. ಕುಮಾರವ್ಯಾಸ ಎಂಬ ಕವಿ ಕನ್ನಡದಲ್ಲಿ ಮಹಾಭಾರತವನ್ನು 'ಕರ್ಣಾಟ ಭಾರತ ಕಥಾಮಂಜರಿ'ಎಂಬ ಹೆಸರಿನಲ್ಲಿ ರಚಿಸಿದ್ದಾನೆ. ಅದರಲ್ಲಿ ಅಭಿಮನ್ಯುವಿನ ಮಾತುಗಳು ಬರುತ್ತವೆ. ಆ ಭಾಗ ಓದೋಣ' ಎಂದರು.



ಜನಪನಂಘ್ರಿಗೆ ಮಣಿದು ಕೈ ಮುಗಿ
ದೆನಗೆ ಬೆಸಸೈ ಬೊಪ್ಪ ತಾ ಬ
ಲ್ಲೆನು ಮಹಾಹವದೊಳಗೆ ಪದ್ಮವ್ಯೂಹ ಭೇದನವ
ಅನುವರವ ಗೆಲುವೆನು ಕೃತಾಂತನ
ಮನೆಗೆ ಕಳುಹುವೆನಹಿತರನು ನೀ
ನಿನಿತು ಚಿಂತಿಸಲೇಕೆ ಕಾಳಗಕೆನ್ನ ಕಳುಹೆಂದ ॥ ೧ ॥

ಹಸುಳೆಯದಟಿನ ನುಡಿಯಕೇಳಿದು
ನಸುನಗುತ ಧರ್ಮಜನು ಘನ ಪೌ
ರುಷವು ನಿನಗುಂಟೆಂದು ಕಂದನ ತೆಗೆದು ಬಿಗಿಯಪ್ಪಿ
ಶಿಶುವು ನೀನೆಲೆ ಮಗನೆ ಕಾದುವ
ರಸಮಬಲರು ಕಣಾ ಮಹಾರಥ
ರೆಸುಗೆಯನು ನೀನೆಂತು ಸೈರಿಸಲಾಪೆ ಹೇಳೆಂದ ॥ ೨ ॥

ಬಿಡು ಮರೀಚಿಯ ತೊರೆಗೆ ಹರುಗೋ
ಲಿಡುವರುಂಟೇ ಲೆಪ್ಪದುರುಗನ
ಹಿಡಿಯಲೇತಕೆ ಗರುಡ ಮಂತ್ರವು ಚಪಲನೆನ್ನದಿರು
ಕೊಡನ ಮಗನ ಕುಮಂತ್ರದೊಡ್ಡಿನ
ಕಡಿತಕಾನಂಜುವೆನೆ ವೆಗ್ಗಳ
ನುಡಿಯಲಮ್ಮೆನು ತನ್ನನೀಗಳೆ ಬಿಟ್ಟು ನೋಡೆಂದ ॥ ೩ ॥





ಕಂದ ವೈರಿವ್ಯೂಹವಸದಳ
ವೆಂದೆನಿಪುದದರೊಳಗೆ ಕೃಪ ಗುರು
ನಂದನರು ರಾಧೇಯ ಭೂರಿಶ್ರವ ಜಯದ್ರಥರು
ಇಂದುಧರನಡಹಾಯ್ದರೊಮ್ಮೆಗೆ
ಹಿಂದುಮುಂದೆನಿಸುವರು ನೀಗೆಲು
ವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ ॥ ೪ ॥

ಗಾಳಿಬೆಮರುವುದುಂಟೆ ವಹ್ನಿ
ಜ್ವಾಲೆ ಹಿಮಕಂಜುವುದೆ ಮಂಜಿನ
ಮೇಲುಗಾಳೆಗವುಂಟೆ ಬಲುಬೇಸಗೆಯ ಬಿಸಿಲೊಳಗೆ
ಬಾಲನಿವನೆನ್ನದಿರು ದುಗುಡವ
ತಾಳಲಾಗದು ಬೊಪ್ಪ ನಿಮ್ಮಡಿ
ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪುಬಲವ ॥ ೫ ॥

ಅರಿಬಲವ ನೀ ಖಂಡಿಗೆಳೆ ಮೋ
ಹರಸಹಿತ ನಾ ಬಹೆನು ನಡೆ ಯೆಂ
ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ ॥ ೬ ॥

## ಮರು ಓದು

೧. (ಅಭಿಮನ್ಯು) ಜನಪನ ಅಂಘ್ರಿಗೆ ಮಣಿದು, ಕೈ ಮುಗಿದು, "ಎನಗೆ ಬೆಸಸೈ ಬೊಪ್ಪ, ತಾ ಬಲ್ಲೆನು ಮಹಾ ಆಹವದ ಒಳಗೆ ಪದ್ಮವ್ಯೂಹ ಭೇದನವ. ಅನುವರವ ಗೆಲುವೆನು, ಕೃತಾಂತನ ಮನೆಗೆ ಕಳುಹುವೆನು ಅಹಿತರನು, ನೀನು ಇನಿತು ಚಿಂತಿಸಲೇಕೆ ಕಾಳಗಕೆ ಎನ್ನ ಕಳುಹು" ಎಂದ.

೨. ಹಸುಳೆಯ ಅದಟಿನ ನುಡಿಯ ಕೇಳಿದು ನಸುನಗುತ ಧರ್ಮಜನು "ಘನ ಪೌರುಷವು ನಿನಗೆ ಉಂಟು" ಎಂದು ಕಂದನ ತೆಗೆದು ಬಿಗಿದು ಅಪ್ಪಿ "ಶಿಶುವು ನೀನೆಲೆ ಮಗನೆ, ಕಾದುವರು ಅಸಮಬಲರು ಕಣಾ, ಮಹಾರಥರ ಎಸುಗೆಯನು ನೀನು ಎಂತು ಸೈರಿಸಲು ಆಪೆ? ಹೇಳು" ಎಂದ.

೩. "ಬಿಡು ಮರೀಚಿಯ ತೊರೆಗೆ ಹರುಗೋಲ ಇಡುವರು ಉಂಟೇ, ಲೆಪ್ಪದ ಉರುಗನ ಹಿಡಿಯಲು ಏತಕೆ ಗರುಡ ಮಂತ್ರವು, ಚಪಲನು ಎನ್ನದಿರು, ಕೊಡನ ಮಗನ ಕುಮಂತ್ರದ ಒಡ್ಡಿನ ಕಡಿತಕೆ ಆನು ಅಂಜುವೆನೆ? ವೆಗ್ಗಳ ನುಡಿಯಲು ಅಮ್ಮನು ತನ್ನನ್ನು ಈಗಳೆ ಬಿಟ್ಟು ನೋಡು ಎಂದ.

೪. "ಕಂದ, ವೈರಿವ್ಯೂಹ ಅಸದಳ ಎಂದು ಎನಿಪುದು. ಅದರೊಳಗೆ ಕೃಪ–ಗುರುನಂದನರು, ರಾಧೇಯ, ಭೂರಿಶ್ರವ, ಜಯದ್ರಥರು ಇಂದುಧರನು ಅಡಹಾಯ್ದರೂ ಒಮ್ಮೆಗೆ ಹಿಂದುಮುಂದು ಎನಿಸುವರು, ನೀನು ಗೆಲುವ ಅಂದವು ಎಂತೈ? ಸಮರವಿದು ಸಾಮಾನ್ಯವಲ್ಲ!" ಎಂದ.

೫. "ಗಾಳಿ ಬೆಮರುವುದು ಉಂಟೆ ? ವಹ್ನಿಜ್ವಾಲೆ ಹಿಮಕೆ ಅಂಜುವುದೆ? ಮಂಜಿನ ಮೇಲುಗಾಳೆಗ ಉಂಟೆ ಬಲುಬೇಸಗೆಯ ಬಿಸಿಲ ಒಳಗೆ ? ಬಾಲನು ಇವನು ಎನ್ನದಿರು , ದುಗುಡವ ತಾಳಲಾಗದು ಬೊಪ್ಪ, ನಿಮ್ಮಡಿ ಆಲಿಗಳಿಗೆ ಔತಣವನು ಇಕ್ಕುವೆನು ಒರಸಿ ರಿಪುಬಲವ!"

೬. "ಅರಿಬಲವ ನೀ ಖಂಡಿಗೆಳೆ, ಮೋಹರಸಹಿತ ನಾ ಬಹೆನು ನಡೆ" ಎಂದು ಅರಸನು ಅಭಿಮನ್ಯುವಿಗೆ ನೇಮವ ಕೊಟ್ಟನು ಆಹವಕೆ.

**ಕ್ಷೇತ್ರ :** ಓದುವುದು, ಬರೆಯುವುದು.

**ಸಾಮರ್ಥ್ಯ : ಛಂದಶಾಸ್ತ್ರದ ಪ್ರಾಸ, ಮಾತ್ರೆ, ಗಣ ಇವುಗಳ ಪರಿಚಯ ಮಾಡಿಕೊಳ್ಳುವುದು. ಲೇಖನ ಚಿಹ್ನೆ ಮತ್ತು ಛಂದೋವಿನ್ಯಾಸಗಳನ್ನು ಅರಿತು ಓದುವುದು.**

**ಆಶಯ :** ಅಭಿಮನ್ಯುವಿನ ಸಾಹಸದ ಮಾತುಗಳನ್ನು ಆತ ಮಂಡಿಸುವ ರೀತಿಯನ್ನು ತಿಳಿಯಬೇಕು. ವೀರನಾದರೂ ನಯವಂತ ಮಾತುಗಳು, ಮಾತುಗಳಲ್ಲಿ ಪರಿಣಾಮಕಾರಿಯಾದ ಉಪಮೆ, ರೂಪಕಗಳ ಬಳಕೆ ಇವುಗಳನ್ನು ಅಭಿಮನ್ಯುವಿನ ಮಾತುಗಳಲ್ಲಿ ಗಮನಿಸಬೇಕು. ಅವನ ಮಾತಿನಲ್ಲಿ ಇರುವ ಆತ್ಮಸ್ಥೈರ್ಯ ಮೆಚ್ಚುವಂಥದ್ದು. ಧೈರ್ಯ ಮನುಷ್ಯನಿಗೆ ಅಗತ್ಯ. ಧೈರ್ಯದಿಂದ ಮುನ್ನುಗ್ಗಲು ಕಲಿಯಬೇಕು. ಮೊದಲು ಯಾವುದೇ ಕೌಶಲವನ್ನು ಚೆನ್ನಾಗಿ ಕಲಿಯಬೇಕು ನಂತರ ಸಾಹಸವನ್ನು ಪ್ರದರ್ಶಿಸಬೇಕು. ಯಾವುದೇ ವಿದ್ಯೆಯನ್ನು ಪೂರ್ಣವಾಗಿ ತಿಳಿಯಲು ಪ್ರಯತ್ನಿಸಬೇಕು.

## ಕವಿ ಪರಿಚಯ



ಕುಮಾರವ್ಯಾಸನ ಮೂಲ ಹೆಸರು ನಾರಣಪ್ಪ. "ಗದುಗಿನ ನಾರಣಪ್ಪ" ಎಂದು ಸಾಮಾನ್ಯವಾಗಿ ಕುಮಾರವ್ಯಾಸನನ್ನು ಕರೆಯಲಾಗುತ್ತದೆ. ಈತನ ಕಾವ್ಯನಾಮ **ಕುಮಾರವ್ಯಾಸ.** ಈತನ ಕಾಲ ಸುಮಾರು ಕ್ರಿ.ಶ. ೧೪೩೦ಎಂದು ನಿಗದಿಪಡಿಸಲಾಗಿದೆ.

ಕುಮಾರವ್ಯಾಸನ ಹುಟ್ಟೂರು ಈಗಿನ ಗದಗ ಜಿಲ್ಲೆಯಲ್ಲಿರುವ ಕೋಳಿವಾಡ ಗ್ರಾಮ. ಕಾವ್ಯರಚನೆಯನ್ನು ಮಾಡಿದ್ದು ಗದುಗಿನ ವೀರನಾರಾಯಣನ ಗುಡಿಯಲ್ಲಿ. ಈಗಲೂ ಸಹ ಆ ಗುಡಿಯಲ್ಲಿರುವ ಒಂದು ಕಂಬಕ್ಕೆ ಕುಮಾರವ್ಯಾಸನ ಕಂಬ ಎಂದು ಕರೆಯಲಾಗುತ್ತದೆ. ಕುಮಾರವ್ಯಾಸ ಈ ಕಂಬದ ಅಡಿಯಲ್ಲೇ ಈ ಕಾವ್ಯವನ್ನು ರಚಿಸಿ ಓದುತ್ತಿದ್ದ ಎಂಬ ಪ್ರತೀತಿ ಇದೆ.

ಕುಮಾರವ್ಯಾಸನ ಪ್ರಸಿದ್ಧ ಕೃತಿ **ಕರ್ಣಾಟ ಭಾರತ ಕಥಾಮಂಜರಿ.** ಇದಕ್ಕೆ ಗದುಗಿನ ಭಾರತ, ಕನ್ನಡ ಭಾರತ, ಕುಮಾರವ್ಯಾಸ ಭಾರತ ಎಂದೂ ಕರೆಯಲಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಮೇರುಕೃತಿಯಾಗಿ ಪರಿಗಣಿತವಾಗಿರುವ ಕನ್ನಡ ಭಾರತ ಹತ್ತು ಪರ್ವಗಳನ್ನು ಒಳಗೊಂಡಿದೆ. ಸಂಪೂರ್ಣ ಕಾವ್ಯ **ಭಾಮಿನಿ ಷಟ್ಪದಿ** ಛಂದಸ್ಸಿನಲ್ಲಿ ರಚಿತವಾಗಿದೆ. ಅವನ ಕಾವ್ಯಪ್ರತಿಭೆ ಪೂರ್ಣಶಕ್ತಿಯಲ್ಲಿ ಹೊರಹೊಮ್ಮುವುದು ಅವನ ರೂಪಕಗಳಲ್ಲಿ. ಇದೇ ಕಾರಣಕ್ಕಾಗಿ ಕುಮಾರವ್ಯಾಸ **ರೂಪಕ ಸಾಮ್ರಾಜ್ಯ ಚಕ್ರವರ್ತಿ** ಎಂಬ ಖ್ಯಾತಿ ಪಡೆದಿದ್ದಾನೆ. ಕುಮಾರವ್ಯಾಸನ ಈ ಪ್ರತಿಭೆಗೆ ಕನ್ನಡಿಯಾಗಿ ರಾಷ್ಟ್ರಕವಿ ಕುವೆಂಪು ಅವರ ಈ ಸಾಲುಗಳನ್ನು ನೋಡಿ.

ಕುಮಾರವ್ಯಾಸನು ಹಾಡಿದನೆಂದರೆ<br>
ಕಲಿಯುಗ ದ್ವಾಪರವಾಗುವುದು<br>
ಭಾರತ ಕಣ್ಣಲಿ ಕುಣಿಯುವುದು ಮೈಯ್ಯಲಿ<br>
ಮಿಂಚಿನ ಹೊಳೆ ತುಳುಕಾಡುವುದು

## ಓದಿ ತಿಳಿಯಿರಿ

೧. ಜನಪ–ರಾಜ (ಇಲ್ಲಿ ಧರ್ಮರಾಯ); ಅಂಘ್ರಿ–ಪಾದ; ಮಣಿ–ನಮಸ್ಕರಿಸು; ಬೆಸಸು–ಅಪ್ಪಣೆಮಾಡು; ಬೊಪ್ಪ–ತಂದೆ, (ಇಲ್ಲಿ ದೊಡ್ಡಪ್ಪ); ಆಹವ–ಯುದ್ಧ; ಭೇದನ–ಮುರಿಯುವುದು; ಅನುವರ–ಯುದ್ಧ; ಕೃತಾಂತ–ಯಮ; ಅಹಿತರು–ಹಿತವಲ್ಲದವರು,ವೈರಿಗಳು; ಕಾಳಗ–ಯುದ್ಧ.

೨. ಹಸುಳೆ–ಮಗು; ಅದಟು–ಪರಾಕ್ರಮ,ಶೌರ್ಯ; ಘನ–ದೊಡ್ಡ; ಶಿಶು–ಮಗು; ಕಾದುವರು–ಯುದ್ಧ ಮಾಡುವವರು; ಅಸಮಬಲ–ಸಮಾನವಲ್ಲದ ಶಕ್ತಿ ಉಳ್ಳವರು; ಎಸುಗೆ–ಬಾಣ ಪ್ರಯೋಗ; ಸೈರಿಸು–ತಡೆದುಕೊಳ್ಳು; ಆಪೆ–ಸಮರ್ಥನಾಗುವೆ.

೩. ತೊರೆ–ನದಿ, ಹೊಳೆ; ಮರೀಚಿ–ಮೃಗಜಲ(ನೀರು ಎಂಬ ಭ್ರಮೆಯ ಸೃಷ್ಟಿ) ಹರುಗೋಲ–ಹರಿಗೋಲು–ನಾವೆ, ದೋಣಿ; ಲೆಪ್ಪ–ವಿಗ್ರಹಗಳನ್ನು ಮಾಡಲು ಬಳಸುವ ಎರಕ; ಉರಗ–ಹಾವು; ಕುಮಂತ್ರ–ಮೋಸದ ಆಲೋಚನೆ; ದಂಡು–ಸೈನ್ಯ; ಅಂಜು–ಹೆದರು; ವೆಗ್ಗಳ–ಅತಿಯಾಗಿ; ಅಮ್ಮೆ–ಸಾಧ್ಯವಿಲ್ಲ.

೪. ವೈರಿ–ಶತ್ರು; ವ್ಯೂಹ–ಸೈನ್ಯವನ್ನು ಒಂದು ವಿಶಿಷ್ಟ ರೀತಿಯಲ್ಲಿ ನಿಲ್ಲಿಸುವ ಕ್ರಮ; ಅಸದ–ಅಸಾಧ್ಯ,ಅತಿಶಯ; ಇಂದುಧರ–ಚಂದ್ರನನ್ನು ಧರಿಸಿರುವವ, ಶಿವ; ಅಡಹಾಯ್ದರೂ–ಮೇಲೆ ಬಿದ್ದು ಬಂದರೂ; ಸಮರ–ಯುದ್ಧ.

೫. ಬೆಮರು–ಬೆವರು; ವಹ್ನಿಜ್ವಾಲೆ–ಬೆಂಕಿಯ ಜ್ವಾಲೆ; ಹಿಮ–ಚಳಿಗಾಲ, ಮಂಜಿನ ಹನಿ; ಅಂಜು–ಹೆದರು; ಮಂಜು–ಇಬ್ಬನಿ, ಮೇಲುಗಾಳೆಗ–ಸ್ಪರ್ಧಾತ್ಮಕವಾದ ಯುದ್ಧ; ದುಗುಡ–ಚಿಂತೆ, ಆತಂಕ; ನಿಮ್ಮಡಿ ಆಲಿ–ನಿಮ್ಮ ಕಣ್ಣುಗಳಿಗೆ; ಔತಣ–ವಿಶೇಷ ಭೋಜನ; ಇಕ್ಕು–ಇಡು,ಬಡಿಸು; ಒರಸಿ–ನಾಶಮಾಡಿ; ರಿಪುಬಲ–ವೈರಿ ಸೈನ್ಯ.

೬. ಅರಿಬಲ–ವೈರಿ ಸೈನ್ಯ; ಖಂಡಿಗೆಳೆ–ನಾಶಪಡಿಸು; ಮೋಹರ–ಸೈನ್ಯ; ನೇಮ–ಅಪ್ಪಣೆ ಆಹವ–ಯುದ್ಧ.



## ಪಾಠಪೂರಕ ಮಾಹಿತಿ

**ಅಭಿಮನ್ಯು** – ಅರ್ಜುನ–ಸುಭದ್ರೆಯರ ಮಗ,ಇವನಿಗೆ ಪದ್ಮವ್ಯೂಹವನ್ನು ಭೇದಿಸಿ ಒಳಗೆ ಹೋಗುವುದು ತಿಳಿದಿತ್ತು. ಅಲ್ಲಿಂದ ಬಿಡಿಸಿಕೊಂಡು ಬರುವುದು ತಿಳಿದಿರಲಿಲ್ಲ. ಆದರೂ ಹೋರಾಟಕ್ಕೆ ಇಳಿಯುತ್ತಾನೆ.

**ಧರ್ಮರಾಯ** – ಪಾಂಡವರಲ್ಲಿ ಹಿರಿಯವ.

**ಪದ್ಮವ್ಯೂಹ** – ಯುದ್ಧದಲ್ಲಿ ಕಮಲದ ಆಕಾರದಲ್ಲಿ ರಚಿಸಿದ ಸೈನ್ಯವ್ಯವಸ್ಥೆ. (ಚಕ್ರವ್ಯೂಹ)

**ಮಹಾರಥರು** – ರಥದಲ್ಲಿದ್ದುಕೊಂಡು ಏಕಾಂಗಿಯಾಗಿ ಹತ್ತುಸಾವಿರ ಸೈನಿಕರೊಡನೆ ಯುದ್ಧ ಮಾಡುವ ಸಾಹಸಿಗಳು.

**ಮರೀಚಿ** – ಬಿಸಿಲು ಕುದುರೆ, ಮೃಗಜಲ, ಬಿಸಿಲಿನ ಸಂದರ್ಭದಲ್ಲಿ ದೂರದಲ್ಲಿ ನೀರು ಇದ್ದಂತೆ ಕಣ್ಣಿಗೆ ಗೋಚರವಾಗುತ್ತದೆ, ಹತ್ತಿರದಲ್ಲಿ ಹೋಗಿ ನೋಡಿದರೆ ನೀರಿರುವುದಿಲ್ಲ. ಅದು ಮರೀಚಿ ಅಥವಾ ಮರೀಚಿಕೆ.

**ಗರುಡ ಮಂತ್ರ** – ಹಾವಿಗೂ ಗರುಡನಿಗೂ ವೈರ ಎಂಬ ನಂಬುಗೆಯಿದೆ, ಹಾವನ್ನು ಹಿಡಿಯಲು ಬಳಸುವ ಮಂತ್ರ.

**ಕೊಡನ ಮಗ** – ದ್ರೋಣ, ಕೊಡದಲ್ಲಿ ಹುಟ್ಟಿದ ಎಂಬುದು ಪ್ರತೀತಿ. ಕೌರವರು ಮತ್ತು ಪಾಂಡವರಿಗೆ ವಿದ್ಯೆ ಹೇಳಿಕೊಟ್ಟ ಗುರು.

**ಕೃಪ** – ಕೃಪಾಚಾರ್ಯ, ಕೌರವರು ಮತ್ತು ಪಾಂಡವರಿಗೆ ಬಿಲ್ಲು ವಿದ್ಯೆ ಹೇಳಿಕೊಟ್ಟ ಗುರು

**ಗುರುನಂದನ** – ದ್ರೋಣನ ಮಗನಾದ ಅಶ್ವತ್ಥಾಮ.

**ರಾಧೇಯ** – ಕರ್ಣ, ರಾಧೆ ಕರ್ಣನ ಸಾಕುತಾಯಿ.

**ಭೂರಿಶ್ರವ** – ಮಹಾಭಾರತದ ಯುದ್ಧದಲ್ಲಿ ದುರ್ಯೋಧನನಿಗೆ ಸೈನ್ಯದ ನೆರವು ನೀಡಿದ್ದಲ್ಲದೆ ಅವನ ಪರವಾಗಿ ಯುದ್ಧವನ್ನು ಮಾಡಿದ ಯಾದವ ವೀರ.

**ಜಯದ್ರಥ** – ದುರ್ಯೋಧನನ ಪರವಾಗಿ ಯುದ್ಧವನ್ನು ಮಾಡಿದವನು. ದುರ್ಯೋಧನನ ತಂಗಿ ದುಶ್ಶಳೆಯ ಪತಿ.



## ಹಿನ್ನೆಲೆ

ಮಹಾಭಾರತದಲ್ಲಿ ಪಾಂಡವರು ಮತ್ತು ಕೌರವರು ರಾಜ್ಯಕ್ಕಾಗಿ ಹೋರಾಟ ಮಾಡಿದ ಕಥೆಯಿದೆ. ಇಬ್ಬರ ನಡುವಿನ ಯುದ್ಧವನ್ನು ಕುರುಕ್ಷೇತ್ರ ಯುದ್ಧ ಎಂದು ಕರೆಯಲಾಗುತ್ತದೆ. ಈ ಕುರುಕ್ಷೇತ್ರ ಯುದ್ಧದಲ್ಲಿ ಕೌರವರ ಕಡೆ ಭೀಷ್ಮ ಮೊದಲ ಸೇನಾಧಿಪತಿಯಾಗಿರುತ್ತಾನೆ. ಅವನ ನಂತರ ದ್ರೋಣ ಸೇನಾಧಿಪತಿಯಾಗುತ್ತಾನೆ. ದ್ರೋಣ ಪಾಂಡವರನ್ನು ಗೆಲ್ಲಲು ಪದ್ಮವ್ಯೂಹವನ್ನು ರಚಿಸುತ್ತಾನೆ. ಈ ವ್ಯೂಹವನ್ನು ಭೇದಿಸಲು ಪಾಂಡವರ ಕಡೆಯಲ್ಲಿ ಕೃಷ್ಣ ಮತ್ತು ಅರ್ಜುನರಿಗೆ ಮಾತ್ರ ತಿಳಿದಿರುತ್ತದೆ. ಆದರೆ ಅವರಿಬ್ಬರೂ ಯುದ್ಧಕ್ಕಾಗಿ ಬಹು ದೂರಕ್ಕೆ ಹೋಗಿರುತ್ತಾರೆ. ಅವರು ಬರುವವರೆಗೆ ಯುದ್ಧವನ್ನು ನಡೆಸುವುದು ಅನಿವಾರ್ಯವಾಗಿರುತ್ತದೆ. ಧರ್ಮರಾಯನಿಗೆ ಚಿಂತೆಯಾಗುತ್ತದೆ. ಕೃಷ್ಣಾರ್ಜುನರನ್ನು ಬಿಟ್ಟರೆ ಅಭಿಮನ್ಯುವಿಗೆ ಪದ್ಮವ್ಯೂಹ ಬೇಧಿಸುವ ವಿದ್ಯೆ ಅರ್ಧ ಮಾತ್ರ ಗೊತ್ತಿರುತ್ತದೆ. ಅವನಿಗೆ ವ್ಯೂಹವನ್ನು ಭೇದಿಸುತ್ತಾ ಒಳಗೆ ಹೋಗುವುದು ಗೊತ್ತು. ಆದರೆ ಅದರಿಂದ ಬಿಡಿಸಿಕೊಂಡು ಹೊರಬರುವುದು ತಿಳಿದಿಲ್ಲ. ಇಂಥ ಸಂದರ್ಭದಲ್ಲಿ ಅಭಿಮನ್ಯು ದೊಡ್ಡಪ್ಪನಾದ ಧರ್ಮರಾಯನನ್ನು ಭೇಟಿಯಾಗುತ್ತಾನೆ.

## ಅಭ್ಯಾಸ

**ಅ. ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.**

೧. ಧರ್ಮರಾಯನಿಗೆ ನಮಸ್ಕರಿಸಿದ ಅಭಿಮನ್ಯು ಹೇಳುವುದೇನು?

೨. ಅಭಿಮನ್ಯುವಿನ ಮಾತನ್ನು ಕೇಳಿ ಧರ್ಮರಾಯ ಏನು ಹೇಳುತ್ತಾನೆ ?

೩. ಧರ್ಮರಾಯನ ಮಾತಿಗೆ ಅಭಿಮನ್ಯು ಕೊಡುವ ಉತ್ತರವೇನು?

**ಆ. ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಲೆಪ್ಪದುರುಗನ ಹಿಡಿಯಲೇತಕೆ ಗರುಡಮಂತ್ರವು-ಎಂದರೇನು?

೨. ನಿಮ್ಮ ಆಲಿಗಳಿಗೆ ಏನು ಇಕ್ಕುವೆ ಎಂದು ಅಭಿಮನ್ಯು ಹೇಳುತ್ತಾನೆ ?

೩. ವೈರಿವ್ಯೂಹದೊಳಗೆ ಇರುವ ವೀರರು ಯಾರು?

**ಇ. ಕೆಳಗಿನ ವಾಕ್ಯಗಳನ್ನು ಯಾರು, ಯಾರಿಗೆ ಹೇಳಿದರು ತಿಳಿಸಿ.**

೧. ಶಿಶುವು ನೀನೆಲೆ ಮಗನೆ ಕಾದುವರಸಮಬಲರು ಕಣಾ!

೨. ಕೊಡನ ಮಗನ ಕುಮಂತ್ರದೊಡ್ಡಿನ ಕಡಿತಕಾನಂಜುವೆನೆ?

೩. ನೀಗೆಲುವಂದವೆಂತೈ ಸಮರವಿದು ಸಾಮಾನ್ಯವಲ್ಲೆಂದ.

೪. ಬಾಲನಿವನೆನ್ನದಿರು ದುಗುಡವ ತಾಳಲಾಗದು ಬೊಪ್ಪ.

**ಈ. 'ಅ' ಪಟ್ಟಿಯಲ್ಲಿನ ಪದಗಳಿಗೆ 'ಆ'ಪಟ್ಟಿಯಲ್ಲಿ ಅರ್ಥ ನೀಡಲಾಗಿದೆ. ಪಟ್ಟಿಗಳ ಪದಗಳನ್ನು ಹೊಂದಿಸಿ ಬರೆಯಿರಿ.**

| | 'ಅ' ಪಟ್ಟಿ | 'ಆ' ಪಟ್ಟಿ |
|---|---|---|
| ೧. | ಅದಟು | ಅಪ್ಪಣೆ |
| ೨. | ಸೈರಿಸಲಾಪೆ | ನಾಶಮಾಡು |
| ೩. | ಅಮ್ಮೆನು | ಪರಾಕ್ರಮ |
| ೪. | ಅಸದಳ | ಸಾಧ್ಯವಾಗುವುದಿಲ್ಲ |
| ೫. | ಖಂಡಿಗೆಳೆ | ಅಸಾಧ್ಯ |
| ೬. | ನೇಮ | ತಡೆದುಕೊಳ್ಳಲು ಸಾಧ್ಯ |

ಉ. ಈ ವಾಕ್ಯವನ್ನು ಹೊಸಗನ್ನಡಕ್ಕೆ ಪರಿವರ್ತಿಸಿ, ಭಾಷೆಯಲ್ಲಾದ ಬದಲಾವಣೆಗಳನ್ನು ಗುರುತಿಸಿ

(ಅಭಿಮನ್ಯು) ಜನಪನ ಅಂಘ್ರಿಗೆ ಮಣಿದು, ಕೈ ಮುಗಿದು, "ಎನಗೆ ಬೆಸಸೈ ಬೊಪ್ಪ, ಮಹಾ ಆಹವದ ಒಳಗೆ ಪದ್ಮವ್ಯೂಹ ಭೇದನವ ತಾ ಬಲ್ಲೆನು. ಅನುವರವ ಗೆಲುವೆನು, ಅಹಿತರನು ಕೃತಾಂತನ ಮನೆಗೆ ಕಳುಹುವೆನು, ನೀನ್ ಇನಿತು ಚಿಂತಿಸಲೇಕೆ ಕಾಳಗಕೆ ಎನ್ನ ಕಳುಹು" ಎಂದ.

## ಚಟುವಟಿಕೆ

ಪಠ್ಯದಲ್ಲಿರುವ ಈ ಸಾಲುಗಳನ್ನು ಓದಿ-ಅರ್ಥಮಾಡಿಕೊಳ್ಳಿ.

೧. ವಿಷಯವನ್ನು ಮನಸ್ಸಿಗೆ ನಾಟುವಂತೆ ಮಾಡಲು ಅದೇ ರೀತಿಯ ಮತ್ತೊಂದು ವಿಷಯದ ಮೂಲಕ ಹೇಳುವುದನ್ನು ರೂಪಕ ಎನ್ನುತ್ತಾರೆ. ಅಭಿಮನ್ಯು ಧರ್ಮರಾಯನಿಗೆ ತನ್ನ ಧೈರ್ಯ ಪರಾಕ್ರಮ ಸಾಹಸಗಳನ್ನು ತಿಳಿಸಲು ಬಳಸುವ ರೂಪಕಗಳನ್ನು ಕೆಳಗೆ ನೀಡಲಾಗಿದೆ. ಇವುಗಳನ್ನು ಅರ್ಥಮಾಡಿಕೊಂಡು ವಿವರಿಸಿರಿ.

೧. ಮರೀಚಿಯ ತೊರೆಗೆ ಹರುಗೋಲಿಡುವರುಂಟೇ

೨. ಲೆಪ್ಪದುರುಗನ ಹಿಡಿಯಲೇತಕೆ ಗರುಡಮಂತ್ರವು

೩. ಗಾಳಿಬೆಮರುವುದುಂಟೆ

೪. ವಹ್ನಿಜ್ವಾಲೆ ಹಿಮಕಂಜುವುದೆ

೫. ಮಂಜಿನ ಮೇಲುಗಾಳೆಗವುಂಟೆ ಬಲುಬೇಸಗೆಯ ಬಿಸಿಲೊಳಗೆ

೨ ಕೆಳಗೆ ನೀಡಿರುವ ಪದಗಳು ಇಂದಿನ ಕನ್ನಡದಲ್ಲಿ ಬಳಕೆಯಲ್ಲಿಲ್ಲ. ೧೫-೧೬ನೆಯ ಶತಮಾನದಲ್ಲಿ ಬಳಕೆಯಲ್ಲಿದ್ದವು. ಇಂಥ ಕನ್ನಡವನ್ನು ಸೇರಿದಂತೆ ಇರುವ ಕನ್ನಡ ಭಾಷೆಯನ್ನು ನಡುಗನ್ನಡ ಭಾಷೆ ಎಂದು ಕರೆಯುತ್ತೇವೆ.

ಬೆಸಸೈ-ಹೇಳಿ,ಅಪ್ಪಣೆಮಾಡಿ; ಅದಟು-ಪರಾಕ್ರಮ, ಶೌರ್ಯ; ಕೇಳಿದು-ಕೇಳಿ; ಸೈರಿಸಲಾಪೆ-ತಡೆದುಕೊಳ್ಳಲು ಸಾಧ್ಯ; ಅಮ್ಮೆನು-ಸಾಧ್ಯವಾಗುವುದಿಲ್ಲ; ಅಸದಳ-ಅಸಾಧ್ಯ; ಅಡಹಾಯ್ದು-ಮೇಲೆತ್ತಿ ಬಂದರೂ; ಹಿಂದುಮುಂದು-ತಬ್ಬಿಬ್ಬಾಗು; ಎಂತೈ-ಹೇಗೆ; ನಿಮ್ಮಡಿ-ನಿಮ್ಮಲ್ಲಿ; ಖಂಡಿಗೆಳೆ-ನಾಶಮಾಡು; ನೇಮವ-ಅಪ್ಪಣೆಯನ್ನು.

೩. ಮಹಾಭಾರತದಲ್ಲಿ ಬರುವ ವಿವಿಧ ಪುರಾಣ ಪಾತ್ರಗಳ ಹೆಸರುಗಳನ್ನು ಪಟ್ಟಿ ಮಾಡಿ ಸ್ನೇಹಿತರೊಂದಿಗೆ ಹಂಚಿಕೊಂಡು ಅಕಾರಾದಿಯಾಗಿ ಪಟ್ಟಿ ಮಾಡಿ.

# ಛಂದಸ್ಸು

ಕಾವ್ಯ,ಕವನ, ಕವಿತೆ ಎಂದು ಓದುತ್ತೇವಲ್ಲ ಇದು ತನ್ನ ಸ್ವರೂಪದಲ್ಲಿ ಹೇಗಿರುತ್ತದೆ ಎಂಬುದನ್ನು ತಿಳಿಸುವುದು ಛಂದಸ್ಸು. ಈ ಛಂದಸ್ಸಿನಲ್ಲಿ ಹಲವು ವಿಚಾರಗಳಿವೆ. ನಾವಿಲ್ಲಿ ಮಾತ್ರಾಛಂದಸ್ಸಿನ ಬಗ್ಗೆ ಮಾತ್ರ ತಿಳಿಯುತ್ತೇವೆ.

ಈ ಸಾಲುಗಳನ್ನು ಚಪ್ಪಾಳೆ ತಟ್ಟಿಕೊಂಡು ಗಟ್ಟಿಯಾಗಿ ಓದಿ :

**ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ**
**ಜಗ್ಗದೆಯೆ ಕುಗ್ಗದೆಯೆ ಹಿಗ್ಗಿ ನಡೆ ಮುಂದೆ**

**ಕೋಟು ಗೀಟು ತೊಟ್ಟುಕೊಂಡು**
**ಹೇಟು ಬೂಟು ಹಾಕಿಕೊಂಡು**
**ಬೂಟಿನಿಂದ ಹೊರಟ ತಮ್ಮ**
**ಡಬ್ ಡಬ್ ಡಬ್**



ಇದನ್ನು ಹೇಳುವಾಗ ಕಿವಿಗೆ ಒಂದು ಕುಣಿತದ ಸ್ಥಿತಿ ಸಿಗುತ್ತದೆ ಅಲ್ಲವೇ? ಇದೇ ಲಯ. ಇದು ಹೇಗೆ ಬಂತು? ಕೆಲವು ಅಕ್ಷರಗಳು ಚಿಕ್ಕವು, ಕೆಲವು ದೊಡ್ಡವು, ಕೆಲವಕ್ಕೆ ಒತ್ತಕ್ಷರವಿದೆ. ಈ ಅಕ್ಷರಗಳನ್ನು ಓದುವಾಗ ಅವು ತೆಗೆದುಕೊಳ್ಳುವ ಸಮಯದಲ್ಲಿ ವ್ಯತ್ಯಾಸವಿದೆ.

ನಡೆ ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ಮುಂದೆ ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ವ್ಯತ್ಯಾಸವಿದೆ, ನುಗ್ಗಿ,ಹಿಗ್ಗಿ ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ಕೋಟು, ಗೀಟು, ಬೂಟು ಎಂಬ ಪದ ತೆಗೆದುಕೊಳ್ಳುವ ಸಮಯಕ್ಕೂ ವ್ಯತ್ಯಾಸವಿದೆ. ಹೀಗೆ ನಿರ್ದಿಷ್ಟ ಸಮಯ ತೆಗೆದುಕೊಳ್ಳುವ ಪದಗಳನ್ನು ಒಂದು ಕ್ರಮದಲ್ಲಿ ಜೋಡಿಸಲಾಗಿದೆ. ಈ ಜೋಡಣೆ ನೀಡುವ ವ್ಯವಸ್ಥೆಯೇ ಲಯ.

ಈಗ ಕೆಳಗೆ ನೀಡಿರುವ ಅಕ್ಷರಗಳನ್ನು ನಿಲ್ಲಿಸದೇ ಜೋರಾಗಿ ಹೇಳಿ ನೋಡಿ :

**ಅ ಇ ಉ ಋ ಎ ಒ**
**ಕ ಲಿ ಕು ರು ಗೆ ಮೊ**

ಇವುಗಳನ್ನು ಹೇಳಲು ಒಂದು ಚಿಟಿಕೆಯಷ್ಟು ಕಾಲ ಸಾಕಾಗುತ್ತದೆ. ಛಂದಸ್ಸಿನ ಭಾಷೆಯಲ್ಲಿ ಇದನ್ನು "ಲಘು" ಎಂದು ಹೇಳಲಾಗುತ್ತಿದೆ. ಲಘುವನ್ನು ಗುರುತಿಸಲು 'U' ಎಂಬ ಚಿಹ್ನೆ ಬಳಸಲಾಗುತ್ತದೆ. ಈ ಚಿಹ್ನೆಯನ್ನು ಬಳಸಿ ಅಕ್ಷರಗಳನ್ನು ಬರೆಯುವ ರೀತಿಯನ್ನು ಗಮನಿಸಿ:

U U U U U U
**ಅ ಇ ಉ ಋ ಎ ಒ**
U U U U U U
**ಕ ಲಿ ಕು ರು ಗೆ ಮೊ**

ಈಗ ಕೆಳಗೆ ನೀಡಿರುವ ಅಕ್ಷರಗಳನ್ನು ನಿಲ್ಲಿಸದೇ ಜೋರಾಗಿ ಹೇಳಿ ನೋಡಿ :

**ಆ ಈ ಊ ಏ ಓ**

**ನಾ ಯೀ ಗೂ ಗೇ ಲೋ**

ಇವುಗಳನ್ನು ಹೇಳಲು ಹಿಂದಿನ ಎರಡರಷ್ಟು ಕಾಲ (ಎರಡು ಚಿಟಿಕೆಯಷ್ಟು ಕಾಲ) ಬೇಕಾಗುತ್ತದೆ. ಛಂದಸ್ಸಿನ ಭಾಷೆಯಲ್ಲಿ ಇದನ್ನು **'ಗುರು'** ಎಂದು ಹೇಳಲಾಗುತ್ತಿದೆ. ಗುರುವನ್ನು ಗುರುತಿಸಲು '–' ಎಂಬ ಚಿಹ್ನೆ ಬಳಸಲಾಗುತ್ತದೆ. ಈ ಚಿಹ್ನೆಯನ್ನು ಬಳಸಿ ಅಕ್ಷರಗಳನ್ನು ಬರೆಯುವ ರೀತಿಯನ್ನು ಗಮನಿಸಿ:

– – – – –

**ಆ ಈ ಊ ಏ ಓ**

– – – – –

**ನಾ ಯೀ ಗೂ ಗೇ ಲೋ**

ಮುಂದೆ ನೀಡಿರುವ ಅಕ್ಷರಗಳನ್ನು ಪ್ರತಿ ಪದಕ್ಕೂ ಒಂದು ಕ್ಷಣ ನಿಲುಗಡೆ ನೀಡಿ ಜೋರಾಗಿ ಹೇಳಿ ಓದಿ :

**ಕಗ್ಗ, ಚಿಕ್ಕ, ಅಜ್ಜ, ಅಮ್ಮ, ಅಯ್ಯ, ಸಣ್ಣ, ದೊಡ್ಡ, ಬಚ್ಚಿ ಬೆಟ್ಟ, ಕತ್ತೆ, ಬೊಪ್ಪ, ಮುದ್ದ, ಹಬ್ಬ**

ನೀವು ಓದುವಾಗ ಇದನ್ನು ಹೀಗೆಯೂ ಓದಿರಬಹುದೆಂಬುದನ್ನು ಗಮನಿಸಿ:

**ಕಗ್ಗ, ಚಿಕ್ಕ, ಅಜ್ಜ, ಅಮ್ಮ, ಅಯ್ಯ, ಸಣ್ಣ, ದೊಡ್ಡ, ಬಚ್ಚಿ,ಬೆಟ್ಟ, ಕತ್ತೆ, ಬೊಪ್ಪ, ಮುದ್ದ, ಹಬ್ಬ.**

ಮೇಲಿನ ಪದಗಳಲ್ಲಿ ಒತ್ತಕ್ಷರದ ಹಿಂದಿನ ಪದ ಎರಡು ಚಿಟಿಕೆಯಷ್ಟು ಕಾಲ ತೆಗೆದುಕೊಳ್ಳುವುದರಿಂದ ಒತ್ತಕ್ಷರದ ಹಿಂದಿನಕ್ಷರ ಗುರು ಒತ್ತಕ್ಷರ ಲಘು

ಮೇಲಿನ ಪದಗಳಿಗೆ ಗುರು ಲಘು ಹಾಕೋಣ

– ∪ | – ∪ | – ∪ | – ∪ | – ∪ | – ∪ | – ∪ | – ∪ |

ಕಗ್ಗ । ಚಿಕ್ಕ । ಅಜ್ಜ । ಅಮ್ಮ। ಅಯ್ಯ । ಸಣ್ಣ । ದೊಡ್ಡ । ಬಚ್ಚಿ ।

– ∪ | – ∪ | –∪ | – ∪ | – ∪ | –∪ | – ∪ | –∪ | –∪ | –∪ | – ∪ |

ಕ ಗ್ಗ । ಚಿ ಕ್ಕ । ಅಜ್ಜ । ಅಮ್ಮ । ಅಯ್ಯ । ಸಣ್ಣ । ದೊಡ್ಡ । ಬಚ್ಚಿ । ಬೆಟ್ಟ । ಕತ್ತೆ । ಬೊಪ್ಪ।

ಅನುಸ್ವಾರ(ಂ) ಬಂದರೆ ಅದರ ಹಿಂದಿನಕ್ಷರ ಗುರುವಾಗುತ್ತದೆ

– ∪ | – ∪ | – ∪ | – ∪ | – ∪ | – ∪ | – ∪ | – ∪ |

ಕಂದ । ಮಂಗ । ಚಂಪ । ಸಂತೆ । ಕುಂತಿ । ಗೋಂದು । ಗಿಂಡಿ । ಉಂಡೆ । ಅಂಚೆ ।

## ಅಭ್ಯಾಸ

ಅ) ಕೆಳಗಿನ ಅಕ್ಷರಗಳಿಗೆ ಗುರು ಲಘು ಹಾಕಿ :
ಕೋ।ಳಿ।ಕೂ।ಗಿ।ತು ಬೆ।ಳ।ಕು।ಹ।ರಿ।ಯಿ।ತು
ಕಾ।ಗೆ।ಕೋ।ತಿ।ಮೊ।ಲ।

ಆ) ಕೆಳಗಿನ ಪದಗಳಿಗೆ ಗುರು ಲಘು ಹಾಕಿ : ಜನಪ।ಮಣಿ । ಬೊಪ್ಪ।ಆಹವ।ಯುದ್ಧ । ಭೇದನ।ಅನುವರ।ಕೃತಾಂತ। ಅಹಿತರು। ಕಾಳಗ

ಇ) ಕೆಳಗಿನ ಪದಗಳಿಗೆ ಗುರು ಲಘು ಹಾಕಿ :
ಸಂಜೆ।ಬಂಟ।ಸಂಘ।ಪಂಪ।ಸಂಪುಟ।ಹುಂಡಿ।ಗಂಗೆ।ಅಂಬಾ।ಇಂಗು

### ಮಾತ್ರಾಗಣ

ಲಘು ಮತ್ತು ಗುರು ಇವುಗಳನ್ನು ಮಾತ್ರೆ ಎಂದೂ ಕರೆಯಲಾಗುತ್ತದೆ. ಲಘು(∪)ವಿಗೆ ಒಂದು ಮಾತ್ರೆಯ ಬೆಲೆಯಾದರೆ ಗುರುವಿಗೆ (–) ಎರಡು ಮಾತ್ರೆಯಷ್ಟು ಬೆಲೆ.

(∪) = ಒಂದು ಮಾತ್ರೆ , (–) =ಎರಡು ಮಾತ್ರೆ, (∪∪) = ಎರಡು ಮಾತ್ರೆ, (∪ –) = ಮೂರು ಮಾತ್ರೆ, (– –) = ನಾಲ್ಕು ಮಾತ್ರೆ, (∪∪∪∪) = ನಾಲ್ಕು ಮಾತ್ರೆ, (– – ∪) = ಐದು ಮಾತ್ರೆ, (∪ – –) = ಐದು ಮಾತ್ರೆ, (– – ∪) (∪∪∪∪∪) = ಐದು ಮಾತ್ರೆ, ಗಣ ಎಂದರೆ ಗುಂಪು. ಒಂದು,ಎರಡು,ಮೂರು,ನಾಲ್ಕು,ಐದು ಮಾತ್ರೆಗಳ ಗುಂಪಿಗೆ ಮಾತ್ರಾಗಣ ಎಂದು ಕರೆಯಲಾಗುತ್ತದೆ. ಅಕ್ಷರಗಳನ್ನು ಮತ್ತು ಪದಗಳನ್ನು ಮಾತ್ರೆಯಲ್ಲಿ ಬೆಲೆಕಟ್ಟಿ ಅದನ್ನು ಗುಂಪು ಗುಂಪಾಗಿ ಮಾಡಿ ಮಾತ್ರಾಗಣದ ಗುಂಪು ಎಂದು ಕರೆಯಲಾಗುತ್ತದೆ.



### ಉದಾಹರಣೆ

∪ ∪ ∪ ∪ ∪
ತ ಕ ತ ಕಿ ಟ = ಒಂದು ಮಾತ್ರೆಯ ಗುಂಪು

∪∪ ∪∪ ∪∪
ತಕ ತಕ ತಕ = ಎರಡು ಮಾತ್ರೆಯ ಗುಂಪು

∪∪∪ | ∪∪∪ | ∪∪∪
ತಕಿಟ | ತಕಿಟ | ತಕಿಟ = ಮೂರು ಮಾತ್ರೆಯ ಗುಂಪು

∪∪ | ∪∪∪ | ∪∪ | ∪∪∪ | ∪∪ | ∪∪∪
ತಕ | ತಕಿಟ | ತಕ | ತಕಿಟ | ತಕ | ತಕಿಟ = ಎರಡು ಮತ್ತು ಮೂರು ಮಾತ್ರೆಯ ಗುಂಪು

∪∪∪ | ∪∪∪∪ | ∪∪∪ | ∪∪∪∪ | ∪∪∪ | ∪∪∪∪
ತಕಿಟ | ತಕತಕ | ತಕಿಟ | ತಕತಕ | ತಕಿಟ | ತಕತಕ = ಮೂರು ಮತ್ತು ನಾಲ್ಕು ಮಾತ್ರೆಯ

**ಗುಂಪು**

ಮೂರು ಮಾತ್ರೆಯ ನಾಲ್ಕು ಗುಂಪು ಇರುವ ಪದ್ಯವನ್ನು ನೋಡಿ

ᴗ ᴗ ᴗ | – ᴗ | ᴗ ᴗ ᴗ | –ᴗ

ರಜೆಯ । ಗೌಜಿ । ಮುಗಿಯಿ । ತಲ್ಲ

– ᴗ | – ᴗ | ᴗᴗᴗ | –ᴗ

ಗುಲ್ಲು । ಸೊಲ್ಲು । ನಿಲಿಸಿ । ಮೆಲ್ಲ

– ᴗ | –ᴗ | –ᴗ | –ᴗ | –ᴗ | –ᴗ | –

ಮಕ್ಕ । ಳೆಲ್ಲ । ಸಿದ್ಧ । ರಾಗಿ । ಮತ್ತೆ । ಓದಿ । ಗೆ

ನಾಲ್ಕು ಮಾತ್ರೆಯ ಎರಡು ಗುಂಪು ಇರುವ ಪದ್ಯವನ್ನು ನೋಡಿ :

–ᴗ ᴗ | ᴗ ᴗ ᴗ ᴗ

ಬೇಸಿಗೆ । ರಜೆಯಲಿ

– ᴗ ᴗ | –ᴗ ᴗ

ಅಜ್ಜಿಯ । ಊರಿಗೆ

– ᴗ ᴗ | – ᴗ ᴗ | –

ಹೋಗುವು । ದೆಂಥಮ । ಜಾ



**ಷಟ್ಪದಿ**

ಷಟ್ ಎಂದರೆ ಆರು ಪದಿ ಎಂದರೆ ಪಾದದಿಂದ ಕೂಡಿದ್ದು. ಆರು ಪಾದ ಅಥವಾ ಸಾಲುಗಳಿಂದ ಕೂಡಿದ ಪದ್ಯರೂಪ ಷಟ್ಪದಿ. ಆರು ರೀತಿಯ ಷಟ್ಪದಿಗಳಿವೆ. ಅವುಗಳನ್ನು ಶರ,ಕುಸುಮ,ಭೋಗ, ಭಾಮಿನಿ, ಪರಿವರ್ಧಿನಿ ವಾರ್ಧಕ ಎಂದು ಕರೆಯಲಾಗುತ್ತದೆ. ಮಾತ್ರಾಗಣಗಳ ಆಧಾರದ ಮೇಲೆ ಷಟ್ಪದಿಗಳನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ.

–ᴗ ᴗ | – ᴗ ᴗ

೧. **ಬಾಳೆಯ । ತೋಟದ**

–ᴗᴗ | – ᴗ ᴗ

೨. **ಪಕ್ಕದ । ಕಾಡೊಳು**

–ᴗ ᴗ | –ᴗᴗ | – ᴗᴗ | –

೩. **ವಾಸಿಸು । ತಿದ್ದವು । ಮಂಗಗ । ಳು**

– ᴗ ᴗ | –ᴗᴗ

೪. **ಮಂಗಗ । ಳೆಲ್ಲವು**

–ᴗᴗ | – ᴗᴗ

೫. **ಒಟ್ಟಿಗೆ । ಸೇರುತ**

– ᴗ ᴗ | – ᴗ ᴗ | – ᴗ ᴗ | –

೬. **ಒಂದುಪ । ವಾಸವ । ಮಾಡಿದ । ವು**

ಮೇಲಿನ ಪದ್ಯದಲ್ಲಿ ನಾಲ್ಕು ಮಾತ್ರೆಯ ಎರಡು ಗುಂಪು ೧,೨,೪ ಮತ್ತು ೫ನೆಯ ಸಾಲಿನಲ್ಲೂ ನಾಲ್ಕು ಮಾತ್ರೆಯ ಮೂರು ಗುಂಪು ೩ ಮತ್ತು ೬ನೆಯ ಸಾಲಿನಲ್ಲೂ ಇವೆ. ೩ ಮತ್ತು ೬ನೆಯ

ಸಾಲಿನ ಕೊನೆಯಲ್ಲಿ ಒಂದು ಅಕ್ಷರ ಮಾತ್ರ ಇದೆ, ಒಂದೇ ಅಕ್ಷರವಾದರೂ ಅದಕ್ಕೆ ಎರಡು ಮಾತ್ರೆಯ ಕಾಲದ ಉಚ್ಚಾರಣೆಯಿದೆ. ಹಾಗೆ ಅದು ಗುರು, ಪದ್ಯ ಹೀಗಿದ್ದರೆ ಅದು ಶರಷಟ್ಪದಿ. ಇರುವ ಪದ್ಯವನ್ನು ಮುಂದೆ ನೋಡಿ....

ಈ ಪದ್ಯಕ್ಕೆ ಮಾತ್ರೆಗಳನ್ನು (ಪ್ರಸ್ತಾರ) ಹಾಕಿ:

೧. ಹೂವನು/ಮಾರುತ
೨. ಹೂವಾ|ಡಗಿತ್ತಿ
೩. ಹಾಡುತ|ಬರುತಿಹ|ಳು;
೪. ಘಮಘಮ/ಹೂಗಳು
೫. ಬೇಕೇ/ಎನ್ನುತ/
೬. ಹಾಡುತ/ಬರುತಿಹ/ಳು

**ಕುಮಾರವ್ಯಾಸ ಬಳಸಿರುವ ಛಂದಸ್ಸು ಭಾಮಿನೀ ಷಟ್ಪದಿ ಇದರ ಸ್ವರೂಪ ನೋಡಿ :**

UUU | UUUU | UUU | –UU ೩|೪|೩|೪|
೧. **ಹಸುಳೆ|ಯದಟಿನ| ನುಡಿಯ| ಕೇಳಿದು**

UUU | UU– | UUU | UU – ೩|೪|೩|೪|
೨. **ನಸುನ । ಗುತ ಧ । ರ್ಮಜನು । ಘನ ಪೌ**

UUU | UU– | –U | –UU | UUU | UU– | – ೩|೪|೩|೪|೩|೪|೨|
೩. **ರುಷವು |ನಿನಗುಂ| ಟೆಂದು । ಕಂದನ । ತೆಗೆದು । ಬಿಗಿಯ । ಪ್ಪಿ**

UUU | –UU | UUU | –UU ೩|೪|೩|೪|
೪. **ಶಿಶುವು । ನೀನೆಲೆ । ಮಗನೆ । ಕಾದುವ**

UUU | UUUU | – U | –UU ೩|೪|೩|೪|
೫. **ರಸಮ । ಬಲರು ಕ । ಣಾ ಮ| ಹಾರಥ**

UUU | UU– | –U |–UU | –U | – – | – ೩|೪|೩|೪|೩|೪|೨|
೬. **ರೆಸುಗೆ । ಯನು ನೀ । ನೆಂತು |ಸೈರಿಸ । ಲಾಪೆ । ಹೇಳೆಂ । ದ**

ಮೇಲಿನ ಪದ್ಯದಲ್ಲಿ ಮೂರು|ನಾಲ್ಕು|ಮೂರು|ನಾಲ್ಕು|ಮಾತ್ರೆಯ ಗುಂಪು ೧,೨,೪ ಮತ್ತು ೫ನೆಯ ಸಾಲಿನಲ್ಲೂ ಮೂರು|ನಾಲ್ಕು|ಮೂರು|ನಾಲ್ಕು|ಮೂರು|ನಾಲ್ಕು|ಮಾತ್ರೆಯ ಮೂರು ಗುಂಪು ೩ ಮತ್ತು ೬ನೆಯ ಸಾಲಿನಲ್ಲೂ ಇವೆ. ೩ ಮತ್ತು ೬ನೆಯ ಸಾಲಿನ ಕೊನೆಯಲ್ಲಿ ಒಂದು ಅಕ್ಷರ ಮಾತ್ರ ಇದೆ, ಒಂದೇ ಅಕ್ಷರವಾದರೂ ಅದಕ್ಕೆ ಎರಡು ಮಾತ್ರೆಯ ಕಾಲದ ಉಚ್ಚಾರಣೆಯಿದೆ. ಹಾಗೆ ಅದು ಗುರು. ಪದ್ಯ ಹೀಗಿದ್ದರೆ ಅದು ಭಾಮಿನೀ ಷಟ್ಪದಿ. ಇರುವ ಪದ್ಯವನ್ನು ನೋಡಿ ಮತ್ತು ಈ ಪದ್ಯಕ್ಕೆ ಮಾತ್ರೆಗಳನ್ನು (ಪ್ರಸ್ತಾರ) ಹಾಕಿ.

ಬಾಲನಿವನೆನ್ನದಿರು ದುಗುಡವ
ತಾಳಲಾಗದು ಬೊಪ್ಪ ನಿಮ್ಮಡಿ
ಯಾಲಿಗಳಿಗೌತಣವನಿಕ್ಕುವೆನೊರಸಿ ರಿಪುಬಲವ

# ಪದ್ಯಾಧಾರಿತ ಪದಕೋಶ–೨

(ಎರಡನೆಯ ಚತುರ್ಮಾಸದ ಪಾಠಗಳಿಂದ ಆಯ್ದ ಪದಗಳ ಕೋಶ)

## ಅ–ಆ

ಅಂಚು–ತುದಿ, ಕೊನೆ

ಅಂಜು–ಹೆದರು

ಅಂಘ್ರಿ–ಪಾದ

ಅಕ್ಕರೆಯ ಗಿಳಿ–ಪ್ರೀತಿಯ, ರಾಜಗಿಳಿಯಂಥವಳು

ಅಚ್ಚಳಿಯದೆ–ಅಂದಗೆಡದಂತೆ

ಅಡ್ಡಹಾಯ್ದರೂ–ಮೇಲೆ ಬಿದ್ದು ಬಂದರೂ

ಅಣಿಗೊಳಿಸು–ಸಿದ್ಧಗೊಳಿಸು

ಅದಟು–ಪರಾಕ್ರಮ

ಅನುವರ–ಯುದ್ಧ

ಅಭ್ಯುದಯ–ಏಳಿಗೆ

ಅಪಾರ–ಮಿತಿಇಲ್ಲದ

ಅಮ್ಮೆ–ಸಾಧ್ಯವಿಲ್ಲ

ಅರಿ–ತಿಳಿವಳಿಕೆ

ಅರಿಬಲ–ವೈರಿಸೈನ್ಯ

ಅಸದಳ–ಸಾಧ್ಯವಿಲ್ಲ

ಅಸಮಬಲ–ಸಮಾನವಲ್ಲದ ಶಕ್ತಿಯುಳ್ಳವ

ಅಹಿತರು–ಹಿತವಲ್ಲದವರು

ಆಜುಬಾಜು–ಅಕ್ಕಪಕ್ಕ

ಆತ್ಮಸ್ಥೈರ್ಯ–ಅಂತರಂಗದಲ್ಲಿರುವ ಧೈರ್ಯ

ಆಪೆ–ಸಮರ್ಥನಾಗುವೆ

ಆಹವ–ಯುದ್ಧ

## ಇ

ಇಂಗಿತಾಕ್ಷಿ–ಅಭಿಪ್ರಾಯವನ್ನು ನಿರೀಕ್ಷಿಸಿದವಳು

ಇಕ್ಕು–ಇಡು, ಬಡಿಸು

ಇಯತ್ತೆ–ತರಗತಿ

## ಋ

ಋಣ–ಸಾಲ, ಹಂಗು

## ಎ–ಏ–ಐ

ಎರೆ–ಹೊಯ್ಯು

ಎಸುಗೆ–ಬಾಣ ಪ್ರಯೋಗ

ಐಶ್ವರ್ಯ–ಸಂಪತ್ತು

## ಒ–ಓ–ಔ

ಒಂದುಗೂಡೇವು–ಒಂದಾಗಿ ಸೇರುತ್ತೇವೆ

ಒಕ್ಕಲ ಮಕ್ಕಳು–ಬೇಸಾಯಗಾರರ ಮಕ್ಕಳು

ಒಡಲು–ಹೊಟ್ಟೆ, ಶರೀರ

ಒಣಗಿ–ಪಲ್ಯ

ಒತ್ತೆ–ಆಧಾರವಾಗಿ ಇಡುವ ವಸ್ತು, ಅಡವು

ಒಸರು–ಜಿನುಗು

ಒರಸಿ–ನಾಶಮಾಡಿ

ಓತಿಕೇತ–ಗೋಸುಂಬೆ, ಊಸರವಳ್ಳಿ, ಆಗಾಗ್ಗೆ ಬಣ್ಣ ಬದಲಿಸುವ ಜೀವಿ

ಓಸರಿಸು–ಹಿಂದಕ್ಕೆ ತಳ್ಳು

ಔತಣ–ವಿಶೇಷ ಭೋಜನ

## ಕ–ಖ

ಕಂಪು–ಸುಗಂಧ, ಪರಿಮಳ

ಕಡೆ–ನಿವಾರಿಸು

ಕಡು ಇಕ್ಕಟ್ಟು–ಅತಿ ಕಿರಿದಾದ ಜಾಗ

ಕರಣ–ಒಡಲು, ಶರೀರ,ಇಂದ್ರಿಯ

ಕರುನಾಡು–ಕನ್ನಡ ನಾಡು

ಕರ‍್ಯಾಕ–ಕರೆಯಲು

ಕಲಡಿ–ಕೂಡಿಸಿ

ಕಳೆ–ಕಾಂತಿ, ತೇಜಸ್ಸು

ಕಾದುವರು–ಯುದ್ಧಮಾಡುವವರು

ಕಾಲಗರ್ಭ–ಇತಿಹಾಸ

ಕಾಳಗ–ಯುದ್ಧ

ಕುಣಿತ–ನರ್ತನ

ಕುಮಂತ್ರ–ಮೋಸದ ಆಲೋಚನೆ

ಕೃತಾಂತ–ಯಮ

ಕೃತ್ಯ–ಕೆಲಸ

ಕೆಚ್ಚು–ಸಾಹಸ, ಧೈರ್ಯ

ಕೈಂಕರ್ಯ–ಸೇವೆ

ಕೈಲಾಸ–ಶಿವನ ವಾಸಸ್ಥಾನ

ಕೊಚ್ಚೇವು–ಕತ್ತರಿಸುತ್ತೇವೆ

ಕೊಟ್ಟೆ–ಗೂಡು

ಕೊಳೆ–ಹೊಲಸು, ಕೆಸರು

ಕೋಪಫಣಿ–ಕೋಪವೆಂಬ ನಾಗರಹಾವು

ಕ್ವಾಮ–ಬರ

ಕ್ಷೀಣಿಸು–ಚಿಕ್ಕದಾಗು

ಕ್ಷೇತ್ರ ಕಾರ್ಯ–ಆಯಾಜಾಗದ, ಪ್ರದೇಶದ ಇತಿಹಾಸವನ್ನು ಸಂಗ್ರಹಿಸುವುದು

ಖಂಡಿಗೆಳೆ–ನಾಶಪಡಿಸು

## ಗ–ಘ

ಗರುಕೆ–ಹುಲ್ಲು

ಗೇಯುವ–ದುಡಿಯುವ

ಗೋಡು ಗೊಬ್ಬರ–ರೇವೆ ಮಣ್ಣು ಮತ್ತು ಸಗಣಿ, ಎಲೆ, ಕಸಕಡ್ಡಿ ಇವುಗಳ ಮಿಶ್ರಣ

ಗೋಲಿ ಗಜ್ಜುಗ–ಆಟಕ್ಕಾಗಿ ಬಳಸುವ ಗುಂಡಾಗಿರುವ ಗಾಜಿನಿಂದ ಮಾಡಿದ ವಸ್ತು ಮತ್ತು ಮುಳ್ಳಿನ ಪೊದೆಯ ಕಾಯಿ

ಗ್ಯಾನ–ನೆನಪು

ಘನ–ದೊಡ್ಡ

## ಚ–ಛ

ಚರ–ಸೇವಕ

ಚಿಣ್ಣಿ ದಾಂಡು–ಕೋಲಿನಿಂದ ಆಡುವ ಹಳ್ಳಿಯ ಆಟ

ಚಿನುಮಯ–ಶುದ್ಧಜ್ಞಾನದಿಂದ ಕೂಡಿದ

ಚುಕ್ಕೆ–ನಕ್ಷತ್ರ

ಚೇತನ–ಮನಸ್ಸು

ಚೇತರಿಸು–ಎಚ್ಚರಗೊಳ್ಳು, ಗುಣವಾಗು

ಚೌಕಾಭಾರ–ಒಂದು ಬಗೆಯ ಒಳಾಂಗಣ ಆಟ

ಛೇದನ–ಮುರಿಯುವುದು

## ಜ

ಜನಪ–ರಾಜ

## ಡ

ಡಂಭ–ಮೋಸ, ಸೋಗಿನ ನುಡಿ

## ತ

ತ್ರಾಣ–ಶಕ್ತಿ

ತೀಡು–ಬೀಸು

ತೀರ್ಥಕ್ಷೇತ್ರ–ಪವಿತ್ರ ಕ್ಷೇತ್ರ

ತ್ರಿವಿಕ್ರಮ–ಬಲಶಾಲಿ,ವಿಷ್ಣು

ತುಷ್ಟಿ–ತೃಪ್ತಿ

ತೂರು–ಎಸೆ, ನೂಕು

ತೊರೆ–ನದಿ, ಹೊಳೆ

## ದ

ದಂಡು –ಸೈನ್ಯ

ದಡ್ಡಿ– ದೊಡ್ಡಿ, ಹುಲ್ಲಿನ ಗುಡಿಸಲು

ದಾರ್ಢ್ಯ–ಶಕ್ತಿ, ಧೈರ್ಯ

ದರ್ಶಿಸು–ಕಾಣು, ಭೇಟಿಮಾಡು

ದುರ್ದೈವ–ಕೆಟ್ಟ ಅದೃಷ್ಟ

ದೈತ್ಯೇಂದ್ರ–ರಾಕ್ಷಸರ ಒಡೆಯ

## ನ

ನಭೋಮಂಡಲ–ಆಕಾಶ

ನಾಣ್ಣುಡಿ–ನಾಡಿನ ನುಡಿ

ನಾರುವ ಕೇರಿ–ದುರ್ವಾಸನೆ ಹೊಡೆಯುವ ಬೀದಿ

ನಿರ್ಗತಿಕರು–ಅನಾಥರು

ನಿಶ್ಶಬ್ದ–ಮೌನ

ನಿಸರ್ಗ–ಪ್ರಕೃತಿ

ನೀರಾವರಿ–ವ್ಯವಸಾಯಕ್ಕೆ ನೀರು ಒದಗಿಸಲು ಮಾಡಿದ ವ್ಯವಸ್ಥೆ

## ಪ

ಪಟಗಾ–ರುಮಾಲು

ಪತಾಕೆ–ಬಾವುಟ

ಪರಂಪರಾಗತ–ಪರಂಪರೆಯಿಂದ ಬಂದುದು

ಪರಿ–ರೀತಿ

ಪರಿಗಣಿಸು–ಭಾವಿಸು

ಪರಿಷೆ–ಜಾತ್ರೆ

ಪಾಂಡಿತ್ಯ–ವಿದ್ವತ್ತು, ವಿಶೇಷ ಜ್ಞಾನ

ಪಿತ್ರಾರ್ಜಿತ–ತಂದೆಯಿಂದ ಅಥವಾ ಹಿರಿಯರಿಂದ ಬಂದದ್ದು

ಪ್ರೇಕ್ಷಕರು–ನೋಡುವವರು

ಪ್ರೇಕ್ಷಣೀಯ–ನೋಡಲು ಯೋಗ್ಯವಾದ

## ಬ–ಭ

ಬಕ್ರಿ–ರೊಟ್ಟಿ

ಬಟ್ಟಿಯಿಳಿಸು–ಸಾರ ಸಂಗ್ರಹಿಸು

ಬಯಲಾಟ–ಯಕ್ಷಗಾನದ ಒಂದು ಪ್ರಕಾರ, ಜಾನಪದ ನಾಟಕ ಪ್ರಕಾರಗಳಲ್ಲಿ ಒಂದು

ಬರವು–ಬರುವ ವಿಷಯ

ಬರಸೆಳೆ–ಹತ್ತಿರ ಎಳೆ

ಬರಾಕ–ಬರಲಿಕ್ಕೆ

ಬಳಲಿಕೆ–ಆಯಾಸ

ಬಾಗಾಯತ–ತೆಂಗು ಅಡಿಕೆ ಮೊದಲಾದ ಬೆಳೆ ಬೆಳೆಯುವ ನೀರಾವರಿ ಜಮೀನು

ಬಾಣ ಬಿರುಸು–ಒಂದು ಬಗೆಯ ಸಿಡಿಮದ್ದು

ಬಾಧಿತ–ಪೀಡಿತ

ಬಾಹ್ಯ–ಹೊರಗಿನ

ಬಿಟ್ಟುಕುಣಿಮಣೆ–ಚೆನ್ನೆಮಣೆ, ಹಾಳುಗುಳಿಮಣೆ, ಮಣೆಯಲ್ಲಿ ಕುಳಿಮಾಡಿ ಅದರಲ್ಲಿ ಹುಣಿಸೆಬೀಜ ಅಥವಾ ಧಾನ್ಯ ಬಳಸಿ ಆಡುವ ಆಟ

ಬೆಂಡು ಬತ್ತಾಸು–ಒಂದು ಬಗೆಯ ಸಿಹಿತಿಂಡಿ

ಬೆಮರು–ಬೆವರು

ಬೆಸಸು–ಅಪ್ಪಣೆ ಮಾಡು

ಬೆಸೆ–ಕೂಡಿಸು

ಬೆಳ್ನವಿರು–ಬಿಳಿಯ ಕೂದಲು

ಬೊಕ್ಕಸ–ಭಂಡಾರ

ಬೊಪ್ಪ–ತಂದೆ

ಬೋಗುಣಿ–ದೊಡ್ಡ ಪಾತ್ರೆ

ಭ್ರಮೆ–ಇದ್ದದ್ದನ್ನು ಇದ್ದ ಹಾಗೆ ಅಲ್ಲದೆ ಬೇರೆ ರೀತಿ ಗ್ರಹಿಸುವುದು

ಭೀಕರ–ಭಯಾನಕ

ಭೇಟಿ–ಸಂದರ್ಶನ

## ಮ

ಮಧು –ಸಿಹಿ

ಮನದಾಣ್ಮ–ಮನಸ್ಸಿನ ಒಡೆಯ

ಮನ್ನಿಸು–ಕ್ಷಮಿಸು

ಮರಕೋತಿ–ಮರದೊಂದಿಗೆ ಆಡುವ ಒಂದು ಬಗೆಯ ಹೊರಾಂಗಣ ಆಟ

ಮರುಳು–ಹುಚ್ಚು

ಮಹೇಂದ್ರಾರಿ–ಇಂದ್ರನ ವೈರಿ

ಮಾಂಗಲ್ಯಗೀತೆ–ಮಂಗಳಕರವಾದ ಹಾಡು

ಮಾಡುವಂಗಿಲ್ಲೇನು–ಮಾಡುವ ಹಾಗೆ ಇಲ್ಲವೇನು

ಮಾತೆ–ತಾಯಿ

ಮಾನಸ–ಮನಸ್ಸು

ಮಾಳಿಗೆ–ಮಹಡಿ

ಮ್ಯಾಲೆ–ಮೇಲೆ

ಮರುಳು–ಹುಚ್ಚು

ಮುಸುಡು–ಮುಖ

ಮೂರಾಬಟ್ಟೆ–ನಾಶ

ಮೆರೆದು–ಕಾಣಿಸು

ಮೆಲ್ಲುವ–ಸವಿಯುವ

ಮೇಗಡೆ–ಮೇಲುಗಡೆ

ಮೊಳ–ಮೊಳಕೈನಿಂದ ಹಸ್ತದ ತುದಿಯವರೆಗಿನ ಅಳತೆ

ಮೈತ್ರಿ–ವಿಶ್ವಾಸ

ಮೈಮರೆವು–ದೇಹದ ಅರಿವು ಇಲ್ಲದಾಗು

ರ

ರಂಗಕರ್ಮಿ–ನಾಟಕ ಕಲಾವಿದ

ರಸಿಕರು – ರಸವನ್ನು ಅನುಭವಿಸ ಬಲ್ಲವರು, ನಾಟಕ ನೃತ್ಯ ಕಾವ್ಯ ಇವುಗಳಿಂದ ಸಂತೋಷ ಅನುಭವಿಸಬಲ್ಲವರು

ಲ

ಲೆಪ್ಪ–ವಿಗ್ರಹಗಳನ್ನು ಮಾಡಲು ಬಳಸುವ ಎರಕ

ಲೋಕಾಕ್ರಮಣ ವಿಕ್ರಮ–ಲೋಕವನ್ನೆಲ್ಲ ವಶಪಡಿಸಿಕೊಳ್ಳುವ ಸಾಹಸ

ವ

ವಂಚನೆ–ಮೋಸ

ವರ್ಗ–ಗುಂಪು, ಸಮೂಹ

ವರ್ಣನೆ–ಬಣ್ಣನೆ

ವಸಂತಕಾಲ–ಚೈತ್ರ ಮತ್ತು ವೈಶಾಖ ಮಾಸಗಳ ಕಾಲ

ವಾಹಕ–ಸಾಗಿಸುವ

ವಿಹಿತ–ಯೋಗ್ಯ.

ವೇದಾಧ್ಯಯನ–ವೇದಗಳನ್ನು ಮನನ ಮಾಡುವುದು

ವ್ಯಸನ–ಚಾಳಿ, ದುರಭ್ಯಾಸ

ಶ

ಶಂಕೆ–ಸಂದೇಹ

ಶಂಭು–ಈಶ್ವರ

ಶಾನ್ಯಾ–ಜಾಣ

ಶಿಖರ – ದೇವಾಲಯದ ಗೋಪುರ, ಬೆಟ್ಟ ಮರದ ತುದಿ

ಶೇಂಗಾ–ಕಡಲೆಕಾಯಿ

ಸ

ಸಂಕೀರ್ಣ–ಜಟಿಲ, ನಾನಾವಿಧವಾದ

ಸಂಗ–ಸಹವಾಸ

ಸಂಚರಿಸು–ತಿರುಗಾಡು

ಸಂತಿ–ಸಂತೆ

ಸಖ–ಸ್ನೇಹ, ಗೆಳೆತನ

ಸಣ್ಣಾಟ–ಜಾನಪದ ನಾಟಕರೂಪ

ಸದವಕಾಶ–ಒಳ್ಳೆಯ ಅವಕಾಶ

ಸನಕೆ–ಗುದ್ದಲಿ

ಸನ್ನದ್ಧ–ಸಿದ್ಧವಾಗು

ಸಮಜಾಯಿಷಿ–ಒಪ್ಪಂದ

ಸಮುದಾಯ–ಗುಂಪು, ಸಮೂಹ

ಸಮ್ಮುಖ–ಎದುರು

ಸಾಕ್ಷಾತ್ಕಾರ–ಅರಿವು, ಅನುಭವ

ಸಾನ್ನಿಧ್ಯ–ಸಾಮೀಪ್ಯ, ಹತ್ತಿರ ಇರುವಿಕೆ

ಸಿಂಪರಿಸು–ಚಿಮುಕಿಸು, ಲೇಪಿಸು

ಸಿದ್ಧಿಸು–ನೆರವೇರಿಸು

ಸುಗ್ಗಿ–ಧಾನ್ಯಗಳ ಕೊಯ್ಲಿನ ಕಾಲದ ಸಮೃದ್ಧಿ

ಸುಯೋಗ–ಒಳ್ಳೆಯ ಯೋಗ, ಅದೃಷ್ಟ

ಸುಯ್ದು–ನಿಟ್ಟುಸಿರಿಟ್ಟು

ಸೂಸು–ಹರಡು

ಸೊದೆ–ಅಮೃತ

ಸ್ರವಿಸು–ಒಸರು, ಜಿನುಗು

ಸ್ವಚ್ಛ–ನಿರ್ಮಲ

ಸ್ವಚ್ಛಂದ–ಮನಬಂದಂತೆ ನಡೆದುಕೊಳ್ಳುವುದು

**ಹ**

ಹಟ್ಟಿ–ಕೊಟ್ಟಿಗೆ

ಹಚ್ಚು–ಅಂಟಿಸು

ಹಣ್ಣಾದ ಬಾಳಿನ–ವಯಸ್ಸಾದ

ಹರಿಗೋಲು–ನಾವೆ, ದೋಣಿ

ಹರಿವು–ಪ್ರವಹಿಸು

ಹಸುಳೆ–ಮಗು

ಹಾರಿಕೆ ಉತ್ತರ–ನಿಜವಾದುದನ್ನು ಮರೆಮಾಚುವ ಉತ್ತರ

ಹಾಲ್ದಿಂಗಳು–ಹಾಲಿನಂತಹ ಚಂದ್ರ, ಬೆಳದಿಂಗಳು

ಹಿಮ–ಚಳಿಗಾಲ, ಮಂಜಿನಹನಿ

ಹಿಮ್ಮೆಟ್ಟಿಸು–ಹಿಂದಕ್ಕೆ ಸರಿಸು, ಸೋಲಿಸು

ಹುರಿಗೊಳಿಸು–ಹಗ್ಗಮಾಡು, ಬಲಪಡಿಸು

ಹೊಂಟೆ–ಹೊರಟೆ

ಹೊಂಡ–ಹಳ್ಳ

ಹೊದರು–ಪೊದೆ

ಹೊಸೆ–ಹುರಿಮಾಡು, ಹೆಣೆ